ಕನ್ನಡ

# ಪದ್ಯಸುಧಾದಾಯಿನಿ.

— ಇದರಲ್ಲಿ —

ಆಧುನಿಕ ಕವಿವರ್ಯರುಗಳಾದ ಶ್ರೀಗುರು ವಾದಿರಾಜ ಸ್ವಾಮಿ
ಗಳವರು, ವೆಂಕಣ್ಣ ಕವಿಗಳು, ವಾಸುದೇವ ಪ್ರಭುಗಳು,
ಶೇಷ ಪ್ರಭುಗಳು, ಕವಿ ರಾಮಕೃಷ್ಣಯ್ಯನವರು,
ತಲಚೇರಿ ವಾಸುದೇವ ಶ್ಯಾನಭಾಗರು, ಬಂಗ್ಲೆ
ನಾರಾಯಣ ಕಾಮತರವರು, ಹರಿದಾಸ
ಲಕ್ಷ್ಮೀನಾರ್ಣಪ್ಪಯ್ಯನವರು, ಇವರು
ಗಳಿಂದ ವಿರಚಿತವಾದ ಅನೇಕ
ಉತ್ತಮೋತ್ತಮವಾದ
ಪದ್ಯಗಳಿರುತ್ತವೆ.




ಮೂಲ್ಕಿಯಲ್ಲಿರುವ ಉದಿಯಾವರ ಕೊರಗ ಶ್ಯಾನಭಾಗರಿಂದ
ಸಂಗ್ರಹಿಸಿ, ಪರಿಶೋಧಿಸಿ,

ಪ. ನಾರಾಯಣ ಪ್ರಭುಗಳವರಿಂದ
ಸ್ವಕೀಯ ಉಡುಪಿ ಪ್ರಭಾಕರ ಮುದ್ರಾಯಂತ್ರದಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು.

1927.

ಇದರ ಸಂಪೂರ್ಣ ಹಕ್ಕು ಪ್ರಕಾಶಕರದಾಗಿರುತ್ತದೆ.

(All Rights Reserved.)

Price: 0—12—0] [ಬೆಲೆ: 0—12—0

# ನೋಡಬೇಕು!

|| ಕಲೌ ತದ್ಧರಿಕೀರ್ತನಾತ್ ||

ಎಂಬ ಉಕ್ತಿಯಂತೆ ಈ ಕಲಿಯುಗದಲ್ಲಿ ಪರಮಾತ್ಮನ ನಾಮಸಂಕೀರ್ತನೆಗಳಿಂದಲೇ ಮುಕ್ತಿ ದೊರೆಯುತ್ತದೆಂಬುದು ಶಾಸ್ತ್ರಸಿದ್ಧಾಂತವು. ಇದಕ್ಕನುಸರಿಸಿ ಪ್ರಸಿದ್ಧ ಪುರಾತನ ಕವಿವರ್ಯರುಗಳಿಂದ ವಿರಚಿತವಾದ ಕನ್ನಡ, ಮರಾಠಿ, ಹಿಂದುಸ್ಥಾನಿ ಭಾಷೆಯ ಅನೇಕಾನೇಕ ಅತ್ಯುತ್ತಮ ಪದ್ಯವ ಕೀರ್ತನೆಗಳನ್ನು ಬಹಳ ಕಾಲದಿಂದಲೂ, ಬಹು ಪರಿಶ್ರಮದಿಂದಲೂ ಸಂಗ್ರಹಿಸಿ **ಪದ್ಯರತ್ನಾಕರ**ವೆಂಬ ಗ್ರಂಥವನ್ನು 1. 2. 3ನೇ ಭಾಗಗಳಾಗಿ ಈ ಮೊದಲೇ ಪ್ರಕಟಿಸಲ್ಪಟ್ಟಿರುತ್ತದೆ.

ಅಂತೆಯೇ ಆಧುನಿಕ ಕವಿಗಳ ಭಕ್ತಿರಸಭರಿತವಾದ ಪದಗಳನ್ನು ಸಹ ಸಂಗ್ರಹಿಸಿ ಪ್ರಕಟಪಡಿಸಬೇಕಾಗಿ ಬಹು ಕಾಲದಿಂದಲೂ ಬಹಳ ಆಶೆಯಿಂದಿದ್ದ ನನಗೆ ಅವನ್ನು ಸಂಗ್ರಹಿಸುವುದು ಕಷ್ಟಸಾಧ್ಯವಾಗಿ ಈ ಕುರಿತು ಶ್ರೀಯುತ ಮೂಲ್ಕಿ ಕೊರಗ ಶ್ಯಾನಭಾಗರಲ್ಲಿ ಬಿನ್ನವಿಸಿ ಕೊಂಡದ್ದಕ್ಕೆ ಅವರು ಹೆಚ್ಚಿನ ಸಾಹಸಪಟ್ಟು ಸಂಗ್ರಹಿಸಿ ಅದರ ಸಂಪೂರ್ಣಹಕ್ಕು ಸಮೇತ ನನಗೆ ಕೊಟ್ಟು ನನ್ನ ಈ ಕೋರಿಕೆಯನ್ನು ನೆರವೇರಿಸಿಕೊಟ್ಟ ಬಗ್ಗೆ ಅವರಿಗೆ ತುಂಬಾ ಕೃತಜ್ಞನಾಗಿರುತ್ತೇನೆ.

ಈ ವಿನಾ, ಶ್ರೀ ಬಂಗ್ಲೆ ನಾರಾಯಣ ಕಾಮತ್‌ರವರ ಪದ್ಯಗಳನ್ನು ದೊರಕಿಸಿಕೊಟ್ಟ ಮೂಲ್ಕಿ ವೇ|| ಸದಾನಂದ ಸಾಂತಯ್ಯ ಭಟ್ಟರಿಗೂ, ತಲಚೇರಿ ಶ್ರೀ ವಾಸುದೇವ ಶ್ಯಾನಭಾಗರ ಬಾಬತು ಇನ್ನೂ ಕೆಲವು ಪದ್ಯಗಳನ್ನು ಕಳುಹಿಸಿಕೊಟ್ಟ ಶ್ರೀಯುತ ಕುಡ್ವಾ ಕೃಷ್ಣ ಕಿಣಿಗಳವರಿಗೂ ಹೆಚ್ಚಿನ ಆಭಾರಿಯಾಗಿರುತ್ತೇನೆ.

ಇದರಲ್ಲಿ ಕೊಟ್ಟಿರುವ ಪದ್ಯಗಳು ಹೊರತಾಗಿ ಇಂಥ ಕವಿಗಳ ಇನ್ನೂ ಅನೇಕ ಪದ್ಯಗಳೂ ಅಲ್ಲಲ್ಲಿ ಇರಬಹುದು. ಇದರಲ್ಲಿಲ್ಲದ ಅಂಥಾ ಪದ್ಯಗಳು ಯಾರ ಕೂಡೆಯೂ ಇದ್ದಲ್ಲಿ ಪ್ರೀತಿಯಿಂದ ಅವುಗಳನ್ನು ಕಳುಹಿಸೋಣಾಗಿ ಇದರ ದ್ವಿತೀಯ ಭಾಗವನ್ನು ಮುದ್ರಿಸಲು ಪ್ರೋತ್ಸಾಹವಿತ್ತು ತತ್ಪುಣ್ಯಭಾಗಿಗಳಾಗ ಬೇಕಾಗಿ ವಿನಯ ಪೂರ್ವಕ ವಿನಂತಿಯಾಗಿರುತ್ತದೆ.

ಪ್ರಭಾಕರ ಮುದ್ರಾಯಂತ್ರದ ಆಫೀಸು,
ಉಡುಪಿ, ತಾ. 1-7-1927.

ಇತಿ ಸಜ್ಜನವಿಧೇಯ,
**ಪ. ನಾರಾಯಣ ಪ್ರಭು,**
ಪ್ರಕಾಶಕ.

# ವಾಚಕಮಹಾಶಯರಲ್ಲೊಂದು ವಿಜ್ಞಾಪನೆ.

**ಮಹನೀಯರೇ,**

ಈ ಪುಸ್ತಕದಲ್ಲಿ ಕೊಟ್ಟಿರುವ ಪದ್ಯಸಂಕೀರ್ತನೆಗಳು ಪ್ರಯತ್ನದಿಂದ ಸಂಗ್ರಹಿತವಾದುವುಗಳು. ಇವರಲ್ಲಿ ರಚಿಸಿದ ಕವಿಗಳು ತಮ್ಮತಮ್ಮ ಕೃತಿಗಳನ್ನು ತಕ್ಕ ಪುಸ್ತಕಗಳಲ್ಲಿ ಚೊಕ್ಕಟವಾಗಿ ಬರೆದಿಡದೆಯೂ, ಅವನ್ನು ಮುದ್ರಿಸಿ ಪ್ರಚಾರಪಡಿಸದೆಯೂ, ತಮ್ಮ ಆಯುಷ್ಕಾಲವನ್ನು ಕಳೆದರು. ಈ ಎಲ್ಲಾ ಕೃತಿಗಳು ಯಾರ ಸುಪೇನ ಆದರೂ ಬಹಿರಂಗವಾಗದೆ ತನ್ನಂತೆಯೇ ಮಾಯವಾಗುತ್ತಾ, ಇನ್ನು ಸ್ವಲ್ಪಕಾಲಗಳಲ್ಲಿಯೇ ನಿಶ್ಶೇಷವಾಗುವುವೆಂದು ತಿಳಿದು ಆ ಮಹನೀಯ ಕವಿಗಳ ಲೋಕೋದ್ಧಾರ ಕರ್ತವ್ಯವನ್ನು ಚಿಂತಿಸಿದವರಾಗಿ, ಉದಾರಗುಣಸಂಪನ್ನರಾದ ದಿವಂಗತ ಶ್ರೀಯುತ ಮಂಗಳೂರು ಅಮ್ಮೆಂಬಳ ಸುಬ್ರಾಯಪೈಗಳವರು ಪ್ರೇರೇಪಣೆಯಿತ್ತ ಪ್ರಕಾರ ಇವರಲ್ಲಿರುವ ಅನೇಕ ಕೃತಿಗಳನ್ನು ಸಂಗ್ರಹಿಸುವುದರಲ್ಲಿ ನನಗೆ ಹೆಚ್ಚು ಸಮಯವೂ, ಶ್ರಮವೂ ಬೇಕಾಯಿತು. ಇದರಲ್ಲಿ ಅನೇಕ ತಪ್ಪುಗಳಿರಬಹುದಾದರೂ ಸೂಜ್ಞರು ಮುಂದಿನ ಮುದ್ರಣದಲ್ಲಿ ಸರಿಪಡಿಸಲು ಅನುಕೂಲವಾಗುವಂತೆ ತಿಳಿಸಿದರೆ ಮಹತ್ತಾದ ಉಪಕಾರವೆಣಿಸುವೆನು. ಇದಲ್ಲದೆ ಈ ವಿನಹಾ ಇನ್ನೂ ಅಚ್ಚುಹಾಕದೆ ಉಳಿದಿರುವ ದಿವಂಗತ ವೆಂಕಣ್ಣ ಕವಿಗಳ, ವಾಸುದೇವ ಪ್ರಭುಗಳ, ಇವರ ಪುತ್ರ ಶೇಷ ಪ್ರಭುಗಳ, ಕವಿ ರಾಮಕೃಷ್ಣಯ್ಯನವರ, ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯನವರ, ತಲಚೇರಿ ವಾಸುದೇವ ಶ್ಯಾನಭಾಗರ, ಬಂಗ್ಲೆ ನಾರಾಯಣ ಕಾಮತ್ ರವರ ಮೊದಲಾದ ಯೋಗ್ಯ ಸುಧಾರಕ ಕವಿಗಳ ಸಂಕೀರ್ತನೆಗಳು, ಯಕ್ಷಗಾನ, ದಂಡಕಾರ ಮೊದಲಾದ ಕಾವ್ಯರೂಪ ಪ್ರಬಂಧಗಳನ್ನು ಒದಗಿಸಿ ಕೊಡುವವರಿಗೆ ಯಾ ಅವರೇ ಅಚ್ಚುಹಾಕಿಸಿ, ಆ ಕಾವ್ಯಗಳನ್ನು ಪ್ರಚಾರಕ್ಕೆ ತರುವವರಿಗೆ ನಾನು ಕೃತಜ್ಞನಾಗಿರುವೆನು.

ಈ ನನ್ನ ಅತ್ಯಾತುರ ಲೋಕಸೇವೆಯಲ್ಲಿ ಸಹಾಯಕರಾದ ಮಹಾನುಭಾವರಾದ **ಪಾವಂಜೆಯ** ಎಸ್. ಜ. ಎಸ್. ಸಂಸ್ಕೃತ ಶಾಲಾ ಉಪಾಧ್ಯಾಯ **ಶ್ರೀಯುತ ಟಿ. ಬಿ. ವೆಂಕಟರಮಣಾಚಾರ್ಯರು** ಮತ್ತು **ಪಾವಂಜೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ಅರ್ಚಕ ವಾಸುದೇವ ಭಟ್ರವರು** ಸಹಾ ಅತೀ ಪ್ರೀತಿಯಿಂದ ಈ ಪುಸ್ತಕದಲ್ಲಿ ಸೇರಿಸಿ, ಛಾಪಿಸುವಂತೆ ಮೂಲ್ಕಿ ಬಪ್ಪನಾಡು ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯನವರು ರಚಿಸಿದ ಕೆಲವು ಕೃತಿಗಳನ್ನು ನನಗೆ ಕೊಟ್ಟಬಗ್ಗೆ ನಾನು ಅವರಿಗೆ ಅತೀ ಕೃತಜ್ಞನಾಗಿರುತ್ತೇನೆ.

ಹೀಗೆಯೇ ಮಹನೀಯರು ಇನ್ನು ಮುಂದೆಯೂ ಅಂಥಹ ಸಂಕೀರ್ತನೆಗಳನ್ನು ಒದಗಿಸಿ ರವಾನಿಸಿಕೊಡುವಂತೆ ಸಾದರದಿಂದ ಬೇಡಿಕೊಳ್ಳುತ್ತೇನೆ.

ಇದನ್ನು ಮುದ್ರಿಸಿ, ಪ್ರಕಟಿಸುವ ಸಂಪೂರ್ಣ ಹಕ್ಕು ಸ್ವಾತಂತ್ರ್ಯವನ್ನು ಉಡುಪಿ ಪ್ರಭಾಕರ ಛಾಪಖಾನೆಯ ಮುಖ್ಯಾಧಿಕಾರಿಗಳಾದ **ಶ್ರೀಯುತ ಪ. ನಾರಾಯಣ ಪ್ರಭುಗಳವರಿಗೆ** ಕೊಟ್ಟಿರುತ್ತೇನೆ.

ಇಂತಿ ವಾಚಕಶಿರೋಮಣಿಗಳ ಅತ್ಯಂತ ವಿಧೇಯ,

ಮೂಲ್ಕಿ.
ತಾ. 10—8—1925.

ಉ. ಕೊರಗ ಶ್ಯಾನಭಾಗ.

# ಅನುಕ್ರಮಣಿಕೆ.

॥ ಅನುಕ್ರಮಣಿಕೆ ಸಮಾಪ್ತಃ ॥



॥ ಶ್ರೀ ಗಣೇಶಾಯ ನಮಃ ॥



ಲಕ್ಷ್ಮೀಪತೇ ಕಮಲನಾಭ ಸುರೇಶ ವಿಷ್ಣೋ ।
ವೈಕುಂಠ ಕೃಷ್ಣ ಮಧುಸೂದನ ಪುಷ್ಕರಾಕ್ಷ ॥
ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ ।
ದೇವೇಶ ದೇಹಿ ಕೃಪಣಸ್ಯ ಕರಾವಲಂಬಂ ॥ ೧ ॥

# ಶ್ರೀಗುರುವಾದಿರಾಜಕೃತ ಪದಗಳು.

## ॥ ಸ್ವಪ್ನಾಧ್ಯಾಯ ॥

(ಈ ಸ್ವಾಮಿಯವರಿಗೆ ಶ್ರೀಹಯಗ್ರೀವದೇವರು ಪ್ರತ್ಯಕ್ಷವಾಗಿ ಹೇಳಿದ ಸದ್ಬೋಧೆಯು.)

॥ ೧ ॥ ॥ ಭಾಮಿನಿಷಟ್ಪದಿ ॥

ನೆನವೆ ನಾರಾಯಣನ ಪಾದವ । ನೆನವೆ ನಾರಾಯಣಿಯ ಚರಣವ । ನೆನದು ಪ್ರಾಣನ ಪದವ ಭಾರತಿದೇವಿಯಂಘ್ರಿಯನೂ ॥ ನೆನದು ಶ್ರೀಹಯವದನ ಸ್ವಪ್ನದೊ । ಳೆನಗೆ ಪೇಳಿದ ಪದವ ಲೋಕದ । ಜನಕೆ ಸಂಗ್ರಹವನ್ನು ಮಾಡುವೆನವನ ಕೃಪೆಯಿಂದಾ ॥ ೧ ॥ ಎನ್ನ ಸೇವೆಯ ಬೇಸರದೆ ದಿನ । ದಿನ್ನ ಮಾಡುವ ಮಾನವರ್ಗೆ ಪ್ರ । ಸನ್ನನಹೆನು ಕೃಪಾಳು ಎಂಬುದು ಎನಗೆ ಬಹುಬಂದೂ ॥ ಮುನ್ನದಲಿ ಬೇಸತ್ತುಕೊಂಡರೆ । ಮಣ್ಣು ಹೊಯ್ಸದೆ ಬಿಡೆನು ಅದರಿಂ । ದುನ್ನತೋನ್ನತ ಪೂಜೆಗಳನನುದಿನದಿ ಮಾಡೆಂದಾ ॥ ೨ ॥ ಕೇಳು ಮಾನವ ನಾನು ಭಕ್ತರು । ಪೇಳಿದಂದದಿ ನಲಿವೆ ಅವರನು । ಲಾಲಿಸುತ ಪಾಲಿಸುತ ಬಿಡೆನೆಂಬುದು ವಿದಾಪವಿದೂ ॥ ಆಲಸವ ಮಾಡಿದಡೆ ತಾಳೆನು । ಕಾಲಕಾಲದೊಳೆನ್ನ ಪೂಜೆಯು । ಮೇಲು ಮೇಲೆನೆ ಮಾಡು ಶ್ರೀ ಕೊಂಡಾಡು ಕುಣಿದಾಡೂ ॥ ೩ ॥ ದೀನ ಮಾನವ ನಾಡು

ಭಕ್ತರ । ಧೀನವೆಂಬುದು ತಪ್ಪದವರೆನ । ಗೇನ ಮಾಡಿದರದನು ಕೈ
ಕೊಂಬೆನು ಸರಾಗದಲೀ ॥ ಹಾನಿಗಳ ಕೊಡಿಸುವೆನು ಎನ್ನೊಳುದಾ ।
ಸಿನವ ಮಾಡಿದರೆ ನೀ ನೆರೆ । ಜಾಣನಾಗಿರು ಮರೆಯದೆನ್ನಯ ಪಾದ ನೆನ
ವುತಿರೂ ॥ ೪ ॥ ಪಿಕ್ಕ ದೇವರ ತೆರದಿ ನಾ ಮರೆ । ಹೊಕ್ಕವರ ಬಿಡೆನೆನ್ನ
ಕರುಣಕ । ಟಾಕ್ಷವೀಕ್ಷಣ ಖಳರ ಶಿಕ್ಷಿಸಿ ಎನ್ನವರ ಪೊರೆವೇ ॥ ಸೊಕ್ಕಿ
ನಡೆದರೆ ಅವರ ತಕ್ಕವೆ । ದುಃಖಗಳ ತೋರಿಸುವೆ ಕೆಡಿಸೆನು । ದಿಕ್ಕುದೆಶೆ
ನೆರೆ ನಂಬಿದವರೊಳುಪೇಕ್ಷೆ ಸಲ್ಲದಲ್ಲೈ ॥ ೫ ॥ ಅಂಜಬೇಡೆಲೆ ಮನುಜ ನಾ
ಜಡ । ಕುಂಜರನ ಕ್ಕಾದವನು ಪರಂಗೆ । ಸಂಜೆಯುನು ತೋರಿಸಿ ಧನಂ
ಜಯನಸುವ ಪೊರೆದವನೂ ॥ ಕಂಜಲೋಚನೆ ಕರೆಯೆ ವಸ್ತ್ರದ । ಪುಂಜ
ಗಳ ಕೊಟ್ಟವಳ ಸಲಹಿದೆ । ಭಂಜಿಸಿದೆ ನಂಜುಂಡನಾ ವೈರಿಯನು ನಾನರಿ
ಯಾ॥ ೬ ॥ ಜಲಧಿಯೊಳಗಾಡಿದೆನು ಬೊಮ್ಮಗೆ । ಕಲಿಸಿದೆನು ಶ್ರುತಿತತಿಯ
ನೀರೊಳು । ಮುಳುಗಿದದ್ರಿಯನೆತ್ತಿಕೊಟ್ಟೆನು ಸುರರ ಸುಧೆಗಾಗೀ ॥
ಇಳೆಯ ವೈರಿಯ ಕೊಂದೆ ಪಿತನಿಂ । ದಳಿವ ಶಿಶುವನು ಪೊರೆದೆ ಬಳಿಕಾ ।
ಬಲಿಯ ಬೇಡಿದೆ ರಾಯರನು ತಲೆಕೆಳಗು ಮಾಡಿದೆನ್ನೈ ॥ ೭ ॥ ಅಂಬುಧಿಯ
ನಂಬೆಸದೆ ಧಾತ್ರಿಯ । ಕಂಬನಿಯ ತೊಡಿಸಿದೆನು ಸುಮಿತ್ರ ತ್ರಿ । ಯಂಬ
ಕನ ಹಿತಕಾಗಿ ತ್ರಿಪುರದ ವಧುಗಳನು ಕೆಡಿಸೀ ॥ ಇಂಬುಗೊಡದೇ ಕಲಿ
ಸುಧರ್ಮಕ । ದಂಬಗಳ ತುಂಬಿಸಿದೆ ಎನಗೆಣೆ । ಎಂಬ ದೇವನದಾರು
ಇನ್ನೀರೇಳು ಲೋಕದಲೀ ॥ ೮ ॥ ಎನ್ನ ಪಾದೋದಕವು ಶಿವ ಪಾ । ವನ್ನ
ವೆನುತಾದರದಿ ಧರಿಸಿದ । ನೆನ್ನ ಕರುಣದ ಬಲದಿ ವಿಧಿ ತಾ ವೇದನೋದಿ
ದನೂ ॥ ಎನ್ನರಸಿ ರಮೆ ಸಕಲಗುಣದ ಸಂ । ಪನ್ನೆ ಸುರಮುನಿಮಾನ್ಯೆ
ಶ್ರುತಿಶತ । ವರ್ಣ್ಣನೆನುತಲಿ ಮನದಿ ಮನ್ನಿಸಿ ಮುನ್ನ ವರಿಸಿದಳೂ ॥ ೯ ॥ ಎನ್ನ
ವೈಕುಂಠಾದಿ ಲೋಕವೆ । ಜನ್ನಂಗೆ ಭವಬಂಧ ಮೋಚನ । ಎನ್ನ ನಾಮ
ಸ್ಮರಣೆ ಪಾಪಾಟವಿಗೆ ಕಾಳ್ಗಿಚ್ಚು ॥ ಇನ್ನು ಅನ್ಯರ ತೊರೆದು ಮನವನು ।
ಎನ್ನ ಚರಣದೊಳಿಟ್ಟು ಸಂತತ । ಎನ್ನ ಭಕುತಿಯ ಮಾಡು ನೀ ಕೊಂಡಾ
ಡು ಕುಣಿದಾಡೂ ॥ ೧೦ ॥ ಸ್ನಾನಮೌನಧ್ಯಾನಗಳ ಅನು । ಮಾನವಿಲ್ಲದೆ
ಮಾಡುವುದರಿಂ । ದೇನು ಹಾನಿಯು ನಿನಗೆ ಬಾರದು ಎನ್ನ ಕರುಣದಲೀ ॥
ದೀನತನುವನು ಪೊರೆಯದಿರು ಬಲು । ಹೀನಜನರೊಡನಾಡದಿರು ಸು ।
ಜ್ಞಾನಿಗಳಿಗನುಸರಿಸಿ ಎನ್ನ ಚರಿತ್ರೆಗಳ ಕೇಳೂ ॥ ೧೧ ॥ ನೋಡು ಪುಣ್ಯ

ಕ್ಷೇತ್ರಗಳ ನೆಲೆ । ಯಾಡು ಕೀರ್ತಿಯ ಪಾಡು ಭಕ್ತಿಯು । ಕೂಡು ಕಾಡುವ ದುರಿತಗಳ ನೀಡಾಡು ಅನುದಿನದೀ ॥ ಮಾಡು ಎನ್ನಂಘ್ರಿಗಳ ಸೇವೆಯ । ಬೇಡು ಮೇಲಣ ಮುಕ್ತಿಪದಗಳ । ನೀಡು ಸಂತತ ಎನ್ನ ಸುಕಥಾಮೃತವು ಸುಜನರಲೀ ॥ ೧೨ ॥ ಗಾನರಸದಿಂ ಕೂಡಿ ಎನ್ನ ಮ । ಹಾನುಭಾವರು ಸ್ತುತಿಸುವರು ಭವ । ಕಾನನಕ್ಕೆ ಕೃಶಾನು ದುರಿತ ತಿಮಿರ್ಕಿದೆ ಭಾನೂ ॥ ನಾನು ನನ್ನದಿದೆಂಬ ಮನದಭಿ । ಮಾನವನು ಬಿಡು ಕಂಡಕಂಡರ । ನೀನು ಯಾಚಿಸಿ ದುಃಖಸಾಗರದೊಳಗೆ ಮುಳು ಗದಿರೂ ॥ ೧೩ ॥ ದೇವರೆಲ್ಲರು ಎನ್ನ ದಾಸರು । ಶ್ರೀರಮಣಿ ಎನ್ನರಸಿ ಜಗ ದಾ । ಜೀವರಾಶಿಯ ನಾನೆ ಪುಟ್ಟಿಸಿ ಮಗುಳೆ ರಕ್ಷಿಪೆನೂ ॥ ಲಾವಕರ ಕೊಲಿಸುವೆನು ನರಕವ । ನೀವೆ ಸ್ವರ್ಗವನಿತ್ತು ಸುಜನರ । ಕಾವೆನಿದು ವೇದಾಂತ ಸಿದ್ಧಾಂತದ ರಹಸ್ಯ ಕಣಾ ॥ ೧೪ ॥ ಈಶ ಸರ್ವೇಶ್ವರನು ಎನ್ನದೆ । ದೋಷವಮಾಂಡೂಕೋಪನಿಶತು ಮ । ತ್ರೀಷ ಭೂತಾಧಿಪತಿ ಎನ್ನದೆ ಕಾಣ್ವರುಪನಿಷತೂ ॥ ಈಶ ಸರ್ವೇಶಾನು ಎಂಬ ವಿ । ಲಾಸದಿಂ ಋಗ್ವೇದ ಮೊದಲೆ ರ । ಮೇಶ ತನ್ನಯ ಪೂರ್ವಋಷಿಗಳಿಗೀಡ್ಯನೆನುತಿದಕೋ ॥ ೧೫ ॥ ಅಗ್ನಿದೇವರೊಳಧಮ ಮಿಕ್ಕ ಸು । ರರ್ಗಳೆಲ್ಲರು ಮಧ್ಯಮರು ಸ । ರ್ವಜ್ಞ ವಿಷ್ಣುವೆ ಪರಮಪೂರುಷನೆಂಬ ಋಗ್ವೇದಾ ॥ ಬಗ್ಗಿಸಿತು ಕುಜ ನರ ಶಿರಂಗಳು । ಸುಗ್ಗಿಯೆನಿಸಿತು ಜ್ಞಾನಸರೆಗಪ । ವರ್ಗವೀವೆನು ನಾನು ನನಗೆಣೆಯಾರು ತ್ರಿಜಗದೊಳೂ ॥ ೧೬ ॥ ದ್ವಾಸುಪರ್ಣಾ ಎಂಬ ಶ್ರುತಿ ಸಕ । ಲೇಶ ತಾನೆಂಬೊಂದು ಖಗ ತಾ । ಕ್ಲೇಶಗಳನನುಭವಿಪ ನೊಂದೇ ಜೀವನೆಂಬ ಖಗಾ ॥ ದೇಶದೇಶದೊಳುಣುತಿಹುದು ಮ । ತ್ತಾಶ ರೀರದೊಳಿದ್ದಡೆಯು ಜಗ । ದೀಶನೆಂಬೊಂದೊಂದು ಖಗ ತಾ ಲೇಸನುಣು ತಿಹುದೂ ॥ ೧೭ ॥ ಇಂತು ಸ್ಮೃತಿಗಳು ಕೆಲವು ಲಕ್ಷ್ಮೀ । ಕಾಂತ ಚಿಂತಾ ರಹಿತ ಬೇರೆ ನಿ । ಶ್ಚಿಂತೆಯುಲಿ ಮನಗುಂದಿ ಬಳಲುವ ಜೀವಗಣ ಬೇರೇ ॥ ಇಂತು ತಿಳಿಯಲು ಬೇಕು ನೋಡಿರೊ । ಕಂತುಪಿತ ಖಳರಟ್ಟಿ ಭಜಕರ । ಸಂತವಿಸುವ ಸ್ವಾಮಿ ಎನುತಿದೆ ಕೆಲವು ವೇದಗಳೂ ॥ ೧೮ ॥ ಹಿಂದೆ ನಾನೇ ಪ್ರಾಣನೆಂದವು । ರೇಂದ್ರ ನಾಶವವಡದ ತತ್ಸ । ಮ್ಮಂಧ ಬಾಹುಳ್ಯದಲಿ ನಾನೇ ಪ್ರಾಣನೆಂದೈಸೇ ॥ ಎಂದು ತೋರುವ ಬಲ್ಲ ಬುಧರದ । ರಿಂದ ನಾನೇ ಬ್ರಹ್ಮನೆಂಬ ಮು । ನಿಂದ್ರವೃತ್ತಿಯ ಬ್ರಹ್ಮಸಮ್ಮಂಧದಲಿ ಎನ

ಬೇಕೂ ॥ ೧೯ ॥ ಇವನು ತಾನೆಂದೊರೆವುದೀರ್ಶೈ । ರವದ ಸುಡಿ ಇದನೆಲ್ಲ ತಾ ಬ । ಲ್ಲವರು ಗ್ರಾಮದಿ ಜನರ ಕೂಟದಿ ಕುರುಡರೆಂದೆನರ್ಶೈ ॥ ದಿವಿಜ ದನುಜರು ಕೂಡಿ ತಮ್ಮೊಳ । ಗಮರ ಶಿಂಧುವ ಕಡೆಯಲೆಂದಂ । ದವರ ಮಾತನು ಕೇಳಿ ಮಿಗೆ ಮರುಳಹರಿ ಕೋವಿದರೂ ॥ ೨೦ ॥ ಬೊಮ್ಮ ಹೆಮ್ಮಗ ರುದ್ರ ಮೊಮ್ಮಗ । ಸುಮ್ಮನಸರಿಗೆ ಸುಧೆಯನುಣಿಸಿದೆ । ನೊಮ್ಮೆ ಸುರ ಮಯ ಕಾಲಚಕ್ರವ ನಾನೆ ನಡೆಸುವೆನೂ ॥ ಅಂಬರೀಷಗೆ ಭಾಗ್ಯವಿತ್ತಾ । ಹೆಮ್ಮರನ ಕಿತ್ತಿರಲು ದಿವಿಜರ । ಹೆಮ್ಮೆಯನು ನಾನೋರ್ವನೇ ಬಿಡಿಸಿ ದೆನು ಕೇಳ್ಮನುಜಾ ॥ ೨೧ ॥ ನೋಡು ರಾಮನ ಸೇವೆಗಮರರು । ಕೋಡ ಗರ ತನುವಾಂತು ಗಿರಿಗಳ । ಕೋಡೆಕಲ್ಗಳ ಕಿತ್ತು ತಲೆಯಲಿ ಪೊತ್ತು ಮನವಿತ್ತೂ ॥ ನಾಡಿಂಯ ಜಲಧಿಯಲಿ ಸೇತುವ । ಮಾಡಿ ತದ್ಭಟರೆನಿಸಿ ಕೊಳ್ಪರೆ । ಮೂಢನಾಗಿರಬೇಡ ನಾನೇ ಸಕಲ ಸುರರೊಡೆಯಾ ॥ ೨೨ ॥ ದನುಜ ಮತ್ತೇನಾದ ತಾನೇ । ದನುಜರಿಪು ಸಜ್ಜನರ ಪಾಲಿಪೆ । ನೆನುತ ವಸುದೇವನಲಿ ಅವತರಿಸಿದೆನು ಭೂತಳದೀ ॥ ಜನಿಸಿದವರೆನಗಗ್ರಪೂಜೆಯ । ಮುನಿಗಳನುಮತದಿಂದ ಮಾಡಿದ । ರೆನೆ ಜನಾರ್ದನ ದುರಿತಮರ್ದನ ನಾನೆ ಸುರರೊಡೆಯಾ ॥ ೨೩ ॥ ನಾನೆ ದುಃಖವಿಹೀನನಾಗಿಹೆ । ದೀನ ಜೀವನು ದುಃಖಭರಿತನು । ನೀನೆ ನೋಡುತನಾದಿಹಾನಿಗಳಿಂದ ಜೀವ ರನೂ ॥ ಏನನೆಂಬೆನು ರೋಗರುಜೆಗಳು । ಮಾನವಂಗೇ ಬರುತಿರುವದನು । ಸ್ವಾನುಭವಿಸುವದಿದ ನುಡಿವರೇ ಕಿರಿದುಬಲ್ಲವರೂ ॥ ೨೪ ॥ ನಾನು ನನ್ನಯ ಶಕ್ತಿಯಿಂದಲಿ । ದಾನವರ ಮರ್ದಿಸುವೆ ಜೀವಂ । ಗಾನೆ ಶಕ್ತಿಯ ಕೊಟ್ಟ ರುತಿಟಲ್ಲದಡೆ ಜಡಕೆ ಸಮಾ ॥ ಕಾಣು ಕುಂಟರ ಕಾಣು ಕುರುಡರ । ಕಾಣು ಕಿವುಡರ ಕಾಣುಮೂಗರ । ಕಾಣೆ ತನಗೆಯು ಶಕ್ತಿಯುಳ್ಳಡೆದೇಕೆ ಬಿಡಿಸಿ ಕೊಳಾ ॥ ೨೫ ॥ ನಾನು ಸದ್ಗುಣ ಪೂರ್ಣವಂದ್ಯನು । ಹೀನಗುಣದಲಿ ಜೀವನಿಂದ್ಯನು । ನಾನೆ ಲಕ್ಷ್ಮೀರಮಣ ಜೀವನು ಶತದರಿದ್ರನಲ್ತೈ ॥ ನಾನೆ ಸುರಮುನಿಸೇವ್ಯ ಚರಣನು । ಕಾಣು ಜೀವಖಳಾಂಘ್ರಿಶರಣನು । ನಾನು ಸಾವಿಲ್ಲದವ ಜೀವರ ಮೃತ್ಯು ಕೊಲುತಿದೆಲ್ತೈ ॥ ೨೬ ॥ ನಾನು ಸುಜ್ಞನು ಜೀವನಜ್ಞನು । ನಾನು ಮುಕ್ತನು ಜೀವ ಬದ್ಧನು । ನಾನು ಪಾತಕರಹಿತ ಜೀವನು ಪಾಪಭರಿತನಲ್ತೈ ॥ ನಾನು ಜನ್ಮವಿದೂರ ನಾನಾ । ಯೋನಿಯಲಿ ಜನಿಸುವನು ಜೀವನು । ನಾನೆ ನಾರಾಯಣನು ಜನಕನ ಹೆಸರು ಜೀ

ಹೇಳಾ || ೨೭ || ದೇವಕಿಯು ಬಸುರಿಂದ ನಾನೇ । ದೇವಕಾರ್ಯಕೆ ಬಂದ ಬಗೆಯನು । ಭಾವಕೋವಿದರೆಲ್ಲ ನೋಡಿದ ಮೂಲರೂಪವನು || ಜೀವರಿಗೆ ತೋರಿಸಿದೆ ಭುಜಕರ । ಭಾವ ವೈಕುಂಠದ ಶರೀರವ । ತೋರಿ ಶ್ರೀವತ್ಸಲನ ನೋಡುವೇಕ್ಷೆಯು ಬಿಟ್ಟು ಪೊರೆವಲಿಯಾ || ೨೮ || ಹಿಂದೆ ಜಗವನು ನನ್ನ ಬಸುರಲಿ । ನಂದಗೋಪನ ರಾಣಿ ಕಾಣಳೆ । ಅಂದು ಎನ್ನಯ ವಿಶ್ವ ರೂಪವ ಪಾರ್ಥ ಕಂಡನಲ್ಲೆ || ಮುಂದಮುತಿಯೆ ನಿಧಾನಿಸುತ್ತಿರ । ಲಂದು ಎನ್ನಯ ದೇಹವಳಿದರೆ । ಬಂದುದೆಲ್ಲ ಚರಾಚರಂಗಳಿಗಂದೆ ನಿರ್ಬಂಧಾ || || ೨೯ || ಮಂದಮತಿಯೋ ಶ್ರೀನೃಸಿಂಹಗೆ । ತಂದೆಯಾವನು ತಾಯಿಯಾವಳು । ಮಂದರವು ಧರಿಸಿರ್ದ ಕೂರ್ಮನ ಪಿತನು ತಾನ್ಯಾರು || ಹಿಂದೆ ಬೊಮ್ಮನ ಪ್ರಳಯಜಲಧಿಯೊ । ಳೊಂದೆ ವಟಪತ್ರದಲಿ ಮಲಗಿದೆ । ಚಂದದಿ ಶ್ರೀರಮಣ ನಾ ನಿತ್ಯದೊಳು ನಿತ್ಯನಲ್ಲೆ || ೩೦ || ಇಂತು ಸಂತತ ವಿವಿಧ ಧರ್ಮದ । ತಿಂಥಿಣಿಯನುತ್ತಮಂಗೆಂತು । ಸಂತತೀಪ್ರಿಯ ಭ್ರಾಂತಜೀವ ಪ್ರಕಾಶ ತಮವಹುದೇ || ಸಂತರಿಂದ ನಿರಂತರದಿ ವೇ । ದಾಂತಶ್ರವಣವ ಮಾಡು ದುರ್ಮತ । ಭ್ರಾಂತಿಯನು ಬಿಟ್ಟೆನ್ನ ಗುಣವನು ನೆನವುತಿಹು ದೆಂದಾ || ೩೧ || ಕುಂಭದಗ್ರೋಪಾದಿಯಿರ್ದರು । ಡಂಭಿಸುತ್ತಳಿವಹುದೆ ದೇಹದ । ಡಿಂಬ ಪಡೆದರು ವ್ಯಾಪ್ತಿ ಚಿತ್ರಕೆ ಯಾಕೆ ಸಲ್ಲದಲ್ಲೆ || ಅಂಬರಾ ಗ್ರದಿ ಸ್ವರ್ಗವೇರಿ ನೀ । ನುಂಬೆ ಸುಖಗಳನೆಂತು ಮಾನವ । ಕುಂಭಿಪಾಕ ಕ್ಕಿಳಿದು ಯಾತನೆ ಎಂತು ಕೈಕೊಂಬೇ || ೩೨ || ಎಲ್ಲಿ ಪೋಪುದು ದೇಹ ದಲ್ಲಿಯು । ದೆಲ್ಲಿ ನೆಲಸಿಹ ಜೀವನೆಂಬುವ । ದೆಲ್ಲ ವಲ್ಲ ಕ್ಷಣಕ್ಷಣಕೆ ಬಲು ವೃತ್ಯುವಹುದಾಗೀ || ಇಲ್ಲ ಜಡದೇಹಕ್ಕೆ ಒಡೆಯುತೆ ತ । ನ್ನಲ್ಲಿ ತುಂಬಿದ ಚಿತ್ತ ನಡೆಯದೆ । ಸಲ್ಲದೇನ್ನೆ ಧರ್ಮದಂಗಳೆ ಶಕ್ತಿ ಎಂಬ ಗುಣಾ || ೩೩ || ಮಾಯೆ ಶಕ್ತಿಯಿಂದಾಯಿತೆಂಬುದ । ಮಾಯೆ ತಾ ಜಡನಾದ ಕಾರಣ । ಹೋಯಿತಾನಿನ್ನೇನುಪಾಯದಿ ಮತವ ನಿಲಿಸುವೆನೀ || ತಾಯಿಹೊಟ್ಟೆಯು ಹೊಕ್ಕಡೆಯು ನುಡಿ । ದಾಯುತವನಂತವರು ಬಿಡುವರೆ । ವಾಯುಮತವೇ ಮತವು ತ್ರೈಜಗದೊಳಗೆ ನಿಜವೆಂದಾ || ೩೪ || ಒಂದು ಚಿಂತೆಯು ಬಂದು ದೈಸೆ ಮ । ತ್ತೊಂದು ಚಿಂತೆಯು ಸ್ನಾನವಿಲ್ಲದೆ । ಬಂದು ಭೋಜನ ಜಪತಪ ಧ್ಯಾನಗಳ ಮಾಡಿತಲ್ಲೆ || ನಿಂದ್ಯದೇಹೋಪಾಧಿಯಿಂ ಸಂ । ಬಂಧಿಸಲು ಬೇರೇ ಬೇರೆಂದು । ಮಂದಾಕೃತ ಪೃಥಾ ಪೋಯಿತಕೃತ ಬಂದ್ಯುದೆಲ್ಲೆ || ೩೫ ||

ಒಂದು ದೇಹದಲೊಂದು ಚಿತ್ಸ । ಮ್ಮಂಧವಿಲ್ಲದೆ ದೇಶದೇಶವ । ಹೊಂದಿ ಕೊಂಡಿಹ ಚಿತ್ತನಿಂದಲೆ ಜೀವವೆಂಬುವದೇ ॥ ಮಂದಮರಣದ ವಾಯು ಎಂಬುದು । ಬಂದು ಹೋಯಿತು ಈ ವಿಯೋಗವಿ । ದೆಂದು ದೇಹಕೆ ಬಹುದು ಚಿತ್ತ್ವವ್ಯಾಪ್ತನೆಂಬವಗೇ ॥ ೩೬ ॥ ಜೀವಭೇದವನಾದಿ ಎಂಬುದ । ನಾವ ಬಗೆಯಲಿ ಬೊಮ್ಮ ತಾನ್ಯೆ । ಜೀವಭಾವವನೈದಿತೆಂಬೀ ನಿನ್ನ ಮಾಯುವಲ್ಲೈ ॥ ತೀವಿಗಡಸಿದ ಬೊಮ್ಮದಂಗಳೆ । ನೋವು ನೋಡುವ ಇಂದ್ರಿಯಂಗಳ । ಜೀವರಾಶಿಯು ತೆಗೆವದೆಂತ್ಯೆ ನಿರ್ವಿಕಾರನಲ್ಲೈ ॥ ೩೭ ॥ ಇಂತು ದುರ್ವರ್ತ ಜೀರ್ಣಕಂತೆಯು ವಿ । ತಂತುವ್ಯಾತು ಮಹಂತರಿದಿರಿಲಿ। ನಿಂತ ಹೆಜ್ಜೆಯು ನಿಲಿಸದಂತೆ ಭ್ರಾಂತುಗೊಳಿಸಿತಲ್ಲೈ ॥ ಸಂತನಿವನೆಂತಾ ಹನಾ ವೇ । ದಾಂತವನೆ ಪುಸಿಯೆಂದು ನಿನಾ । ಪಂಥಗಳನು ಮಹಾಂತ ರಿದಿರಿಲಿ ಎಂತು ನಿಲಿಸುವೆನ್ಯೆ ॥ ೩೮ ॥ ಮುಕ್ತಿ ಎಂಬುದು ಮರ್ತ್ಯರಿಂಗೆ ಎ । ಸ್ನರ್ಥಿಯ ಸ್ಥಾನಗಳು ಭಕ್ತಿಯು । ಶಕ್ತಿಯಿಂದಲೆ ಹತ್ತಿ ಮೃತ್ಯುವನೊತ್ತಿ ನಿಜಪದವಾ ॥ ಹತ್ತಿರೇ ಸುಖಿಸುವದು ಭೃತ್ಯರಿ । ಗಿತ್ತಭೇದವ ನಿತ್ಯಮರ್ತ್ಯ ನು । ವ್ಯರ್ಥ ಪೊಗಳಿಸುವರೆ ಮನುಜ ಪ್ರಮತ್ತನಲ್ಲವಲ್ಲೈ ॥ ೩೯ ॥ ಮರ್ತ್ಯ ಮೃತ್ಯುವ್ಯಾಳಭೀತನೆಂ । ಬುಕ್ತಿಯರ್ಥವ ನೋಡು ಮತ್ಪದ । ಪ್ರಾಪ್ತಿಯೇ ಕೈವಲ್ಯ ಗಡ ಮೃತ್ಯುವಿಗೆ ಶತ್ರು ಗಡಾ ॥ ಮತ್ತೆ ಮರುಳಾಗದಿರು ನಾ ಸ । ರ್ವೋತ್ತಮನು ಭೃಗು ಮೆಟ್ಟಿದರೆ ಎ । ನ್ನುತ್ತಮತ್ಪದ ರಕ್ಷೆಗಾಗಿಯೆ ತಾಳಿಕೊಂಡೆನೆಲ್ಲೈ ॥ ೪೦ ॥ ಎಲ್ಲ ಇಲ್ಲೆಂಬುವ ನುಡಿವುದ । ಕ್ಕಿಲ್ಲ ನಾಲಿಗೆ ಕೇಳ್ವ ಕರ್ಣಗ । ಳಿಲ್ಲ ಪೇಳ್ವಾಚಾರವಿಲ್ಲ ವಿವೇಕ ಮುನ್ನಿಲ್ಲಾ ॥ ಕಲ್ಲ ಕಂಭವ ಪೋಲ್ವ ನಿನ್ನನು । ಬಲ್ಲಿದರು ಬಲ್ಲವರೊಳಪ್ರತಿ । ಮಲ್ಲರೆನ್ನಾಳು ಗಳು ಸೋಲಿಸಿ ಜಳ್ಳ ಮಾಡುವರೈ ॥ ೪೧ ॥ ಈಗಲುಂಟನ್ನೊಂದು ಕಾಲದಿ । ಪೋಗುವದು ಜಗವೆಂದರದು ನೀ । ನಾಗದಲ್ಲೈ ಕಾಲಕಪ್ರತಿ ಎಂತು ಸಲ್ಲುವದೈ ॥ ಸ್ವಾಗಮುವನರಿಯದವನೆಂದು । ಬೇಗವನು ಬ್ಯಾಗಿಕ್ಕಿ ನಿನ್ನನು । ಪೋಗೆನುತ ಪೊರಗಟ್ಟುವರಲ್ಲೈ ಎನ್ನ ಕಿಂಕರರೂ ॥ ೪೨ ॥ ಇಷ್ಟದೈವವೆನುತ್ತ ನೀ ಮನ । ಮುಟ್ಟಿ ಎನ್ನನು ಭಜಿಸು ದಿವಿಜರ । ಶ್ರೇಷ್ಠ ಜನರಿಗೆ ಗುರುಗಳೆಂದವರಂಘ್ರಿಗಭಿನಮಿಸೂ ॥ ನಷ್ಟಬಾರದ ತೆರದೆ ನಿನ್ನನು । ಘಟ್ಟಿಯಾಗಿಯೆ ರಕ್ಷಿಸುವೆ ನಾ । ದೃಷ್ಟಿಗೋಚರನಹೆನು ಮುಕ್ತಿಯ ಕೊಟ್ಟು ಸಲಹುವೆನೂ ॥ ೪೩ ॥ ಎನ್ನ ಗುಣಗಣಗಳನು

ಪೊಗಳುವ । ಪೂರ್ಣಪ್ರಜ್ಞರ ಮತವೆ ಸುಮತ ಪ್ರ । ಪನ್ನ ಕರ್ಣಾಮೃತ ಸಮಾನ ವಿಮುಕ್ತಿಪಥವಹುದೂ ॥ ಅನ್ಯಮತಗಳ ಜರದು ನೀನೀ । ಪುಣ್ಯ ಮರುತನ ಮತವ ಮನದಲಿ । ಮನ್ನಿಸುತ ಮನನವನು ಮಾಡಲು ನಿನ್ನ ಸಲಹುವೆನೂ ॥ ೪೪ ॥ ಇಂತು ಸ್ವಪ್ನಾವಸ್ಥೆಯಲಿ ಮಾ । ಕಾಂತ ಕರುಣಾವಂತ ನಿಜಗುಣ । ಶಾಂತನತಿಬಲವಂತ ಶ್ರೀಹಯವದನ ಕೃಪೆಯಿಂತೋ ॥ ಸಂತಸದಿ ಚಿಂತಿಸುತ ತನಗೆ ಮಾ । ರಾಂತ ಖಳರೆದೆಗೊಂತ ಶುಭಗುಣ । ವಂತ ವಾದಿರಾಜೇಂದ್ರ ಯೋಗಿಗೆ ಪೇಳ್ದ ಪದಗಳಿವು ॥ ೪೫ ॥ ವಾದಿರಾಜಗೆ ದೇವ ಕಲಿಸಿದ । ಮಾಧವನ ಗುಣಮಾಲೆಯನು ಬರ । ದೋದಿ ಪಠಿಸುವ ಮಾನವರ್ಗೆ ವಿಮುಕ್ತಿ ಪಥವಹುದೂ ॥ ವಾದಶಕ್ತಿಯ ಕೊಟ್ಟು ತನ್ನಯ । ಪಾದಪದ್ಮವ ನೆನೆವವರ ಮ । ಹಾದಯಾಂಬುಧಿ ಹಯವದನ ಕೃಪೆಯಿಂದ ಸಲಹುವನೂ ॥ ೪೬ ॥ ಶ್ರೀ೪ ॥

॥ ೨ ॥ ರಾಗ, ಶಂಕರಾಭರಣ [ಧಾಟಿ:- ನಾರಾಯಣಾ । ಹರಿ] ತ್ರಿವುಡೆತಾಳ

ದೇವರಾ ದೇವನೇ ಬಾರೋ । ದೇವಕೀ ನಂದನ ಬಾರೋ । ದೇವೇಂದ್ರನಾ ಸಲಹಿದಾ । ದೇವ ಬಾರೋ ಹರಿಯೇ ॥ ನಾರಾಯಣಾ । ಹರಿನಮೋ ನಾರಾಯೇಣಂ॥ ೧ ॥ ಮತ್ಸನಾಗಿ ಶ್ರುತಿಯ ತಂ । ದಿತ್ತ ಭಕ್ತ ವತ್ಸಲನ । ಭೃತ್ಯ ಸತ್ಯವ್ರತ ನಮ್ಮ : ಸಖ್ಯ ಬಾರೋ ಹರಿಯೇ ॥ ಹರಿ ನಾರಾಯಣಾ ॥ ೨ ॥ ಸಾಂದ ಸುರರಿಗಾಗೀ । ನೀರೊಳಗೆ ಮುಳುಗಿದ । ಗಿರಿಯನ್ನುದ್ಧರಿಸಿದ । ಕೂರ್ಮ ಬಾರೋ ಹರಿಯೇ ॥ ಹರಿ ನಾರಾಯಣ ॥ ॥ ೩ ॥ ಧರೆಯಾನುದ್ಧರಿಸಲು । ವರಹಾನಾಗಿದೆ ದೇವಾ । ಹಿರಣ್ಯಾಕ್ಷನನು ಶೀಳ್ದ । ಧೀರ ಬಾರೋ ಹರಿಯೇ ॥ ಹರಿ ನಾರಾಯಣ ॥ ೪ ॥ ನಂಬಿದ ಭಕ್ತರ ಕಾವಾ । ನೆಂಬ ಕರುಣದೀ ಕಲ್ಲಾ । ಖಂಭದಿಂದುದಿಸೀದ । ಡಿಂಬ ಬಾರೋ ಹರಿಯೇ ॥ ಹರಿನಾರಾಯಣ ॥ ೫ ॥ ವಾಮನಾ ತಾ ವೇಷನಾಗಿ । ಭೂಮಿಯನಳದುಕೊಂಡ । ದಾನವರ ಸೋಲಿಸೀದ । ಜಾಣ ಬಾರೋ ಹರಿಯೇ ॥ ಹರಿ ನಾರಾಯಣ ॥ ೬ ॥ ಝಡಿದು ದುಷ್ಟನೃಪರ । ಗಡಣವಾ ಬಡದಂದು । ಪಿಡಿದುಗ್ರ ಕೊಡಲೀಯ । ಪ್ರವುಢ ಬಾರೋ ಹರಿಯೇ ॥ ಹರಿ ನಾರಾಯಣ ॥ ೭ ॥ ವೃಂದಾರಕ ವಂದ್ಯ ಶೇತು । ಬಂಧನ ಹರಿದಶ । ಕಂಧರನ ಕೊಂದಾ ರಾಮ । ಚಂದ್ರ ಬಾರೋ ಹರಿಯೇ॥ ಹರಿನಾರಾ

ಯಣ ॥ ೮ ॥ ಮಲ್ಲರಾನೆಲ್ಲರಾ ಕೀಳೀ । ಬಲ್ಲಿದ ಮಾವನ ಕೊಂದ । ಗೊಲ್ಲರ ವಲ್ಲಭ ನಮ್ಮ । ನಲ್ಲ ಬಾರೋ ಹರಿಯೇ ॥ ಹರಿ ನಾರಾಯಣಾ ॥ ॥ ೯ ॥ ಬುದ್ಧನಾಗಿ ದೈತ್ಯರಿಗೆ । ಬದ್ಧಪದವಿಯ ತೋರಿ । ರುದ್ರನನ್ನು ಗೆಲಿದ । ಸುಭದ್ರ ಬಾರೋ ಹರಿಯೇ ॥ ಹರಿನಾರಾಯಣ ॥ ೧೦ ॥ ಕಲ್ಕ್ಯ ನಾಗೀ ಖಳರಿಗೆ । ಕಲ್ಕ್ಯರೂಪನಾಗುತ । ರಕ್ಷಿಸುವ ಸುಜನರಾ । ಪಕ್ಷ ಬಾರೋ ಹರಿಯೇ ॥ ಹರಿ ನಾರಾಯಣ ॥ ೧೧ ॥ ವಿಜಯ ಹಯವದನನ । ಭಜಕರ ಭಾಗ್ಯವೇ । ಸುಜನಾಬ್ಧಿ ವಾದಿರಾಜಾ । ತೇಜಿ ಬಾರೋ ಹರಿಯೇ ॥ ಹರಿ ನಾರಾಯಣ ಹರಿ ನಮೋ । ನಾರಾಯಣಾಯ ॥ ೧೨ ॥

॥ ೩ ॥ ರಾಗ, ರೇಗುಪ್ತಿ [ಧಾಟಿ:- ಎಷ್ಟು ದಿನಾ ಈ ವೈಕುಂಠ] ಏಕತಾಳ

ಯಾವ ರೀತಿಯಿಂದ ಎನ್ನನು ಪಾಲಿಪೆ । ಶ್ರೀ ವಿಭು ಹಯವದನಾ ॥ ಈ ವಿಧ ಭವದಿಂದ ಬಳಲಿ ಬಹಳನೊಂದೆ । ತಾವರೆದಳನಯನಾ ಹಯವದನಾ ॥ ಯಾವ ರೀತಿಯಿಂದ ॥ ೧ ॥ ಅಂಗನೆ ಎರಡನೆಯಧಿಕ ಮೋಹದಿಂದ । ಶೃಂಗಾರಂಗಳನೆ ಮಾಡಿ ॥ ಮಂಗಳಾತ್ಮನೆ ನಿನ್ನ ಮಹಿಮೆಯ ಪೊಗಳದೆ । ಮಾನಭಂಗಕ್ಕೆ ಒಳಗಾದೆನೂ ॥ ಹಯವದನ ॥ ಯಾವ ರೀತಿಯಿಂದ ॥ ೨ ॥ ಹೀನದೋಷವೆಲ್ಲ ಹಯಮುಖದೇವನೆ । ಮಾನಿಸುವಂತೆ ಮಾಡೂ ॥ ಜ್ಞಾನಿಗಳೊಡೆಯನೆ ಜಯವಿತ್ತೆನಗೆ ನಿನ್ನ । ಧ್ಯಾನಿಸುವಂತೆ ಮಾಡೋ ॥ ಹಯವದನಾ ॥ ಯಾವ ರೀತಿಯಿಂದ ಎನ್ನನು ಪಾಲಿಪೇ ॥ ೩ ॥

॥ ೪ ॥ ರಾಗ ಖಮಾಚ ಅಥವಾ ರೇಗುಪ್ತಿ, ಏಕತಾಳ

ತೋರೇ ಬೇಗನೇ ತೋಯಜನಯನೆ । ಮದವಾರಣಗಮನೇ ॥ ತೋರೇ ಬೇಗನೇ ॥ ಪಲ್ಲ ॥ ಮಾರನ ತಾಪವ ಸೈರಿಸಲಾರೆ । ನೀರೆಮಣಿಯೆ ಮಣಿಹಾರವ ಕೊಡುವೆ ನಾ ॥ ತೋರೇ ಬೇಗನೆ ॥ ಅನುಪಲ್ಲ ॥ ಕತ್ತಲೆಯೊಡನೆ ಕಾದಿದ ಧೀರಾ । ಕೆಡಹಿದ ಪರಿವಾರಾ । ಕಿತ್ತು ಮಣ್ಣಾಗಿದು ಮೆದ್ದನೆ ಬೇರಾ । ದಾನವಸಂಹಾರಾ । ವತ್ತಿದ್ದ ಬಲಿಯ ಕ್ಯಾದನೆ ಶೂರಾ। ಕುಜನಕುಠಾರಾ ॥ ಹತ್ತು ಶಿರವ ಕತ್ತರಿಸಿ ಗೋಕುಲದೊಳು । ಬತ್ತಲೆ ರಾಹುತನಾಗಿ ಮೆರೆದನನು ॥ ತೋರೆ ಬೇಗನೆ ॥ ೧ ॥ ನೀರೊಳು ಮುಳು ಮುಳುಗಾಡುತ ಬಂದೂ । ಮಥಿಸಿದೆ ದಯಾಸಿಂಧೂ । ಧಾರುಣೀ ಭಿವ್ಮ ಮೇಲಕೆ ತಂದೂ । ದನುಜನಾ ಕೊಂದೂ । ಮೂರುಪದ ಭೂಮಿಯ

ಬೇಡಿದನಂದೂ । ಮುನಿಕುಲದಲಿ ಬಂದೂ ॥ ನಾರಿಯ ಬಿಡದೆ ಪರನಾರಿಯರೊಳು ಕೂಡಿ । ನೀರೆಮಣಿಯ ಹಯವೇರಿ ನಡದನನು ॥ ತೋರೆ ಬೇಗನೇ ॥ ೨ ॥ ನಿಗಮ ಕದ್ದವನ ಮಡುಹಿದ ಧಿಟ್ಟಾ । ನೆಗಹಿದ ಘನಬೆಟ್ಟಾ । ಚಿಗಿದೊಮ್ಮೆ ಸೂಸ್ಥಳದಲ್ಲಿಟಾ । ಘುಡಿಘುಡಿಸುವ ಶಿಟ್ಟಾ । ಜಗವೆಲ್ಲವು ನೋಡಿ ಎರಡಡಿ ಇಟ್ಟಾ । ಕೊಡಲಿಯ ಪಟ್ಟಾ ॥ ಮೃಗವ ಕೆಡಹಿ ಕುಂತಿ ಮಗಗೆ ಸಾರಥಿಯಾಗಿ । ಜಗವ ಮೋಹಿಪ ಹಯವದನ ಶ್ರೀಕೃಷ್ಣನ ॥ । ತೋರೇ ಬೇಗನೇ ತೋಯಜನಯನೇ ॥ ೩ ॥

॥ ೫ ॥ ರಾಗ, ಆನಂದಭೈರವಿ [ಧಾಟಿ:- ಒಂದೆ ಭವತ್ಪದಯುಗಾರ] ರೂಪಕತಾಳ

ಬಾಲನೇನೇ ನಿನ್ನ ಮಗನೂ । ಗೋಪಾಲಕೃಷ್ಣ । ಬಾಲನೇನೇ ॥ ॥ ಪ ॥ ಬಾಲನೇನೇ ನಿನ್ನ ಮಗನು । ಬಾಲಕಿಯರಾಲಯವ ಪೊಕ್ಕು । ಶೀಲಗೆಡಿಸಿ ಸಾಲದೆ । ಗೋಕುಲವನೆಲ್ಲ ಮಾಲೆ ಹಾಕಿದ॥ಬಾಲನೇನೆ ॥ಅನು॥ ಕಾಲು ಇಲ್ಲದೆ ನಡವನೀತ । ಮೇಲುಗಿರಿಯ ಬೆನ್ನೊಳಾಂತ । ಮೂಲ ಬೇರ ಮೆಲ್ಲುವಾತ । ಜ್ವಾಲರೂಪ ಸ್ಥೂಲಕಾಯ ॥ ಬಾಲನಾಗಿ ಭೂಮಿ ಬೇಡಿದಾ । ತಾ ಹಾಲು ಕುಡಿದ ತಾಯತಲೆಯ ಎರಡು ಮಾಡಿದಾ । ಕಲಿಕಾಲನ್ನೋದು ಅಡವಿಯಾಲಯವ ತಿರುಗಿದಾ ॥ ನೀಲವರ್ಣ ನಿಗಮ ಗೋಚರ । ಮೇಲುಪುರದ ಸೋಲಸುಡಿಯ । ಬಾಲೆಯರನು ಸೋಲಿಸಿ ಕಲಿಕಾಲದಲ್ಲಿ ಕಲ್ಕ್ಯನಾದ ॥ ಬಾಲನೇನೆ ॥ ೧ ॥ ಮಡುವಿಯಲ್ಲಿ ಅಡಗಿಯಿರುವ । ಕಡಲೊಳ್ಗಿರಿಯನೆತ್ತಿ ಪೊರೆವ । ಅಡವಿಯಲ್ಲಿ ಆಡುತ್ತಿರುವ । ಒಡೆಯ ಕ್ರೂರರೂಪನಿವನು ॥ ಹುಡುಗನಾಗಿ ಪೊಡವಿ ಕೇಳ್ದನೇ । ಕೊಡಲಿಯನು ಪಿಡಿದು ಕ್ಷತ್ರಿಯರ ಕುಲವನ್ನು ತಂಡನೇ । ಖಳ ರಾವಣಾದಿ ಘಡೆಯನೆಲ್ಲ ಸಂಹರಿಸಿದನೇ॥ ಮಡುಕುಮಾಡಿ ಗಡಿಗೆ ಹಾಲುಕುಡಿದು ಕಟಹದಲ್ಲಿ ಅಡಗಿ । ಬಿಡದೆ ತ್ರಿಪುರವ್ರತವ ಕೆಡಹಿ । ಹಿಡಿದು ತೇಜಿ ನಡಹುತ್ತಿಹನು ॥ ॥ ಬಾಲನೇನೆ ॥ ೨ ॥ ನೀರ ಪೊಕ್ಕು ವೇದ ತಂದು । ಭಾರಗಿರಿಯ ಬೆನ್ನೊಳಾಂತು । ಕೋರೆಹಲ್ಲು ತೋರುತ್ತಿರುವ । ಪಾರಮಹಿಮ ಕ್ರೂರವದನ ಮೂರು ಪಾದ ಭೂಮಿ ಬೇಡಿದಾ । ವಿಪ್ರರನು ಕರೆಸಿ ಧರಣಿಯನ್ನು ದಾನ ಮಾಡಿದಾ । ಪರ್ವತವ ತಂದು ಶರಧಿಯನ್ನು ಸ್ವಾಂಗಟ್ಟಿದಾ ॥ ಚಾರ ಚೋರ ಮಾರನಯ್ಯ । ನಾರಿಯರನು ಮರುಳುಗೊಳಿಸಿ । ವಾಂಚಾಕ್ಷ ಹಯವದನ । ಏರಿ ಕುದುರೆ ಸ್ವಾಂಗೈವ ॥ ಬಾಲನೇನೇ ॥ ೩ ॥ ಶ್ರೀಃ ।

॥ ೬ ॥ ರಾಗ, ಅಸಾವೇರಿ [ಧಾಟಿ:- ತೋರುವದಿಲ್ಲ] ರೂಪಕತಾಳ

ಎಣಿಸಲಳವೆ ನಿನ್ನಾ । ಗುಣದಾ ಮಹಿಮೆಗಳಾ । ಗುಣಗಣಸುತ ನಾಮಾ । ಕೋದಂಡರಾಮಾ ॥ ಎಣಿಸಲಳವೆ ॥ ಪಲ್ಲ ॥ ಜಲದೀ ಸಂಚರಿಸಿದೆ । ಬಲು ಗಿರಿಯ ಧರಿಸಿದೆ । ಲಲನೆ ಧಾರಿತ್ರಿಯ ಹರದೇ ॥ ಛಲದ ಹಿರಣ್ಯಕಶ್ಯಪನ ಸಂಹರಿಸಿದೆ । ಇಳೆಯಾಪೇಕ್ಷಿಸಿದೆ । ನೀ ಬಲಿಯ ಭಂಗಿಸಿದೇ ॥ ಎಣಿಸಲಳವೆ ॥ ೧ ॥ ದುರುಳರ ಎರತಂದೆ । ಹರನ ಬಿಲ್ಲನು ಮುರಿದೆ। ನರಗೆ ಸಾರಥಿಯಾಗಿ ಮೆರದೇ ॥ ತರುಣಿಯುರಾ ವ್ರತವ ಗೆಡಿದೆ । ತುರಗವನ್ನೇರುತಲಿ ಮೆರದೇ । ಶರಣಾಗತರೆಲ್ಲರನು । ಪೊರೆವುದು ನಿನ್ನ ಬಿರುದೇ ॥ ಎಣಿಸಲಳವೆ ॥ ೨ ॥ ಕರುಣಾಸಾಗರ ನಿನ್ನ । ಚರಣಸೇವೆಗೆ ಎನ್ನಾ । ಕರುಣಿಸೊ ಸುಗುಣಸಂಪನ್ನಾ ॥ ಸ್ಮರನ ಜನಕ ಚನ್ನಾ । ಧರೆ ವಿಜಯ ಮೋಹನ್ನಾ । ಸ್ಥಿರವಾದಾ ಲಕ್ಷ್ಮೀಶಾ । ಕರುಣಿಸೊ ಹಯವದನಾ ॥ ಎಣಿಸಲಳವೆ ನಿನ್ನ । ಗುಣದಾ ಮಹಿಮೆಗಳಾ ॥ ೩ ॥ ಶ್ರೀಃ ॥

॥ ೭ ॥ ರಾಗ, ಪೂರ್ವಿ [ಧಾಟಿ:- ಸಾಕು ಸಾಕು ಮನುಜಸೇವೆಯು] ಮಟ್ಟಿತಾಳ

ಎನ್ನನುದ್ಧರಿಸಲಾಗದೇ । ಚನ್ನರಾಯ । ಎನ್ನನುದ್ಧರಿಸಲಾಗದೇ ॥ ॥ ಪಲ್ಲ ॥ ಎನ್ನನುದ್ಧರಿಸಲಾಗದೆ । ಚನ್ನರಾಯ ಬಿನ್ನೈಸುವೆ ॥ ಇನ್ನು ಬೇರೆ ಗತಿಯು ಕಾಣೆ । ನಿನ್ನ ಚರಣ ಕಮಲದಾಣೆ ॥ ಅನುಪಲ್ಲ ॥ ಶರಣ ಜನರ ಪಾಲ ಕಲ್ಪ । ತರು ದಯಾಸ್ವರೂಪನೆಂದು । ಧರೆಯೊಳಖಿಳ ನಿಗಮ ಉಸುರು । ತಿರಲು ನಿನ್ನ ಚರಣವನ್ನು ॥ ಶಿರದೊಳಾಂತು ಎನ್ನ ಮೇಲಣಾ । ಕರುಣವಿಲ್ಲ । ದಿರಲು ನಿನಗಿದೇನು ಕಾರಣಾ ॥ ಸಲಹಬೇಕು । ಸುರರ ಮಸ್ತಕದ ಸುಭೂಷಣಾ ॥ ಚನ್ನರಾಯಾ ॥ ೧ ॥ ಹಿಂದೆ ನಾನನಾಥನಾಗಿ। ಒಂದೆರಡಲ್ಲ ಹಲವು ಜನ್ಮ । ಬಂದು ನರಕಯಾತನೆಯಿಂ । ನೊಂದು ಬಳಲಿ ಬಾಯ ಬಿಡುತ ॥ ಒಂದೇ ನಿನ್ನ ಹೆಸರುಗೊಂಡೆನೇ । ಸನಾಥನಾಗಿ । ಮುಂದೆ ನಾಮಸುಧೆಯನುಂಡೆನೇ ॥ ನೀನೇ ಕೃಪಾಳು। ಎಂದುನುಡಿವರನ್ನು ಕಂಡೆನೇ ॥ ಚನ್ನರಾಯಾ ॥ ೨ ॥ ಹಲವು ಮಾತನಾಡಲೇಕೆ । ಒಲಿವದಿನ್ನು ಹರಿಯೆ ನಿನ್ನ । ಸಲಿಗೆಯೊಳೀ ಬಿನ್ನಪವನು । ಸಲಿಸುತಿಹೆನು ಮುಂದಕಿನ್ನು॥ ಜನುಮ ಬಾರದಂತೆ ವರವನೂ । ಇತ್ತು ಎನ್ನ । ಸಲಹೊ ಧೊರೆಯೆ ನಿನಗೆ ಕರೆವೆನೂ॥ ಮುಂದೆ ಮುಕುತಿ । ಲಲನೆಯೊಡನೆ ಸುಖದಲಿರುವೆನೂ॥

॥ ಚನ್ನರಾಯಾ ॥ ೩ ॥ ಲೇಶವರಿಯೆ ನಾನು ನಿನ್ನ । ದಾಸನೆಂದು ಡಂಗುರ ವನು । ಹೊಯ್ಸಿ ತಿರುಗುತಿರಲು ಮೋಹ । ಪಾಶವೆನ್ನ ಸುತ್ತಿಕೊಂಡು ॥ ಘಾಸಿ ಮಾಡುತಿರಲು ಬಿಡಿಸದೇ । ಇರಲಿ ಪಂಥ । ವಾಸಿ ಯೆನ್ನ ಮಾತ ಆಲಿಸದೇ ॥ ಸಲಹು ಸ । ರ್ವೇಶ ನಂಬಿದವರ ಕೆಡಿಸದೇ ॥ ಚನ್ನರಾಯಾ ॥ ॥ ೪ ॥ ಎನ್ನ ದುರ್ಗುಣಗಳನೆ ಮರೆದು । ನಿನ್ನ ಸದ್ಗುಣಗಳನೆ ಪೊರೆದು । ಮನ್ನಿಸಿದರೆ ಲೋಕದೊಳಗೆ । ಧನ್ಯವಹೆನು ಜನುಮವೆತ್ತಿ । ಉನ್ನತಾ ಹುದು ನಿನ್ನ ಕೀರುತಿ । ನಾಶವಹುದು । ಎನ್ನ ಬಹಳ ಭವದ ಥಾವತೀ ॥ ಇನ್ನು ಸಲಹೋ।ಚನ್ನ ಶ್ರೀಹಯವದನಮೂರುತೀ । ಚನ್ನರಾಯಾ ॥ ೫ ॥ಶ್ರೀ

॥ ೮ ॥ ರಾಗ, ಮಾಂಜ [ಧಾಟಿ:- ಪೋಗದಿರೆಲೊ ರಂಗ । ಭಾಗವತರು] ಅಟತಾಳ

ಎನ್ನಪ್ಪ ಕಂದನೇ ಚಿಣ್ಣ ಗೋಪ್ಯರು ಬಂದು । ನಿನ್ನನು ದೂರು ವರೋ । ಕಿಟ್ಟಯ್ಯಾ ॥ ಕನ್ನೆರು ಕೊಬ್ಬಿಂದ ಅನ್ಯಾಯ ನುಡಿತಾರೆ । ಇನ್ನೇನು ಮಾಡಲ್ಯಮ್ಮಾ । ಗೋಪ್ಯಮ್ಮಾ ॥ ಪಲ್ಲ ॥ ಗೋಪ್ಯಾರ ಮನೆಗಳ ಪೊಕ್ಕು ಬಹುಪಾ । ಲೂಟಮಾಡುವರೇ ಕಂದಾ । ಗೋವಿಂದ ॥ ಕಾಪಟ್ಯ ಸತಿಯರ ಮಾತು ನೀ ಲಾಲಿಸಿ । ಕೋಪಿಸಬೇಡವಮ್ಮಾ । ಗೋಪ್ಯಮ್ಮಾ ॥ ॥ ೧ ॥ ದಧಿಮುಗ್ಧ ಭಾಂಡವೊಡೆದು ಗೋಪಿಯರನ್ನ । ದುರಟಮಾಡುವರೇ ಕಂದಾ । ಗೋವಿಂದಾ ॥ ಉದಯದಿ ಗುದ್ದ್ಯಾಡಿ ಮಾರ್ಜಾಲಂಗಳು ಬೀಳೆ ದಧಿಭಾಂಡ ಒಡೆದವಮ್ಮ । ಗೋಪ್ಯಮ್ಮ ॥ ೨ ॥ ಅಣ್ಣಯ್ಯ ಬಲರಾಮ ನಿನ್ನ ಬಿನ್ನಣ ಸುದ್ಧಿ । ಚೆನ್ನಾಗಿ ಪೇಳಿದನೋ । ಗೋಪಿಂದ ॥ ಉನ್ನತ ದಾಯಾದಿ ಮಾತುಗಳನು ನೀನು । ಮನ್ನಿಸಬೇಡವಮ್ಮಾ । ಗೋಪ್ಯಮ್ಮಾ ॥ ೩ ॥ ಬಸ ವನ ಆಟದಿ ಪಶುಶಿಶುಗಳ ಕೂಡಿ । ಮುಸಿಮುಣ್ಣು ಮುಯ್ಯಾದವೋ । ಗೋ ವಿಂದ ॥ ಬಿಸಜಾಕ್ಷಿಯರು ತಮ್ಮ ಮನೆಕೆಲಸದ ಕೈಯ್ಯ । ಮುಸಿಮುಣ್ಣ ವರಸಿದರೆ । ಗೋಪ್ಯಮ್ಮಾ ॥ ೪ ॥ ಒರಗಿದ್ದ ಹಸುಗಳೆಬ್ಬಿಸಿ ಕರುಗಳ ಬಿಟ್ಟು । ದುರುಳತನವ ಮಾಡೋರೆ । ಗೋವಿಂದ ॥ ನೆರೆದಿದ್ದ ಶಿಶುಗಳಾ ಡುವ ಗುಲ್ಲು ತಾವ್ ಕೇಳಿ । ಕರುಶಿಶು ಬೆದರಿತಮ್ಮಾ । ಗೋಪ್ಯಮ್ಮಾ ॥ ॥ ೫ ॥ ಬಾ ಯೆನ್ನ ಚಿನ್ನವೆ ಬಾ ಯೆನ್ನ ರನ್ನವೆ । ಬಾರೋ ಮೋಹದ ಗಿಣಿ ಯೇ । ಗೋವಿಂದ ॥ ಬಾ ಯೆಂದು ಯಶೋದೆ ಬಿಗಿದಪ್ಪಿ ಮುದ್ದ್ಯಾಡ್ಡ । ಬಾರೊ ಶ್ರೀಹಯವದನಾ । ಕೃಷ್ಣಯ್ಯಾ ॥ ೬ ॥ ಶ್ರೀ ॥

|| ೯ || ರಾಗ ಮುಖಾರಿ, ಅಟತಾಳ.

ಬಂದಾನಲ್ಲೆ ಭಾಗ್ಯನಿಧಿ । ಬಂದಾನಲ್ಲೆ ಕೃಪಾಸಿಂಧು ॥ ಪಲ್ಲ ॥ ಬಂದಾನಲ್ಲೆ ರಮಣಿ ನಿನ್ನಾ ಅರಮನೆಗೇ || ಅನುಪಲ್ಲ || ನಂದಗೋಕುಲದ ಪುಟ್ಟ । ವೃಂದಾವನದೊಳಗಾಡಿ । ಇಂದಿರೆಯು ರಮಣಾ । ಬಂದ ಮಂದ ರೋದ್ಧಾರ || ಇಂದ್ರಾದಿ ಸುರರಿಗಾ । ನಂದಸುಖವನಿತ್ತು । ಬಂದಾ ಹಯು ವದನನಾ । ಎದುರುಗೊಳ್ಳಿರೇ || ೧ || ಮುತ್ತು ಮಾಣಿಕ್ಯ ನವ । ರತ್ನಕಿರೀಟ ದಿಂದಾ । ಸಪ್ತ ಸೂರ್ಯರ್ಮಂಡಲದಿಂ । ದೊಪ್ಪುವನ್ಯಾರೆ || ಕಸ್ತುರಿ ನಾಮ ರಿಸುವ । ಕಸ್ತೂರಿತಿಲಕವನಿಟ್ಟ । ಕೌಸ್ತುಭ ಹಯುವದನ । ದೇವ ಕಾಣಮ್ಮ || ೨ || ನೀಲಾದುಡಿಗೆಯನುಟ್ಟು । ಕಾಲಲಂದುಗೆ ಕಡಗ । ನೀಲವರ್ಣ ಶರೀರ । ಬಂದಾನ್ಯಾರೆ || ಸಾಲು ಸಾಲು ಸಾಲು ಯೆಂಬಾ । ಯುಕ್ತಿಗಳಾ ಸಂದಾಣಿಯಿಂದಾ । ಮೇಲಾಗಿ ಒಲಿದ ಹಯು । ವದನ ಕಾಣಮ್ಮಾ || ೩ || ಚಿನ್ನ ತುರಗ ಮಿಂಚುತ । ರನ್ನ ತೊಡೆ ಹೊಳೆವುತಾ । ಉನ್ನತ ಗಾಂಭೀ ರ್ಯದಿ । ಬಾಹೊನ್ಯಾರಮ್ಮ || ಕನ್ನೆ ಮುಖಾಲಕುಮಿಯು । ಮನ್ನ ಸೂರೆ ಗೊಂಡಿಹ । ಚನ್ನಿಗ ಹಯುವದನ । ದೇವ ಕಾಣಮ್ಮಾ || ೪ || ಉರದಲ್ಲಿ ಶ್ರೀವತ್ಸ । ಕೊರಳಾ ಕೌಸ್ತುಭ ಹಾರಾ । ಸರಿ ಹೆಜ್ಜೆಯನಿಡುತಾ । ಬಾಹೋ ನ್ಯಾರಮ್ಮಾ || ಗುರು ವಾದಿರಾಜರಿಗೆ । ಒಲಿದು ಸೇವೆಗೆ ಬಂದು । ಸ್ಥಿರ ವಾಗಿ ನಿಂತ ಹಯು । ವದನ ಕಾಣಮ್ಮಾ || ೫ || ಶ್ರೀ ||

|| ೧೦ || ರಾಗ ಕಲ್ಯಾಣ, ತ್ರಿಪುಟತಾಳ.

ಬಿಡೆನೊ ಬಿಡೆನೊ ನಿನ್ನ ಚರಣಕಮಲನಾ । ಎನ್ನ । ಹೃದಯಮಧ್ಯ ದೊಳಿಟ್ಟು ಭಜಿಸುವೆ ಅನುದಿನಾ ॥ ಪಲ್ಲ ॥ ಬಲಿಯು ದಾನವ ಬೇಡಿ ಇಳೆಯು ಬ್ರಹ್ಮಾಂಡವ । ಪದುಮನಾಭ ನಿನ್ನ ಪಾದ ತೊಳೆವೆ ॥ ಉಗುರು ಕೊನೆಯಿಂದಾ ಉದಿಸಿದಳಾ ಗಂಗೆ । ಹಂಪಾದ ತೀರ್ಥವೆಂದು ಹರ ಧರಿಸಿದನಾಗ ॥ ೧ ॥ ಆ ಸತಿ ಶಾಪದಿ ಅಹಲ್ಯೆ ಸಾವಿರಯುಗ । ಪಾಷಾ ಣವಾಗಿ ಪಥದೊಳಿರಲು ॥ ಲೇಸ ನಿನ್ನ ಪಾದ ಸೋಂಕಲದಾಗಲೆ । ಆ ಸತಿ ಪಡದಳು ದಿವ್ಯ ದೇಹವನೂ ॥ ೨ ॥ ವಜ್ರಾಂಕುಶಧ್ವಜ ಪದುಮ ರೇಖೆಗಳಿಂದ । ಒಪ್ಪುವ ಸಿರಿ ಪದಪದುಮವನೂ ॥ ಭಕ್ತಿಯಿಂ ಭಜಿಸಲು ಸಿರಿಹಯುವದನನೆ । ಪ್ರತ್ಯಕ್ಷವಾಗಿ ಸಲಹುವ ನಮ್ಮನೂ ॥ ೩ ॥ ಶ್ರೀ ॥

॥ ೧೧ ॥ ರಾಗ ಪಂತುವರಾಳಿ, ಏಕತಾಳ.

ಭಕುತರಪರಾಧವ ಬಗೆಯನೀ ದೇವಾ । ಭಕುತರು ತಪ್ಪಿದರೆ ಬಲು ಭಯವೀವಾ ॥ ಪಲ್ಲ ॥ ಇಟ್ಟುಣಿಸಿದ ಬಲಿಕಟ್ಟಿದಳು ಯಶೋದೆಗೆ । ಇಷ್ಟಾರ್ಥಗಳನಂದು ಕೊಟ್ಟು ಕಾಯನೆ ॥ ದುಷ್ಟತನದಿ ಧೃತರಾಷ್ಟ್ರ ತನಯ ತನ್ನ । ಕಟ್ಟಲು ಹವಣಿಸೆ ಕಷ್ಟವನುಣಿಸನೆ ॥ ೧ ॥ ಕಾಲಿಲಿ ತನ್ನ ಅಂಗವನೊದ್ದ ಮುನಿಪನ । ಮೂಲೋಕವರಿಯೆ ಮುದ್ದಿಸಿ ಮೆರೆಯನೆ ॥ ತಾಳದೆ ನೃಪತಿಯ ತಾನೆಂದು ತಿಳಿಯಲು । ಕಾಲಯವನ ಬಂದು ಕಾಳು ಮಾಡಿಸನೆ ॥ ೨ ॥ ಪರವಶಚಿತ್ತನಾಗಿ ಫಲ್ಗುಣ ಜರೆಯಲು । ಹರ ದೂರಾಗದೆ ಹರಣವ ಕಾಯನೆ ॥ ಅರಸೆಂಬ ಗರ್ವದಿಂದ ಅಂಭಟ ಪೌಂಡ್ರಕನ । ಧುರಕೆ ಗರಿಯ ಮಾಡಿ- ಧುಂದಿ ಕೊಲಿಸನೆ ॥ ॥ ೩ ॥ ಶರಕೆ ಗುರಿಯ ಮಾಡಿ ಸಮರದೊಳೊಡ್ಡಿದ । ಸುರವ್ರತಗಂದು ಶುಭವನೀಯ್ಯನೆ ॥ ಹರನ ಮೆಚ್ಚಿಸಿ ತನ್ನ ಗೆಲುವ ಬಲ್ಲ ಬೇಡಿದ । ಶಾರೀರ ಸಂಬಂಧಿಯ ಕೊಲ್ಲಿಸನೆ ॥ ೪ ॥ ಮುಕುಟವ ಕದ್ದೊಯ್ಯಲು ಮಹಾಬಲಿಯ ಬಾಗಿಲ । ಅಕಳಂಕನಂದು ಕಾವುದ ಬಿಟ್ಟನೆ ॥ ಈ ಕೃಷ್ಣ ಹಯವದನ ನಿಂದುಡುಪಿನ ಜನಕೆ । ಶೋಕಪಿತ್ತ ಕಳ್ಳನಿಗೆ ಶೂಲಗತಿನೀಯ್ಯನೇ ॥ ೫ ॥

॥ ೧೨ ॥ ರಾಗ ಆನಂದಭೈರವಿ, ಅಟತಾಳ.

ವೇಣುನಾದ ಪ್ರಿಯಾ । ಗೋಪಾಲಕೃಷ್ಣ । ವೇಣುನಾದ ಪ್ರಿಯಾ ॥ ॥ ಪಲ್ಲ ॥ ವೇಣುನಾದವಿನೋದ ಮುಕುಂದ । ಗಾನವಿನೋದ ಶೃಂಗಾರ ಗೋಪಾಲಾ ॥ ಅನುಪಲ್ಲ ॥ ವಂದಿತಚರಣಾ ವಸುಧೇಯಾಭರಣಾ । ಇಂದಿರಾರಮಣಾ ಇನಕೋಟಿತೇಜಾ ॥ ಮಂದರಧರ ಗೋವಿಂದ ಮುಕುಂದ । ಸಿಂಧುಶಯನ ಹರಿ ಕಂದರ್ಪಜನಕಾ ॥ ೧ ॥ ನವನೀತಚೋರಾ ನಂದಕುಮಾರಾ । ಭುವನೈಕವೀರಾ ಬುದ್ಧಿವಿಸ್ತಾರಾ ॥ ರವಿಕೋಟಿತೇಜಾ ರಘುವಂಶರಾಜಾ । ದಿವಿಜವಂದಿತ ದನುಜಾರಿ ಗೋಪಾಲಾ ॥ ೨ ॥ ಪರಮದಯಾಳೋ ಪಾವನಮೂರ್ತೇ । ಕ್ಷಿತಿಕೀರ್ತಿಹಾರಾ ಶೃಂಗಾರ ಲೋಲಾ ॥ ಉರಗೇಂದ್ರಶಯನಾ ವರಹಯವದನಾ । ಶರಣುರಕ್ಷಕ ಪಾಹಿ ಕೋದಂಡರಾಮಾ ॥ ೩ ॥ ಶ್ರೀಃ ॥

॥ ೧೩ ॥ ರಾಗ ಭೈರವಿ, ಅಟತಾಳ.

ಮನ್ನಿಸೆನ್ನ ಮಧುಸೂದನ ॥ ಪಲ್ಲ ॥ ಮದನನಯ್ಯ । ಮೋಹನ ಕಾಯು । ಉನ್ನತಗುಣನಿಲಯು । ಉಡುಪಿನ ಕೃಷ್ಣರಾಯು ॥ ಅನುಪಲ್ಲ ॥ ಶ್ರುತಿಗಳ ತಂದು ಮುನ್ನ। ಸುರಮುನಿಗಳ ಮನ। ಕೃತಿಹರುಷವ ಕೊಟ್ಟ ಅಗಣಿತಗುಣರಷ್ಟ । ಯತಿಗಳ ಪಾಲಿಸಿದೆ। ಮುಂದುವರಿದ । ದಿತಿಜರ ಸೋಲಿಸಿದೆ। ಈ ಮಹಿಯೊಳು। ಮತಿವಂತರಾ ಪೊರೆದೆ। ಮಹಿಮೆಯಿಂದ ಮೆರೆದೆ ॥ ೧ ॥ ಅಚ್ಚ ಹಾರಶೋಭಿಕಂಠ । ಆಶ್ರಿತರಿಂಗೆ ನೀ ನಂಟ। ಮೆಚ್ಚಿದ ಪಾರ್ಥನ ಮಿತ್ರ। ನೆನಿಸುವ ಸುಚರಿತ್ರ। ಮೆಚ್ಚಿದ ನಿನ್ನಯ ಭಗತ। ವೈಕುಂಠದ । ಮುಚ್ಚಲತೆಗಿಸಲು ಶಕ್ತ । ಅಚ್ಯುತ ನಿನ್ನ । ಅರ್ಚಿಸಿದನೆ ಕೃತಾರ್ಥ । ಅವನೆ ಸರ್ವಸಮರ್ಥ ॥ ೨ ॥ ಎಂದೆಂದು ನಿನ್ನವರೊಳು। ಯೆನ್ನ ಕೂಡಿಸೊ ಕೃಪಾಳು । ವಂದ್ಯ ಗರುಡನ ಸ್ಕಂಧ। ವೇರಿ ಬಾರೊ ಗೋವಿಂದ। ತಂದೆ ನೀನೆ ತಾಯಿ ನೀನೆ । ಹಯವದನ। ಬಂಧು ನೀನೆ ಬಳಗ ನೀನೆ। ಮತ್ತದರಿಂದ । ಕುಂದ ನೋಡು ಅಘ ಬಿಡು। ಕಂಡು ಕರುಣವ ಮಾಡೂ ॥ ೩ ॥ ಶ್ರೀ೧೪ ॥

॥ ೧೪ ॥ ರಾಗ ಶಂಕರಾಭರಣ, ಆದಿತಾಳ.

ಕೊಂಡಾಡಲಳವೆ ನಿನ್ನಯ ಕೀರ್ತಿ । ಭೂ। ಮಂಡಲದೊಳು ಹಯಗ್ರೀವಮೂರ್ತೀ ॥ ಪಲ್ಲ ॥ ವೇದಂಗಳಾ ಜಲದಿಂದ ತಂದೇs । ಧೋ। ಪೋದ ಗಿರಿಯ ಬೆನ್ನೊಳಾಂತು ನಿಂದೇ ॥ ಮೇದಿನಿಯಾ ಕದ್ದೊಯ್ದವನ ಕೊಂದೇ । । ಸಂ। ವಾದದಿಂದಲಿ ಕಂಬದಿಂದ ಬಂದೇ ॥ ೧ ॥ ಚರಣಾಗ್ರದಲಿ ನದಿಯನು ಪೆತ್ತೆ । ತೀಕ್ಷ್ಣ । ಪರಶು ಪಿಡಿದು ಬಾಹುಜರ ಕಿತ್ತೆ ॥ ನೆರೆ ನಂಬಿದಗೆ ಸ್ಥಿರಪಟ್ಟವಿತ್ತೆ । ದೊಡ್ಡ । ದುರುಳ ಕಾಳಿಂಗನ ಶಿರದಿ ನಿಂತೇ ॥ ॥ ೨ ॥ ಪತಿವ್ರತೆಯರ ಮಾನಗಳ ಭೇದನ। ಬಹು। ಚತುರ ತುರಗವೇರಿ ನಲಿವನ್ನ ॥ ಕ್ಷಿತಿಯೊಳುತ್ತಮ ವಾದಿರಾಜರನ್ನ। ಸ್ವಾಮಿ । ಸತತ ಹಯವದನ ರಕ್ಷಿಪನಾ ॥ ೩ ॥ ಶ್ರೀ೧೪ ॥

॥ ೧೫ ॥ ರಾಗ ಕಾಂಬೋಧಿ, ಝಂಪೆತಾಳ.

ಕಂಜಾಕ್ಷ ಕಾಯಯ್ಯ ಕರುಣಾನಿಧಿಯೇ। ಬಲ। ಭಂಜನನನುಜಾ ನೋಡೆನ್ನಾ ॥ ಪಲ್ಲ ॥ ಅಂಜದೆ ನಾ ನಿನ್ನ ಅಡಿಗಡಿಗೆ ಬೇಡುವೆನು। ಕುಂಜರ ವರದಾ ಕೂಡೆನ್ನಾ ॥ ಅನುಪಲ್ಲ । ನೀನೊಲಿದಾಗಲೆ ನಿಖಿಲ

ಸಂಪತ್ತೆನ್ನ । ತಾನೇ ಬಾಹದು ತಡವಿಲ್ಲಾ ॥ ಆ ನಳಿನಭವಾದ್ಯಮರಂದಕೆ ಸಾಕ್ಷಿ । ಬಾನುಸನ್ನಿಭ ಬಾರೊ ನಲ್ಲಾ ॥ ೧ ॥ ಪುಂಡರೀಕಾಕ್ಷನ್ನ ಪೂಜಿಪ ಭಕ್ತರ । ಮಂಡೆಯು ಪೂ ಬಾಡದೆಂದು ॥ ಕಂಡೆನಾ ರಣದಲ್ಲಿ ಕಲಿ ಪಾರ್ಥನಿಗೊಲಿದು । ಭಂಡಿಯ ಬೋವನಾದಂದು ॥ ೨ ॥ ವೃಂದಾರಕೇಂದ್ರ ಶ್ರೀಹಯವದನ ಮುಕುಂದ । ಮಂದರೋದ್ಧಾರ ಮತ್ತೊಂದ ಬಯೋ ॥ ಇಂದಿರೆಯುರಸ ಬಾ ಇಂದುವದನ ದೀನ । ಬಂಧುವೆ ಭಕ್ತರ ಸಿರಿಯೋ ॥ ೩ ॥ ಶ್ರೀಶ ॥

॥ ೧೬ ॥ ರಾಗ ರೇಗುಪ್ತಿ, ಆದಿತಾಳ.

ಗಾಡಿಗಾರ ಕೃಷ್ಣರನ್ನ ಬಿಡದಿರೊ ಯೆನ್ನ ॥ ಪಲ ॥ ಬಡವರ ರಕ್ಷಿಪನ್ನ । ಅಡಿಗೆರಗುವೆ ನಿನ್ನ । ಗಾಡಿಗಾರ ॥ ಅನುಪಲ್ಲ ॥ ಕಡಲಮಗಳ ಗಂಡ । ಒಡಲೊಳು ತೋರ್ದಜಾಂಡ ॥ ಪಿಡಿದ ಪಾಶದಂಡ ಕಾಂಡ । ಬೇಡಿದಿಷ್ಟದಾನಶೌಂಡ ॥ ೧ ॥ ವಾರಿಧಿಮಧ್ಯದಿ ಪುರ । ವರ ನಿರ್ಮಿಸಿದ ಧೀರ ॥ ಈರೇಳು ಭುವನೋದ್ಧಾರ । ನೀರದಶ್ಯಾಮಳಾಕಾರ ॥ ೨ ॥ ಮಂದಸ್ಮಿತಮುಖದಿಂದ । ಇಂದುಡುಪಿನಲ್ಲಿ ನಿಂದ ॥ ನಂದಗೋಪಜನ ಕಂದ । ವೃಂದಾರಕೇಶ ಮುಕುಂದ ॥ ೩ ॥ ಭಾವಗೊಲಿದಜೋದ್ಭವ । ಭವಸಂಜಾತರ ಕಾವ ॥ ಭವಾಬ್ಧಿತಾರಕ ದೇವ । ಭವಿಸುವ ಭಕ್ತೋಜ್ಜೀವ ॥ ೪ ॥ ಮಧ್ವಮುನಿಪರೊಡೆಯ । ಶುದ್ಧ ಯತಿಗಣಪ್ರಿಯ ॥ ಶುದ್ಧವಾದಾಗಮಗೇಯ । ಮುದ್ದು ಹಯವದನರಾಯ ॥ ೫ ॥ ಶ್ರೀಶ ॥

॥ ೧೭ ॥ ರಾಗ ರೇಗುಪ್ತಿ, ಝಂಪೆತಾಳ.

ನಂದಗೋಪನ ಕಂದ ನಾನು । ವೃಂದಾರಕೇಂದ್ರ ಖಳಕುಲ ಮರ್ದನ ॥ ನಂದಗೋಪನ ಕಂದ ನಾನು ॥ ಪಲ್ಲ ॥ ಎಂದೆಂದು ನನ್ನ ನಂಬಿದ ಭಕ್ತಜನರ ಸು । ತ್ತಿಂದ ಬಂದ ಕ್ಲೇಶಗಳ ಖಂಡಿಸಿ ॥ ತಂದೆ ಮಕ್ಕಳನು ಪೊರೆದಂತೆ ಪಾಲಿಸುತಿಹೆನು । ಕಂದರ್ಪನಾಣೆ ಇದು ಯೆನಗೆ ಬಿರಿದು ॥ ೧ ॥ ಅಂದಂದು ಅವರು ಬೇಡಿದ ಇಷ್ಟಗಳನಿತ್ತೆ । ಸಂದೇಹವಿಲ್ಲ ಸಂತರ ಸಲಹಿದೆ ॥ ಮಂದಜನರೊಡನಾಡಿ ಮರುಳಾಗದಿರು ಮನುಜ । ಡಂದದಿಂದೆನ್ನ ಪೂಜೆಯನೆ ಮಾಡು ॥ ೨ ॥ ಇಂದ್ರ ಗರ್ವಿಸಲು ಅವನಿಗೆ ತಂದು ಸುರತರುವ । ನಂದನ ವನವ ಪೊಕ್ಕು ಕಿತ್ತು ತರಲೂ ॥ ಒಂದಾಗಿ

ರಣಕೆ ಬಂದು ನಿಂದವುರರನು ಕರುಣ । ದಿಂದ ನಾ ಪಾಲಿಸಿದೆ ಹಯ ವದನನೆಂದು ॥ ೩ ॥ ಶ್ರೀ ॥

॥ ೧೮ ॥ ರಾಗ ದೇಶಿ, ಏಕತಾಳ.

ಕೇಳಬಲ್ಲನೆ ಯೆನ್ನ ಮಾತನು । ಕಾ । ಳಿಂಗಮರ್ದನ ಕೃಷ್ಣ । ಹೇಳಿ ಗೋಪ್ಯಮ್ಮ ಬುದ್ಧಿ ॥ ಕೇಳಬಲ್ಲನೆ ಯೆನ್ನ ಮಾತನು ॥ ಪ ॥ ಬಿಟ್ಟ ಕಣ್ಣನೆ ಮುಚ್ಚಲೊಲ್ಲನೆ। ದೊಡ್ಡ। ಬೆಟ್ಟಕ್ಕೆ ಬೆನ್ನಿತ್ತು ನಿಂತನೆ । ಬಹು । ಸಿಟ್ಟಲಿ ಕೋರೆ ಹಲ್ಲ ಕಿರಿವನೆ । ಗಟ್ಟ । ಉಕ್ಕಿನ ಕಂಬಪೊಡೆದು ಬಂದನೆ । ರಂಗ ॥ ೧ ॥ ಮೂರಡಿಭೂಮಿಯ ಬೇಡಿ ಬಂದನೆ । ತಾಯ । ತಲೆಯ ಕಡಿಯಲಿಕೆ ಕೊಡಲಿ ತಂದನೆ ॥ ನಾರಶೀರೆಯನುಟ್ಟುಕೊಂಡನೆ । ಬಹು । ಚೋರತನ ದಿಂದ ಹರವಿ ಹಾಲ ಕುಡಿದನೆ ಕೃಷ್ಣ ॥ ೨ ॥ ಬತ್ತಲೆನಾರಿಯರ ಅಪ್ಪಿದ । ಕೃಷ್ಣ । ಉತ್ತಮ ಅಶ್ವವನೇರಿದ । ರಂಗ । ಹತ್ತವತಾರವ ತೋರಿದ । ಧಿಟ್ಟ । ಮೂರ್ತಿ ನಮ್ಮ ಚೆಲುವ ಶ್ರೀಹಯವದನ ॥ ೩ ॥ ಶ್ರೀ ॥

॥ ೧೯ ॥ ರಾಗ, ಭೈರವಿ [ಧಾಟಿ:- ಜಯಮಂಗಳಂ ನಿತ್ಯ ಶುಭಮಂಗಳಂ] ಝಾಪುತಾಳ

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥ ವಸುದೇವತನಯ ನಿಗೆ ವೈಕುಂಠನಿಲಯನಿಗೆ । ಕುಸುಮನಾಭನಿಗೆ ಕೋಮಲರೂಪಗೇ ॥ ಯಶೋದೆಯ ನಂದನಗೆ ಇಂದಿರಾರಮಣನಿಗೆ । ನಸುನಗೆಯೊಳೊಪ್ಪುವಾ ನರಸಿಂಹಗೇ ॥ ೧ ॥ ಕನಕಕಿರೀಟನಿಗೆ ಕಸ್ತೂರಿತಿಲಕನಿಗೆ । ಕನಕಕುಂಡ ಲಗೆ ಕೌಸ್ತುಭಹಾರಗೆ ॥ ಕನಕಾಂಬರಧರಗೆ ಘನಮಹಿಮೆಯುಳ್ಳವಗೆ । ಸನಕಾದಿವಂದ್ಯ ನರಸಿಂಹಗೇ ॥ ೨ ॥ ಪಂಕಜನಾಭನಿಗೆ ಪಾಂಚಾಲಿರಕ್ಷ ಕಗೆ । ಲಂಕೆಯನು ವಿಭೀಷಣನಿಗಿತ್ತವನಿಗೆ ॥ ಕುಂಕುಮಾಂಕಿತನಿಗ ಕುವಲಯನೇತ್ರನಿಗೆ । ಬಿಂಕದಲಿ ಮೆರೆವ ಮುದ್ದು ನರಸಿಂಹಗೇ ॥ ೩ ॥ ಪಕ್ಷಿವಾಹನನಿಗೆ ಪರಮಪಾವನನಿಗೆ । ಕುಕ್ಷಿಯೊಳು ಜಗವನಿಂಬಿಟ್ಟವ ನಿಗೆ ॥ ಲಕ್ಷ್ಮೀಕಾಂತನಿಗೆ ರಾಜೇಂದ್ರವಂದಿತಗೆ । ಲಕ್ಷಣದೊಳೊಪ್ಪುವ ನರಸಿಂಹಗೇ ॥ ೪ ॥ ಭಕ್ತವತ್ಸಲನಿಗೆ ಸಕಲವನು ರಕ್ಷಿಪಗೆ । ಮುಕ್ತಿದಾ ಯಕಗೆ ಚಿನ್ಮಯರೂಪಗೆ ॥ ಮಿತ್ರೆರುಗ್ಮಿಣಿಸತ್ಯಭಾಮೆಯರರಸನಿಗೆ । ನಿತ್ಯ ಕಲ್ಯಾಣ ಶ್ರೀಹಯವದನಗೇ ॥ ೫ ॥ ಶ್ರೀ ॥

ಶ್ರೀಗುರುವಾದಿರಾಜಕೃತ ಪದಗಳು ಸಂಪೂರ್ಣಂ

# ಶ್ರೀವೆಂಕಣ್ಣಕವಿಕೃತ ಪದಗಳು.

|| ೨೦ ||                ರಾಗ ನಾಟಿ, ಝಂಪೆತಾಳ

ಶ್ರೀಗಣಪ ಶರಣೂ ॥ ಶಿವಕರಾಚ್ಯುತ ನಿತ್ಯ । ಶಿವಪೂರ್ಣ ಸರ್ವೇಶ । ಶಿವಜಾತಸಂಭೂತ । ಶಿವಮುಖ್ಯಸೇವ್ಯಾ ॥ ಶಿವಯಾಸಪಿತಯುವುಳ । ಶಿವಭಂಜನಾನಂದ । ಶಿವಮರ್ದನ ಗೋವಿಂದ । ಶಿವಕರ ಮುಕುಂದಾ ॥ ಶ್ರೀಗಣಪ ॥ ೧ ॥ ನಾಗಪತ್ರಣದರಸ । ನಾಗರುವಿಕೆಯ ಮುಂದ । ನಾಗರುಹದಳನೇತ್ರ । ನಾಗಪತಿಶಯನಾ ॥ ನಾಗೇಂದ್ರವರದ ಶಿತನಾಗವಾಹನರಕ್ಷ । ನಾಗಚಕ್ರಾಂಕಿತನೆ । ನಾಗಾಂಗವುನಾ ॥ ಶ್ರೀಗಣಪ ॥ ೨ ॥ ಗುರುಪೂಜ್ಯನೆಂದೊಲಿದು । ಗುರುದಕ್ಷಿಣೆಗೆ ಮಡಿದ । ಗುರುಸುತನ ತಂದಿತ್ತ । ಗುರುವಿಗೊಂದಿಸುತಾ ॥ ಗುರುವಿಂಗೆ ಗುರು ಜಗದ್ಗುರು ಸಾರ್ವಭೌವು । ಚಿದ್ಗುರು ಮೂಲಿಕನಿವಾಸ । ಗುರು ವೆಂಕಟೇಶಾ ॥ ಶ್ರೀಗಣಪ ಶರಣೂ ॥ ೩ ॥ ಶ್ರೀ ॥

|| ೨೧ ||        ರಾಗ, ಕಲ್ಯಾಣಿ [ಧಾಟಿ:- ಸತ್ಯಕಲ್ಯಾಣಿ] ಏಕತಾಳ

ನೋಡು । ಮನದಿ ಕೊಂಡಾಡು । ಭಕುತಿಯ ಬೇಡೂ । ನೀ ಪಾಡೂ ॥ ಕಾಡೂ ವಿಷಯದ । ಗಾಡಿಕೆಯೊಳು ಮನ । ಗೂಡಿ ಹೃದಯದೊಳಾಡುವ ಹರಿಯನು ॥ ನೋಡು ॥ ಪಲ್ಲ ॥ ಹಾದಿಯಾ । ತತ್ವಾರ್ಥದ ಬಲು ಸಂಪಾದಿಯಾ । ಸುಂಗತ ಪರಮಾಂಬೋಧಿಯಾ । ಸುಂ ಪಡದೂ । ಭೇದಪಂಚಕವಂದೂ । ವಿಷಯದ ಹಾದಿಯನ್ನೆ ಗೆಲಿದೂ ॥ ಮಾಧವ ಚರಣಾ । ರಾಧನೆಯೊಳು ಮನ । ತೇದುತ ಧ್ಯಾನವಿ । ನೋದದಿ ಹರಿಯನು ॥ ನೋಡು ಮನದಿ ॥ ೧ ॥ ಹೊಂದಿಸೀ । ಅಹಂಕಾರದ ಬಳಗವ ಬಂಧಿಸೀ । ಇಂದ್ರಿಯಂಗಳ ಬಲವನು ಕುಂದಿಸೀ । ಏಕೋದೃಢದೀ । ಮಂದಮತಿಯ ಬಿಟ್ಟು । ಮನ ಗೋವಿಂದನಂಘ್ರಿಯೊಳಿಟ್ಟೂ ॥ ಚಂದದಿ ದಶವಾಯೊಂದು ಗೂಡಿ ಹೃ । ನ್ಮಂದಿರದೊಳಗಾ । ನಂದದಿ ಹರಿಯನು ॥ ನೋಡು ॥೨॥ ಅಳುಕದೇ । ಇತರಂಚ್ಛೆಯೊಳು ಮನ ಮುಳುಕದೇ । ಪರಧನ ಪರಸತಿ ಮನ ನಿಲುಕದೇ । ಏಕಾಗ್ರದಿ । ಒಳಗ್ಹೊರಗೊಂದಾಗೀ । ಮನದೊಳು ಒಳವಂತವನಾಗೀ ॥ ಸುಲಲಿತಾತ್ಮ ಗುರುವೆಂಕಟೇಶ ಮಂ । ಜುಳರೂಪದಿ ಥಳ । ಥಳಿಸುವ ಹರಿಯನು ॥ ನೋಡೂ ॥ ೩ ॥ ಶ್ರೀ ॥

|| ೨೨ || ರಾಗ, ಅರಬಿ [ಧಾಟಿ:– ಕಾಂತೇ, ಶ್ರೀಮಂತೆ ।] ಆದಿತಾಳ

ಕಲಯೇ ತ್ವಂ ವೇದನಾಯಕಿ । ಕಾಮಿತ ಫಲದಾಯಕಿ || ಕಲಯೇ ತ್ವಂ || ಕಲಿತ ಮೌಕ್ತಿಕಲಾಪೆ । ಕೈಲಾಸಾಚಲವಿಹಾರಿ || ಕಲಯೇ ತ್ವಂ ||ಪಲ್ಲ|| ಬಾಲೇ । ಅಲಂಕಾರಾಲಂಕೃತ ಪಾಲೇ । ಸನ್ನುತ ಮಾನಿತಹಾಜಾಲೇ । ಸಂತತ ಮನಲೋಲೆ । ಕರುಣಾವಾಲೆ || ಕಲಯೇ ತ್ವಂ|| ೧ || ಧನ್ಯೇ । ಪವಿತ್ರಭಕ್ತಾಧನ್ಯೆ । ಪರ್ವತರಾಜಹಾಕನ್ನೇ । ಸರ್ವಥಾ ಸುಪ್ರಸನ್ನೇ । ಸಜ್ಜನ ಮಾನ್ಯೇ ॥ ಕಲಯೇ ತ್ವಂ || ೨ || ರಾಮೇ । ಕೋಮಲ ಮೇಘಶ್ಯಾಮೇ । ಜ್ಯೋತಿರ್ಮಹೇಶಾ ಭಾಮೇ । ಗುರು ವೇಂಕಟರಮಣಭಿರಾಮೇ । ಚಂದ್ರ ಲಲಾಮೇ || ಕಲಯೇ ತ್ವಂ ವೇದನಾಯಕೀ || ೩ || ಶ್ರೀ೪ ||

|| ೨೩ || ರಾಗ, ಅರಬಿ [ಧಾಟಿ:– ಕಾಂತೇ, ಶ್ರೀಮಂತೇ] ಆದಿತಾಳ

ಕಲಯೇ ಶ್ರೀವೇಂಕಟೇಶಂ । ದೇವಾದಿದೇವಂ । ಕಲಯೇ|| ಜಲಜಸಂಭವಾದ್ಯಮರಾರ್ಚಿತ ನಿಷ್ಕಲುಶ ನಿತ್ಯನಿರ್ಮಲ ಗುಣಧಾಮಂ || ಕಲಯೇ || || ಪಲ್ಲ || ಬಾಲಂ । ದೇವಕದೇವೀ ನತಪಾಲಂ । ನರನಾಟಕ ಸವಕೃತ ಲೀಲಂ । ಮೋಹಿತ ಗೋಪೀಜನಜಾಲಂ । ಯಶೋದ ಪುಣ್ಯವಿಶಾಲಂ । ಪೂತನಿಕಾಲಂ । ಗೋಪವಿಲೋಲಂ । ಚಾರುಚಂತ್ರಸುಶೀಲಂ || ಕಲಯೇ ಕೇಶವಂ || ೧ || ಸಾರಂ । ಸಕಲಾಗಮ ಶಕಟಪ್ರಹಾರಂ । ನವನೀತಕ್ಷೀರ ದಧಿಚೋರಂ । ಮುರಲೀರವಗೀತಸಂಪೂರಂ । ಬೃಂದಾವನಸಂಚಾರಂ । ವೃಷಧೇನುಕವತ್ಸವಿದಾರಂ । ಯುವತೀಜನವಸನಪಹಾರಂ || ಕಲಯೇ ಶ್ರೀಕೇಶವಂ || ೨ || ಈಷಂ । ಈಪ್ಸಿತಪ್ರದಕೋಮಲವೇಷಂ । ಕೌಸ್ತುಭ ಮಣಿಮೌಕ್ತಿಕಭೂಷಂ । ಕರುಣಾಕರ ಭಕ್ತಸುಪೋಷಂ । ವರವಟವೇಣು ಪುರನಿವಾಸಂ । ಶ್ಯಾಮಲವೇಷಂ । ಸುಂದರಕೇಶಂ। ಶ್ರೀಗುರುವೆಂಕಟೇಶಂ || ಕಲಯೇ ಶ್ರೀಕೇಶವಂ || ೩ || ಶ್ರೀ೪ ||

|| ೨೪ || ರಾಗ ಮಿಶ್ರಾಚ, ಏಕತಾಳ

ಕುಣಿದಾಡೊ ಕೃಷ್ಣ ಕುಣಿದಾಡೋ । ಮತ್ತೊಮ್ಮೆ ಕುಣಿದಾಡೋ || ॥ ಪಲ್ಲ ॥ ಮುದ್ದು ಮೊಗದೊಲಪ । ಮುಗುಳ್ನಗೆದೋರೀ । ತಥ್ಥಿಮಿಕೆಂದು ಮುಂರಾ|| ಕುಣಿದಾಡೋ ಕೃಷ್ಣ ಕುಣಿದಾಡೋ || ೧ || ಹಸ್ತಾಂಗುಲಿ ಅಭಿನವಗಳವಟ್ಟು । ನ್ಯಸ್ತದಿ ಹೆಜ್ಜೆಗಳನ್ನಿಟ್ಟು || ಕುಣಿದಾಡೊ ಕೃಷ್ಣ ಕುಣಿ

ದಾಡೋ ॥ ೨ ॥ ಗೆಜ್ಜೆನೂಪುರ ಘಲ್ಗಲ್ ಘಲರವದಿಂದಾ । ತಧ್ಧಣುಕೆಂದು ಮುಕುಂದಾ ॥ ಕುಣಿದಾಡೋ ಕೃಷ್ಣ ಕುಣಿದಾಡೋ ॥ ೩ ॥ ಸ್ಥಾಯಿ ಮೃದಂಗತಾಳದಿ ಶ್ರುತಿಗೂಡೀ ಮಾ । ಗಾಯಿ ಕುಂಡಲಗಳೋಲಾಡೀ ॥ ಕುಣಿದಾಡೋ ಕೃಷ್ಣ ಕುಣಿದಾಡೋ ॥ ೪ ॥ ಸರಸ ಸಾಹಿತ್ಯ ಸಂಗೀತ ಸುಪ್ರೇಮಾ । ಗುರುವೇಂಕಟ ಗುಣಧಾಮಾ ॥ ಕುಣಿದಾಡೊ ಕೃಷ್ಣ ಕುಣಿದಾಡೋ ॥ ೫ ॥ ಶ್ರೀ೪ ॥

॥ ೨೫ ॥ ರಾಗ, ಬೇಗಡೆ [ಪ್ರಾಯ: ಶ್ರೀನರಹರಿ ಶರಣಾಗತರಕ್ಷಕ] ಆದಿತಾಳ

ಧಾಂ ಧಾಂ ಧಾಂ ಧಾಂ ಧಿಮಿಕೆಂದಾಡಿದ । ಗೋವಿಂದಾ ನಂದನ ಕಂದಾ ॥ಪಲ್ಲ॥ ಚಂದದ ಕಣ್ ಕಾಲಂದುಗೆ ಗೆಜ್ಜೆ ಘಲ್ ಘಲ್ ಕೆಂದುಲಿಯಲು । ಕಾಳಿಂಗನ ಪೆಡೆಯುಲಿ । ನಿಂದು ನರ್ತನ ಪ್ರಬಂಧಗತಿಗಳಿಂ ॥ ಧಾಂ ಧಾಂ ಧಾಂ ಧಾಂ ಧಿಮಿಕೆಂದಾಡಿದ ॥ ಅನುಪಲ್ಲ ॥ ಗರುಡನ ಬಲಿಯುಂಡೂ । ಕಾಳಿಂಗನು । ಅರಿಯದಂತಿರೆ ಕಂಡೂ ॥ ಉರಗರಾಜನು ಮುನಿದೂ । ಪಾತಾಳದಿಂ । ಪೊರಡಿಸಲದನಂದೂ ॥ ಮೆರೆವ ಕಾಳಿಂದಿಯ ಮಡುವಿಲಿ ತನ್ನಯ । ತರುಣಿಯರಣುಗಾದ್ಯರು ಸಹಿತರುತಿರೆ । ಗರಳಜ್ವಾಲೆಯಿಂದುರಿಯೆ ತಡಿಯೊಳಿಹ । ತರುಲತೆಗಳು ಒಣಗೇ ॥ ಚರಿಸುವ ಮೃಗಪಕ್ಷಿಗಳಿಂಗುದಕದ । ಧರೆ ಸೋಂಕಲು ಬಸವಳಿಯಲು ಬಳಿಕಾ । ಹರಿಯೊಂದಿನದಿ ಗೌಗಳ ಗೋವಳರನು । ಮೆರಸಿ ಬಂದನು ಪುಂಪಾಯಿಂದಾಡುತ ॥ ಧಾಂ ಧಾಂ ಧಾಂ ಧಾಂ ಧಿಮಿಕೆಂದಾಡಿದ ॥ ೧ ॥ ತಡೆಯದೆ ಗೋವಳರೂ । ಗೌಗಳುನೀ । ಗುರ್ಡಿದು ಮರಗುತಿರಲೂ ॥ ಮೃಡಸಖನದನಂತೂ । ಉರಗನ । ಪೊರಡಿಪೆನೆಂದೊರೆದೂ । ಕಡಬದ ವೃಕ್ಷವನಡರುತಿರಲು ಸಂ । ಗಡಿಗರೊಡನೆ ಬಿಡದಾ ಕಾಳಿಂದಿಯ । ಮಡುಹಿಲಿ ಧುಮುಕಿ ಕಾ । ಲಿಡುತುದಕದಿ ಗಡ ।.ಬಡಿಸುತಿರಲು ಕೇಳ್ದು ॥ ಕಡುಸ್ಫುಲಿಡುತ್ತೈತಂದಾ ಸರ್ಪನು । ನಿಡುಪಾಶದಿ ಹರಿಯೊಡಲ ಬಿಗಿಯುತಿರೆ । ಬಡಿಸಿಕೊಂಡು ಬೆನ್ನಡಂಬಾಲ । ಪಿಡಿದ್ದೆಡೆಗಳ ತುಳಿದಡಿಗಡಿಗೊತ್ತಿ ಮೆಟ್ಟುತ ॥ ಧಾಂ ಧಾಂ ಧಾಂ ॥ ೨ ॥ ಶಿರದ ಮುಕುಟ ಬೆಳಗೇ । ಬಾಲಳಿ । ಗುರುಳ್ಗಳತ್ತಿತ್ತ ಅಲುಗೇ ॥ ಕಿರುಬೆಂಳಿವೆ ಚಳಕಾ । ತಿಲಕ ಕ । ಸ್ತುರಿಯ ನಿಟಲ ಪಲಕಾ ॥ ಮೆರೆವ ಭ್ರೂಲತೆ ಸರಸಿರುಹದಳಾಕ್ಷಗ । ಳರುಣಾಧರ ನಾಸಾಪುಟಚುಬುಕ । ಮಕರಕುಂಡಲ ನುಣ್ಗಲ್ಲರದನ ಇರು । ಳಿರೆಯುವದನದೊಲಪು॥ ಕೌಸ್ತುಭವನಮಾಲೆಯು

ಪೇರುರದಲಿ । ಬೆಳಗಲಜಾನುಬಾಹು ಭಾಪುರಿ ಕರ ; ವಲಯು ಪೀತಾಂಬರೋಡ್ಯಾಣ ಶೃಂಗರ । ಕರಚರಣಗಳಿಂದುರಗನ ಮೆಟ್ಟಿದ ‖ ಧಾಂ ಧಾಂ ಧಾಂ ‖ ೩ ‖ ಕಂಗಳಡಾಳಗಳೂ । ಭುಜದ ಹ ; ಸ್ತಂಗಳ ಭಾವಗಳೂ ॥ ಮಂಗಳಕೆಸ್ಕೊಡಲಳವಾ । ಅಭಿನವ ಸ । ರ್ವಾಂಗ ಸೊಬಗ ಚೆಲುವಾ ‖ ರಂಗ ಮೋಹಿಸುವ ನಾಟ್ಯಂಗಳ ತೋಱ್ಯಿ । ದಂಗವ ಬೊಮ್ಮನು ಹಿಂಗದೆ ನುಡಿಸಲು । ಗಂಗಾಧರನು ತಾಳಂಗಳ ಪಿಡಿದು ತ । ಳಾಂಗು ಥೈಯ್ಯ ಎನುತಾ ‖ ಸಂಗೀತವ ಪಾಡಲು ಹನುಮನು ಜಲ ; ಪ್ರಂಗವ ಶ್ರುತಿಯೂದಲು ನಾರದನು ಗು । ಣಂಗಳ ಕೀರ್ತಿಸುತಿರೆ ಶ್ರೀಕೃಷ್ಣ ಕಾ । ಳಿಂಗನ ಪೆಡೆಗಳ ಹಿಂಗದೆ ತುಳಿವುತ ‖ ಧಾಂ ಧಾಂ ಧಾಂ ‖ ೪ ‖ ಜಲಜವದನ ಪೊಳೆಯೆ । ಮಕರಕುಂ । ಡಲಗಳತ್ತಿತ್ತಲುಲಿಯೇ ॥ ಗಳದ ಪದಕಹಾರಾ । ಕೌಸ್ತುಭ ಎಡ । ಬಲದೊಲಿವ ವೈಯಾರಾ ‖ ಬಲು ರತ್ನದ ಪ್ರಭೆ ಥಳ್ ಥಳ್ ಥಳ ಥಳ । ಬಳಿ ಸರಪಣಿರವ । ಕಣ್ ಕಣ್ ಕಣ ಕಣ । ಪೊಳೆಯೆ ಪೀತಾಂಬರ ಝುಗ್ ಝುಗ್ ಝುಗ ಝುಗ । ಪಳಿಸರ ಘಂಟೆಗಳೂ ॥ ಉಲಿಯೇ ಸ್ವರ ಕಿಣ್ ಕಿಣ್ ಕಿಣ್ ಕಿಣ ಕಿಣ । ಚೆಲುವ ಹೆಜ್ಜೆ ಝುಲ್ ಝುಲ್ ಝುಲ್ ಝುಲ ಝುಲ । ನಲಿವ ಗೆಜ್ಜೆ ಘಲ್ ಘಲ್ ಘಲ್ ಘಲ್ಲನೆ । ತುಳಿದಹಿಪನ ಪೆಡೆಗಳಲಿ ನಲಿಯುುತಲಿ ‖ ಧಾಂ ಧಾಂ ಧಾಂ ‖ ೫ ‖ ಚಿತ್ರಜಪಿತನಿಂತೂ । ನೃತ್ಯವಾಡುವ । ಅರ್ಥಿಯುನದನೆಂತೂ ॥ ವಿಸ್ತರಿಸುವರಳವೇ । ಪರಾತ್ಪರ । ವಸ್ತು ಲೀಲೆಯು ಮೆರೆಯೇ ‖ ಕೃತ್ತಿವಾಸನು ಭಲ ಭಲರೆನುತಿರೆ ಸುರ । ಪೋತ್ತಮರೆಲ್ಲರು ಧಿರುರೆ ಧಿರುರೆಯೆನೆ । ಉತ್ತಮ ವಾಮಕರಾಗ್ರದಿ ಫಣಿಪನ । ಎತ್ತಿಬಾಲವ ಪಿಡಿದೂ ‖ ಒತ್ತುತ ನಡುಬೆನ್ನಲಿ ಶಿರವ ನಿಗುರಿ । ಸುತ್ತ ಪೆಡೆಗಳನು ತುಳಿದು ಕಾಳಿಂಗನ । ಸತ್ವವಡಗದು ಶೌರ್ಯತ್ವವಳಿದು ತಲೆ । ಯೆತ್ತುತ ಮೂರ್ಛೆಯೊಳ್ ವೆತ್ತಿರಲಗಲದೆ ‖ ಧಾಂ ಧಾಂ ಧಾಂ ‖ ೬ ‖ ಬಲುನಾಟ್ಯದ ಗತಿಗೇ । ವಿಷವ ಬ್ಯಾ । ಗಳಲುಗುಳುತಲಿಳೆಗೇ ॥ ಕಲಿತನವೆಲ್ಲಡಗೇ । ಉರಗ ಬಸ । ವಳಿದು ಬಿದ್ದನು ಸೊರಗೇ ‖ ಅಳಲುತವನ ಸ್ತ್ರೀಯುರು ವಂದಿಸಿ ಬೇಡಿ । ಕೊಳಲು ಕರುಣದಿಂದುಳುಹಿ ಕಾಳಿಂಗನ । ಜಲದಿಂದಟ್ಟಿಸಿ ಜಲನಿಧಿಯನು ನಿ । ರ್ಮಲಗೈದಷ್ಟು ಸಲೆ ದಯುದಿಂದೀಕ್ಷಿಸಿ ॥ ಗೋಗೋಪಸಂಕುಲವೆಬ್ಬಿಸಿ ವಡನಾಡುತ । ನಂದಗೋಕುಲವ ಪೊಕ್ಕನು ಗುಣನಿಧಿ । ಗುರುವೆಂಕಟಾಚಲಪತಿ

ಉಡುಪಿನ ಚಲುವ ಶ್ರೀಕೃಷ್ಣನು ॥ ಧಾಂ ಧಾಂ ಧಾಂ ಧಾಂ ಧಿಮಿಕೆಂದಾಡಿದ । ಗೋವಿಂದಾ ನಂದನ ಕಂದಾ ॥ ೬ ॥ ಶ್ರೀಕೃ ॥

॥ ೨೬ ॥ ರಾಗ ಬೃಂದಾವನ ಸಾರಂಗ ಅಥವಾ ಮಧ್ಯಮಾವತಿ, ತ್ರಿವುಡೆತಾಳ.

ನುತಿಸಲೆನ್ನಳವೆ ನಿನ್ನಾ । ಕೀರ್ತಿಸಂಪನ್ನಾ । ನುತಿಸಲೆನ್ನಳವೇ ನಿನ್ನ ॥ ಅತಿಶಯದ ಮಹಿಮೆಯನು ಮೆರೆಸುತ । ಪೃಥುವಿಯೊಳು ಪೆಸರೊಡೆದು ಸುಜನ । ಪ್ರತತಿಯನು ಪಾಲಿಸುವ ಕರುಣಾ । ವೃತ ಶರಧಿ ಶ್ರೀಮಂಜುನಾಥನೆ ॥ ನುತಿಸ ॥ ಪಲ್ಲ ॥ ಜಲಜಸಂಭೂತಾಂಡವೂ । ಪಂಚಶತಕ್ಕೋಟಿ । ಇಳೆಯು ತೋರ್ಪ ಯೋಜನವೂ । ಸಪ್ತದ್ವೀಪಗ । ಳೊಳಗೆ ಜಂಬೂದ್ವೀಪವೂ ॥ ದ್ವೀಪಮಧ್ಯದಿ । ಹೊಳೆವ ಕನಕಾಚಲದ ತೆಂಕಣ । ಪೊಳಲು ಐವತ್ತಾರು ದೇಶಗ । ಳೊಳಗೆ ತೌಳವದೇಶಮಧ್ಯದಿ । ಚಲುವ ನೇತ್ರಾವತಿನದಿಯು ನಿ । ರ್ಮಲದ ದಕ್ಷಿಣತಟದ ಕ್ಷೇತ್ರ ಒಂದಳತೆಯೊಳು ರಾಜಿಸುವ ಧರ್ಮ । ಸ್ಥಳಕೆ ಸ್ವರ್ಣಕದಳಿಯಿಂದೈತಂದು । ನೆಲಸಿರುತಿಹ ನಿಶ್ಚಲ ಮಹೇಶನೆ ॥ ನುತಿಸಲೆನ್ನಳವೆ ನಿನ್ನ ॥ ೧ ॥ ಮುನ್ನಿರಾಮಥನದಲೀ । ಶಿವನಂಘ್ರಿಯು । ತ್ಪನ್ನನೆಂದೆನಿಸುತಲೀ । ಕಾಳರಾಹುವೆಂ । ಬುನ್ನತಭಿಧಾನದಲೀ ॥ ಮೆರೆವುತಾ ಸಂ । ಪನ್ನ ಕಾಳರ್ಕಾಂಬೆ ಸಹಿತ ಪ್ರ । ಸನ್ನರೂಪದಿ ಪೊರಟು ಬರುತು । ತ್ಪನ್ನ ಕೊಳ್ಳಿಕುಮಾರ ಸದ್ಗುಣ । ರನ್ನ ಕನ್ನೆಕುಮಾಂ ಸಹಿತಲೆ । ಪುಣ್ಯಕರಸ್ಥಳವೆಂದು ನೆಲಸುತ । ಅನ್ನದಾನ ಧರ್ಮಗಳನಡಸಿ ಭು । ವನ್ನದೊಳಗಿಹ ಜನರ ಪಾಲಿಸ । ಚನ್ನಗಜವಾಹನ್ನದೇವನೆ ॥ ನುತಿಸಲೆನ್ನಳವೆ ನಿನ್ನಾ ॥ ೨ ॥ ರಕ್ಕಸರುರುಬೆಗಾಗೀ । ನೆರವುತ್ತ । ಮರ್ಕಳೆಲ್ಲರೊಂದಾಗಿ । ಪ್ರಾರ್ಥಿಸಲು ಮ । ಹಾಕ್ರೂರರೂಪಿಯಾಗಿ ॥ ಪ್ರಜ್ವಲಿಸಿ ರಣದಲಿ । ಸೊಕ್ಕಿದಸುರರ ಕುಕ್ಕಿ ಯಮನ ಪು । ರಕ್ಕೆ ಕಳುಹಿ ಜನಕ್ಕೆ ಅಭಯವಾ । ಅಕ್ಕರಿಂದಲಿ ಕೊಟ್ಟು ತ್ರೈಭುವ । ನಕ್ಕೆ ಪತಿಯಹ ಕಾಳರಾಹುವಿ । ನಕ್ಕರುಳ್ಪಧರ್ಮಾಂಗಿ ಎನಿಸಿ ಜ । ಗಕ್ಕೆ ಮಹಿಮೆಯ ತೋರಿ ಭಕ್ತರ । ಚೊಕ್ಕಟದಿ ಪಾಲಿಸುವ ಶ್ರೀಕಾ । ಳಾರ್ಕದೇವೀ ಕರುಣಸಾಗರೆ ॥ ನುತಿಸಲೆನ್ನಳವೆ ನಿನ್ನ ॥ ೩ ॥ ಲಟಕಟಸುತ ಕಾಮನೂ । ಪೂಶರವ ಧೂ । ರ್ಜಟಿಯು ಕಾಣುತ್ತೆಸೆದನೂ । ರೋಷಿಸುತ್ತಾಗ । ನಿಟಿಲಾಕ್ಷಿಯ ತೆರೆದನು ॥ ಧಗಧಗಿಸಲು । ಛಿಟಛಿಟ ಛಿಟಿಲೆನುತ ಪೊರಡುವ । ಉರಿಯೊಳು । ತ್ಕಟರು ಹಿಂದವತರಿಸಿ ಜಗದಲಿ ಪ್ರ । ಕಟಕೊಳ್ಳಿಕುಮಾರನೆಂಬೀ । ಚಟುಳ ನಾಮದಿ ಮೆರೆದು

ಜನರ ಸಂ । ಕಟಪ ತಂವುತ ಸಲಹಿ ಕೀರ್ತಿ ದಿ । ಗ್ತಟಕೆ ಮೆರಸುತ । ತುರಗ ಯಾನಸಂ । ಘಟಿತ ಕನ್ನೆಕುಮಾರಿಯೋಲ್ಲಭ । ಧಿಟದಿ ಸಲಹೊ ದಯಾ ಸಮುದ್ರನೇ ‖ ನುತಿಸಲೆನ್ನಳವೆ ನಿನ್ನ ‖ ೪ ‖ ಧಾರುಣೀಯುಮುರ ನಲೀ । ದಯದಿ ದಿವ್ಯಾ । ಕಾರ ಸ್ವರೂಪಿನಲೀ । ಲಾವಣ್ಯಾಬ್ಧೀ । ಸಾರೆ ಎಂದೆ ನಿಸುತಲೀ ‖ ಅವತಂಸಿ ರಂಜಿಸಿ । ಶೂರಸಾಹಸವೀರ ಕೊಳ್ಳಿಕು । ಮಾರ ನರ್ಥಶರೀರೆಯೆನಿಪ ಶ್ರಂ । ಗಾರೆ ಮೋಹನಕಾರೆ ಶರಧಿಗಂ । ಭೀರೆ ನೀತಿ ವಿಚಾರೆ ಕರುಣಾ । ಸಾರೆ ಸಲೆಶ್ರಂಗಾರೆ ಕವಿಜನೋ । ದ್ಧಾರೆ ನಿನ್ನನು ಸೇರಿದೆನು ದಯು । ದೋರಿ ಸಲಹೇ ಧೀರೆ ಕನ್ಯಕುಮಾರಿ ದೇವಿಯೇ ‖ ನುತಿ ಸಲೆನ್ನಳವೆ ನಿನ್ನ ‖ ೫ ‖ ಮೆರೆವ ಶ್ರೀಪಡೆಯುರನೂ । ಕಾಣಿಸಿಕೊಳ್ಳಲಂತ ಧಿಕಾರವನೂ । ಕೊಡಲು ಅಂಗೀ । ಕರಿಸಿ ಮಂತ್ರಿತ್ವವನೂ ‖ ಮಾನಿಸಿ ನೀನೂ । ಚರರ ಮೋಳದಿ ದೇಶದೇಶದೂ । ಳಿರುವ ಜನರೆಡೆಂಪತ್ತುಗಳ । ಪಂಹರಿಸಿ ಪರಧೊರೆತನಗಳಿಂ । ಹಂಕೆ ಕಾಣಿಕೆಕಪ್ಪಗಳನನ । ವರತ ತಂಸಿ ಭಂಡರವ ತುಂಬಿಸಿ । ನಿರತ ಧರ್ಮವ ನಡಸಿ ಕೀರ್ತಿಯು । ಮೆರೆವ ವಿಭ ವೈಶ್ವರ್ಯ ಪೇರ್ಚಿಪ । ವರ ಅಣ್ಣಪ್ಪ ಪ್ರಧಾನ ಶೇಖರ ‖ ನುತಿಸಲೆನ್ನಳವೆ ನಿನ್ನ ‖ ೬ ‖ ಪೊಡವೀಗಧಿಕವೆನಿಸೀ । ರಾಜಿಸುತಿಹ । ಕುಡುವು ಪುರದಿ ನೆಲಸೀ । ದಾನಧರ್ಮವ । ಬಿಡದನುದಿನ ನಡೆಸೀ ‖ ಕೀರ್ತಿಯಾ ಮೆರೆಸಿ । ಕಡುನಿಪುಣನಾಗಿಹ ಕುಮಾರಹೆ । ಗ್ಗಡೆ ನರೇಂದ್ರರ ರಕ್ಷಿಸುತ ಪೆಸ । ರೊಡದು ನಂಬಿದ ಭಕ್ತಂಷ್ಟವ । ಕೊಡುವ ಕರುಣಾರ್ಣವ ಸದಾಶಿವ । ವೃಢನ ಸಖ ಗುರುವೇಂಕಟನೆ ನಿ । ನ್ನಡಿ ಕಮಲಗಳ ಸೇರಿದೆನು ಕೈ । ಪಿಡಿದು ಕರುಣದಿ ಕಾಮಿತಾರ್ಥವ । ಕೊಡುತ್ತುಳುಹು ಶ್ರೀ ಮಂಜು ನಾಥನೆ ‖ ನುತಿಸಲೆನ್ನಳವೆ ನಿನ್ನಾ ‖ ೭ ‖ ಶ್ರೀ ೬೪ ‖

‖ ೨೨ ‖ ರಾಗ ಬೃಂದಾವನ ಸಾರಂಗ [ಧಾಟಿ:– ನುತಿಸಲೆನ್ನಳವೆ ನಿನ್ನ] ತ್ರಿವುಡೆತಾಳ

ಪೊಗಳಲೆನ್ನಳವೇ ನಿನ್ನಾ । ಕೀರ್ತಿಸಂಪನ್ನಾ । ಪೊಗಳಲೆನ್ನಳವೆ ನಿನ್ನಾ ‖ ಜಗದೊಳಗೆ ಪೆಸರ್ಗೊಡೆದು ಭಕುತಂ । ಗಗಣಿತದ ಸಂಪದವ ಪಾಲಿಫ । ಸುಗುಣನಿಧಿ ನರಸಿಂಹ ಕರುಣಾ । ಳುಗಳರಸ ಶ್ರೀವೆಂಕಟೇಶನೆ ‖ ಪೊಗಳಲೆನ್ನಳವೆ ನಿನ್ನಾ ‖ ಪಲ್ಲ ‖ ಸರಸೀರುಹಭವಾಂಡವೂ । ಪಂಚಶತ ಕ್ಕೋಟಿ । ಧರಣೀಯ ವಿಸ್ತಾರವೂ । ಮಧ್ಯದಿ ಶೋಭೆ । ಸಿರುವ ಜಂಬೂ ದ್ವೀಪವೂ । ಇಳಾವ್ರತದೀ । ಸ್ಫುರಿಸುವ ಮಹಮ್ಮೇರುವೂ । ಗಿರಿಯ

ದಕ್ಷಿಣದಿ ॥ ಭರತಖಂಡ ಛಪ್ಪನ್ನದೇಶಗ । ಳಿರಲು ತೌಳವರಾಷ್ಟ್ರ ಪಶ್ಚಿಮ್ಮ। ಶರಧಿ ತಟದಲಿ ತೋರ್ಪುತಿರುತಿಹ । ಪರಮ ವಳಲಂಕಾಪುರಿಯು ಭೂ। ವರನಿಗೊಲಿವುತಲಿರುವ ದೇವನೆ । ನಿರತ ಕೊಂಕಣದೇಶ ವಿಪ್ರರ । ಕರದಿ ಪೂಜೆಯುಗೊಂಡು ಸುಜನರ । ಕರುಣದಿಂದುದ್ಧರಿಸಿ ನೆಲಸಿಹ । ಕರುಣ ನಿಧಿ ಶ್ರೀ ವಿಠಲ ದೇವನೇ ॥ ಪೊಗಳಲಿನ್ನಳವೇ ನಿನ್ನ ॥ ೧ ॥ ವೇದ ಭರಿತ ನಾಗಿ । ಬಹುಲೀಲಾ ವಿ । ನೋದ ವಿಭವಕ್ಕಾಗಿ । ಕಾರ್ಕಳದಿಂದ । ಸಾಧಿಸು ತ್ತಲೇ ಸಾಗಿ । ಬರುತಲಿ ಲೋ । ಕಾಧಾರಸ್ಥಿತನಾಗೀ ॥ ಸೇವಿಸುತಿಹ । ವೇದ ಶಾಸ್ತ್ರಪ್ರವುಥರಾಗಿಹ । ಭೂದಿವಿಜ ಜನಕೊಲಿದು ಭೋಗದ । ವೇದಿನೀ ಸ್ಥಳವೆಂದು ಸುಜನಾ । ಲ್ಹಾದದಿಂದಲಿ ದಯದಿ ನೆಲಸುತ । ಚೋದ್ಯದತಿ ಮಹಿಮೆಯುನು ಮೆರಸುತ । ಸಾಧು ಭಕತರ ಸತತ ಸಲಹುತ । ಶ್ರೀಧರಾ ಚ್ಯುತ ಸುರವರಾರ್ಚಿತ । ಆದಿ ಮೂರ್ತಿ ಶ್ರೀ ವೆಂಕಟೇಶನೆ ॥ ಪೊಗಳಲಿನ್ನ ಳವೇ ನಿನ್ನ ॥ ೨ ॥ ಮುನಿಕುಲಾಂಬುಧಿ ಚಂದ್ರಾ । ವಿದ್ಯಾನಿಧಿ । ಮುನಿಯ ಕರಾಬ್ಜದಿಂದಾ । ಪೂಜೆಯ ಗೊಳು । ತ್ತನುಸರಿಸುತಾನಂದಾ । ತೆರಳಿಬಂದು। ಮನದತಿ ಹರುಷದಿಂದಾ ॥ ಕರುಣಿಸುತ । ಘನತರದ ಸುಮುಹೂರ್ತದಲಿ ಬುಧ। ಜನರ ಶ್ರುತಿಮಂತ್ರಂಗಳಲಿ ಸ । ಜ್ಜನರ ಜಯುನಿನದದಲಿ ಯತಿಕರ । ವನಜದಿಂದ ಪ್ರತಿಷ್ಠೆಗೊಂಡ। ರ್ಚನೆಯ ಕೈಕೊಳ್ಳುತಲೆ ನೆಲಸೀ । ದಿನದಿನಕೆ ಮಹಿಮೆಯ ಪೇರ್ಚಿಸುತ ಬಹು । ಜನರ ದುರಿತವ ತರಿದು ಸಲಹುವ । ಚಿ ನುಮಯಾತ್ಮ ಶ್ರೀನಾರಸಿಂಹನೆ ॥ ಪೊಗಳಲಿನ್ನಳವೆ ನಿನ್ನಾ ॥ ೩ ॥ ತ್ರಿತಯ ನಾಮವ ಧರಿಸೀ । ದಯದಿ ಮೂರ್ತಿ । ತ್ರಿತಯ ರೂಪದಿ ನೆಲಸೀ । ಭಕ್ತರ ಸೌರ। ಕ್ಷಿತದ್ವಯುನೆಂದೆನಿಸೀ । ಬಹುಜನಕು । ನ್ನತದಭೀಷ್ಟವ ಪಾಲಿಸೀ ॥ ಪೊರೆವ ದೇವ । ಪ್ರತಿದಿನದಿ ಪೂಜಿಸುವ ಬುಧಸಂ । ತತಿಯ ಪೇರ್ಚಿಸಿ ವಿಪ್ರಜನರಿಂ । ಗತಿಶಯದ ಸೌಭಾಗ್ಯ ಸಿರಿಸಂ । ಪತುಗಳ ಪಾಲಿಸುತ ಕರುಣದಿಂ। ದತಿಮಹಿಮೆಯುನು ತೋರಿ ವಿಭವೋ । ನ್ನತಿಗಳನು ನಡಸುತ್ತ ಲೋಕದಿ। ಪ್ರತಿರಹಿತನಪ್ರತಿಮನೆನಿಪ ಶ್ರೀ । ಪತಿಯೆ ನಿನ್ನಯ ವಿತತ ಮಹಿ ಮೆಯ॥ ಪೊಗಳಲಿನ್ನಳವೆ ನಿನ್ನ ॥೪॥ ನಿರತ ಸೇವೆಯುನು ಗೈವಾ । ಕಾಲಭೈ ರವ। ಗೊರದು ಸರ್ವಾಧಿಕಾರವಾ । ಕೊಡಲದರತಾನಂತನಾಥರ ವಿಘ್ನವಾ। ವಿಛ್ಛಾಗಿಸಿ । ಒರೆದು ಪೇಳ್ವ ವಿವರವಾ ॥ ವಾರ್ತೆಯ ಕೇಳಿ । ನೆರೆದು ಸ್ತ್ರೀ ಪುರುಷರು ಬರುತ ಪದ। ಕೆರಗಿ ಬಿನ್ನಹಗೈಯ್ಯಲಿಡರನು । ಪರಿಹರಿಸಿ ಸಿರಿ

ಸಂಪತ್ತುಗಳ । ಕರುಣಿಸುತಲೇ ದೇಶದೇಶದ । ಹರಕೆಗಳ ತರಿಸುತ್ತ ಭಕ್ತರ । ಪೊರೆದು ಕೀರ್ತಿಯು ಮೆರೆದು ಸದ್ಗುಣ । ಭರಿತ ಪೂರ್ಣಾನಂದ ಮೂಲಿಕ । ಪುರದ ಶ್ರೀಗುರುವೆಂಕಟೇಶನೆ ॥ ಪೊಗಳಲಿನ್ನಳವೆ ನಿನ್ನ॥೫॥ ಶ್ರೀ

॥ ೨೮ ॥ ರಾಗ ಹುಶೇನಿ [ಧಾಟಿ - ತಪ್ಪುಗಳೆಲ್ಲವ ಒಪ್ಪಿಕೊಳ್ಳಯ್ಯ ಶ್ರೀ] ತ್ರಿಪುಡೆತಾಳ

ಶ್ರೀಲೋಲ ವೆಂಕಟೇಶನ ಸನ್ನಿಧಿಯೊಳಿಹ । ಕಾಲಭೈರವಾ ನಿನಗೆ ನಮೋ ॥ ಪೇಳಲಿನ್ನಳವಲ್ಲ ನಿನ್ನ ಮಹಿಮೆಯು ವಿ । ಶಾಲಕೀರ್ತಿಯು ಜಗದಿ ಬೆಳಗುತ । ಮೇಲೆನಿಸಿ ಪಸರಿಸಿತು ವಿಭವದಿ ॥ ಶ್ರೀಲೋಲ ವೆಂಕಟೇಶನ ॥ ಪ ॥ ಧರೆಗೆ ವೈಕುಂಠವೆನಿಪ ತಿರುಪತಿಯಿಂದ । ತೆರಳಿಲ್ಲಿ ನೆಲಸಿ ಸಾಹಸದೀ ॥ ಮೆರೆವುತ ಸರ್ವಾಧಿಕಾರವ ನಡೆಯಿಸಿ । ವಿವರದಿ ವಿಚಾರಿಸಿ ಮುದದೀ ॥ ಮರೆಹೊಕ್ಕ ಜನರ ಕುಟುಂಬ ಬಳಗವನು । ದ್ಧರಿಸುತ ಸಲಹಿ ಸದ್ವಿಧದೀ ॥ ವರದು ಶುಭಾಶುಭಫಲವನು ಜನಗಳ । ದುರಿತದುರ್ವಿಘ್ನಗಳನೆಲ್ಲವ। ಪರಿಹರಿಸುತಲೆ ದೇಶದೇಶದ । ಹರಕೆಗಳ ತರಿಸುತ್ತೊಡೆಯನ ಭಂ । ಡರವ ತುಂಬುವ ನಿರತ ಶೌರ್ಯನೆ ॥ ಶ್ರೀಲೋಲ ॥ ೧ ॥ ಭೂತವೇತಾಳ ಪೈಶಾಚ ಬ್ರಹ್ಮಜಟ್ಟಿಗ । ರೋತು ಪೀಡಿಸುತಿರೆ ಮುಂಕೊಂಡು ॥ ಭೂತಳದಖಿಳ ದೇವತೆಗಳ ಮರೆಯೊಗ । ಲೇತರ ಗುಣವಿಲ್ಲದಿರೆ ಕಂಡೂ ॥ ಖ್ಯಾತವಾಗಿಹ ತವ ಮಹಿಮೆಯು ಕೇಳುತ್ತ । ಲೇತವಕದಿ ಜನರೈತಂದೂ ॥ ಪ್ರಾರ್ಥನೆಗೈದು ಅರಿಕೆಯ ಗೈಯ್ಯಲಾಕ್ಷಣ ॥ ತೀರ್ಥವನು ಪ್ರೋಕ್ಷಿಸಲು ಗ್ರಹಗಳು । ಭೀತರಾಗುತ ಬಿಟ್ಟು ತೊಲಗುತ । ಪ್ರೀತಿಯುಲಿ ನೀ ತೋರ್ದ ಸ್ಥಳದಲಿ । ಸೋತು ನೆಲಸುತ ಸೇವೆಗೈವರು ॥ ಶ್ರೀಲೋಲ ॥ ೨ ॥ ಮೆರೆವಾಂಜನಕೆ ಜೋಯಿ। ಸರ ನೋಟಗಳಿಗೆ ಗೋ । ಚರಿಸದಾ ತೊಡರು ವಿಘ್ನಂಗಳನೂ ॥ ಸುರುಚಿರ ಸ್ವರ್ಣದುಂಗುರಕೆ ಮಾಣಿಕ್ಯದಾ । ಹರಳು ಕೆತ್ತಿಸಿದಂತೊರೆದು ನೀನೂ ॥ ಹರಿಯ ತೀರ್ಥಪ್ರಸಾದ ಕೊಡುತೆಲ್ಲರ ಹರುಷ । ಗೊಳಿಸಿ ಸ್ತ್ರೀಪುರುಷರನ್ನು ॥ ಪೊರೆದು ಸಂತಾನಾಭಿವೃದ್ಧಿಯು ಕೊಡಿಸುತ । ಥರಥರದ ವಿಭವೋತ್ಸವಗಳನವರತ ॥ ನಡಸುತಲೆ ಶ್ರೀವರನ । ಚರಣಕಮಲವ ಮೆಚ್ಚಿಸುತ ನಿ । ರ್ಧರದ ಸೇವೆಯು ಪರಿಯು ಸೊಬಗಿನ ॥ ಶ್ರೀಲೋಲ ವೆಂಕಟೇಶನ ॥ ೩ ॥ ಜನವೆಲ್ಲ ನೋಡಿ ಜನ್ಮವ ಸಾರ್ಥಕವ ಗೈಯ್ಯಲೆನುತ ರಥೋತ್ಸವಾದಿಗಳನೂ ॥ ಅನುಗೊಳಿಸುತಲೊಡೆಯನಾಲಯದ ಸುತ್ತ । ಜನರಿಂದ ಬಡಿಸಿ ಬೀದಿಗಳನೂ ॥ ಮನ

ಮುಟ್ಟಡಿಸಿ ತದ್ದ್ವಾರುವರಿಂದಲಿ । ಎಣೆಯಿಲ್ಲೆನಲು ಮಹಾ ರಥವನ್ನು ॥ ಸುರಗಣ ಪೊಗಳುವ ರಚನೆಯುಗೈಸುತ್ತ ॥ ಸನುಮತಿಸಿ ಸನ್ನಹವ ಸೇವಕ ಜನರು ಅನುಕರಿಸಿದರು ಭಕುತಿಲಿ ॥ ಶ್ರೀಲೋಲ ॥ ೪ ॥ ಎಂಬ ಶಾಲಿವಾಹನಶಕ ಸಾವಿರದ ನೂರ ತೊಂಭತ್ತೊಂಭತ್ತನೆಯಾವರ್ತನಾ ॥ ಇಂಬಾಗಿರುವ ಹೇಮಲಂಬಿ ಲಬ್ಧವು ಚೈತ್ರ । ವೆಂಬ ಮಾಸ ಶುದ್ಧ ನವಮೀದಿನಾ ॥ ಸಂಭ್ರಮದಲಿ ರಥೋತ್ಸಹವ ನಡೆಸಿ ಜಯ । ವೆಂಬರು ನೆರೆದು ನೋಡೂ ಮಾಜನಾ ॥ ಕುಂಭಿನಿಯೊಳು ಕೀರ್ತಿ ಪಸರಿಸಿತನುದಿನ ॥ ನಂಬಿದೆನು ಮೂಲಿಕಪುರದ ಕರುಣಾಂಬುನಿಧಿ ಗುರು ವೆಂಕಟೇಶ ಪ । ದಾಂಬುಜದ ಸೇವಕ ಸುಜನಕುಟುಂಬನೆನಿಸಿದ ಕಾಲಭೈರವ ॥ ಶ್ರೀಲೋಲ ವೆಂಕಟೇಶನ ಸನ್ನಿಧಿಯೊಳಹ ॥ ೫ ॥ ಶ್ರೀ ॥

॥ ೨೯ ॥ ರಾಗ, ಸುರುಟ [ಧಾಟಿ:- ಬಿಂದುಮಾಧವಾ ನಮೊ] ರೂಪಕತಾಳ

ನಮೋ ಭೈರವಾ । ನಮೊ ಕಾಲಭೈರವಾ ॥ ನಮೊ ಭೈರವಾ ಎನಲು ಅಮರಿದಪಮೃತ್ಯು ಪರಿಹರವು ॥ ನಮೊ ಭೈರವಾ । ನಮೊ ಕಾಲಭೈರವಾ ॥ ॥ ಪಲ್ಲ ॥ ಧರೆಗೆ ಪುಣ್ಯಕ್ಷೇತ್ರವಾಗಿ । ಮೆರೆವ ಕಾಶಿವಾಸಿ ಎನಿಸಿ । ಮರೆಯ ಹೊಕ್ಕ ಸದ್ಭಕ್ತರನು । ದ್ಧರಿಸಿ ದುರಿತ ಪರಿವ ದೇವ ॥ ನಮೋ ಭೈರವಾ ॥ ॥ ೧ ॥ ಉರಗನಿಭ ಪ್ರಜ್ವಲಿಪ ಜಟಾ । ಧರ ತ್ರಿನೇತ್ರ ಸರ್ಪಕುಂಡಲ । ಭರಿತಭಾಗ್ಯದಾತ ಭಯಸಂ । ಹರಣ ದೀನೋದ್ಧರಣ ದೇವ ॥ ನಮೋ ಭೈರವಾ ॥ ೨ ॥ ಸ್ಥೂಲಕಾಯ ವಿಜಿತಮಹಾ ಕ । ರಾಳ ರೂಪನಂಜನಾಂಗ । ವ್ಯಾಳಭೂಷನಮಿತ ಬಲ ತ್ರಿ । ಶೂಲ ವೇದಧರಿಸುವೀರ ॥ ನಮೋ ಭೈರವಾ ॥ ೩ ॥ ಕರಯುಗಳಕೆ ವೀರಕಂಕಣ । ಸ್ಫುರಿತ ಶೋಣಾಂಬರದುಡಿಗೆಯು । ಮೆರೆವ ಕಟಗೆ ಘಂಟೆಮಾಲೆ । ಧರಿಸಿ ರಂಜಿಸಿರುವ ದೇವ ॥ ನಮೋ ಭೈರವಾ ॥ ೪ ॥ ಚರಣಯುಗಕೆ ಗೆಜ್ಜೆ ನೂಪುರ । ಮೆರೆವ ಪೆಂಡೆಯುಗಳ ನಾನಾ । ಬಿರಿದಿನಾಲಂಕಾರ ಶೋಭಿ । ಸಿರುವ ವೀರಪಾರದೇವ ॥ ನಮೋ ಭೈರವಾ ॥ ೫ ॥ ಹರನ ಬೆಸನದಿಂದ ರಾಮೇ । ಶ್ವರಕೆ ತೆರಳಿ ರಾಮಕೃತು ವಿ । ಸ್ತರದ ಸೇತುಸ್ನಾನಗಳನು । ವಿರಚಿಸಿದ ಮಹಾನುಭಾವ ॥ ನಮೋ ಭೈರವಾ ॥ ೬ ॥ ವರ್ತಿಸುವ ಶೇಷಾಚಲಕ್ಕೆ । ಅರ್ಥಿಯಿಂದ ಬಂದು ನೆಲಸಿ । ಭಕ್ತಿಯುತ ಸೇವೆಯನುಗೈದು । ಕೀರ್ತಿಯನ್ನು ಪಡೆದ ದೇವ ॥ ನಮೋ ಭೈರವಾ ॥ ೭ ॥ ಮೆರೆವ ನಾಲ್ಕು ದಿಗ್ಗೀಶಗಳ । ಲ್ಲಿರುವ ಭಕ್ತ

ಜನರ ಬಗಿಸಿ । ವರದು ಕಪ್ಪಕಾಣಿಕೆಯು ಭಂ। ಡರವ ತುಂಬಿಸಿರುವ ದೇವ ॥ ನಮೋ ಭೈರವಾ ॥ ೮ ॥ ಎಲ್ಲಿ ತಿರುಮಲೇಶ ಸ್ಥಳಗ । ಳಲ್ಲಿಗಲ್ಲಿಗೈದು ದೃಢದಿ । ಬಲ್ಲವಿಕೆ ಮಂತ್ರಿತ್ವವನ್ನು । ನಿಲ್ಲದೇ ಕೈಕೊಂಡ ಧೀರ ॥ ನಮೋ ಭೈರವಾ ॥ ೯ ॥ ಬಿಡದೆ ಜನರಾಪತ್ತು ಸಂ । ಕಟಗಳ ನಿನಗಂಕೆಗೈಯೆ ಶ್ರೀ । ವೊಡೆಯನೋಳ್ತಿಳಿದು ವಿಷ್ಣು । ಒಡನೆ ವಿವಂಸಿ ಪೇಳ್ವ ದೇವ ॥ ನಮೋ ಭೈರವಾ ॥ ೧೦ ॥ ಹಿಡಿದು ಬಿಡದೆ ಪೀಡೆಗೊಡುವ । ಕೆಡುಕಗ್ರಹಪಿಶಾಚಿ ಗಳನು । ಝಡಿದು ಹರಿತೀರ್ಥವ ಪ್ರೋಕ್ಷಿಸುತ । ಬಿಡಿಸಿ ಬಾಧಕವ ನಿಲಿ ಸುವ ॥ ನಮೋ ಭೈರವಾ ॥ ೧೧ ॥ ಹರಕೆ ಕಪ್ಪಕಾಣಿಕೆಗಳ । ಮೆರೆವ ಭಕ್ತರಿಂದ ಬಗಿಸಿ । ಹಂಭಂಡರವ ತುಂಬಿಸುತ್ತ । ನಿರತಸೇವೆಯೋಳಿರುವ ದೇವಾ ॥ ನಮೋ ಭೈರವಾ ॥ ೧೨ ॥ ಧರೆಯೊಳತ್ಯಧಿಕ ಮೂಲಿಕೆಯ । ಪುರದ ಶ್ರೀಗುರುವೆಂಕಟೇಶನ । ಚರಣಸೇವ್ಯನಾಗಿ ಭಕ್ತರ । ಪೊರೆಯು ತಿಹ ಶ್ರೀಕಾಲಭೈರವಾ ॥ ನಮೋ ಭೈರವಾ ॥ ೧೩ ॥ ಶ್ರೀ ॥

॥ ೩೦ ॥ ರಾಗ, ಸುರುಟ [ಧಾಟಿ:- ನಮೋ ಭೈರವಾ ನಮೋ ಕಾಲ] ರೂಪಕತಾಳ

ಬಿಂಧು ಮಾಧವಾ । ನಮೋ । ಬಿಂಧುಮಾಧವಾ ॥ ಬಿಂಧುಮಾ ಧವಾ ನಮೊ । ಎಂದು ಸ್ಮರಣೆಗೈಯ್ಯೆ ಸರ್ವ । ಬಂಧುಬಳಗದೊಡನೆ ತನ್ನ । ಮಂದಿರದಲಿ ಸುಖದಿ ಬಾಳ್ವ ॥ ಬಿಂಧುಮಾಧವಾ ॥ ಪ ॥ ವೇದಘೋಷ ವೆಸೆಯೆ । ನಾನಾ । ವಾದ್ಯನರ್ತನದ ವಿಭವವಿ । ನೋದದಿಂದಣವನೇರಿ । ಬೀದಿಗಾಗಿ ಪೊರಟುಬರುವ ॥ ಬಿಂಧುಮಾಧವಾ ॥ ೧ ॥ ಸಾಲುಸಾಲೆಸೆವು ತಿಹ ಬೊಂ । ಬಾಳದೀವಟಗೆಳತಿ ಥ । ಡಾಳಿಸುತಿರೆ ಬೆಳಕುಗಳ ಸಂ । ಮೇಳದಿಂದ ತೆರಳಿಬರುವ ॥ ಬಿಂಧುಮಾಧವಾ॥ ೨ ॥ ಚಿತ್ರಥರದ ಟಕ್ಕೆಪಕ್ಕೆ । ಛತ್ರಚಾಮರ ವ್ಯಜನ ರೌಪ್ಯ । ಬೆತ್ತಗಳನು ಪಿಡಿದು ಪಾಠಕ । ರೋತ್ತ ಮರ ಕೈವಾರವೆಸೆಯೆ ॥ ಬಿಂಧುಮಾಧವಾ ॥ ೩ ॥ ಮುಂಗಡೆಯುಲಿ ನುಡಿ ಸುತಿಹ ವ್ಯ । ದಂಗತಾಳವೀಣಾವೇಣು । ಸಂಗೀತದ ಸಗಾಲವೆಸೆವ । ರಂಗಸ್ಥಳದಿ ಮೆರೆದು ಬರುವಾ ॥ ಬಿಂಧುಮಾಧವಾ ॥ ೪ ॥ ಶೇಷಗರುಡ ಹನುಮಹಂಸ । ಭಾಸಿಸುವ ಲಾಲಕಿವಿಮಾನ । ದಾಸನಗಳನಡಂ ಬಹು ವಿ । ಲಾಸವಿಭವದಿಂದ ಬರುವ ॥ ಬಿಂಧುಮಾಧವಾ ॥ ೫ ॥ ನಿಷ್ಠದಖಿಳ ಭಕ್ತಜನ । ರಲ್ಲಿ ಪೂಜೆಗೊಡುವಪಾರ । ಪಲ್ಲವಾರ್ಚನೆಗಳಗೊಳುತ । ಲ್ಲಲ್ಲಿ ಕಾಮಿತಗಳ ಕೊಡುವ ॥ ಬಿಂಧುಮಾಧವಾ ॥ ೬ ॥ ಕೇರಿಕೇರಿ ಮನೆಯ

ಜನರು । ಆರತೀನಿವಾಳಿಗಳನು । ತೋರಿ ಮೆಚ್ಚಿಸಲ್ಕೆ ದುರಿತ । ಹಾರಿ ಸುತ್ತ ಹರುಷಗೊಳುವ ॥ ಬಂಧುಮಾಧವಾ ॥ ೭ ॥ ಸುತ್ತಮುತ್ತ ನೆರೆದ ಸರ್ವ । ಭಕ್ತಜನಸಮೂಹಗೂಡಿ । ಅರ್ಥಿಯಿಂದ ಸ್ವಾಂಗೈದು । ಉತ್ತಮಾ ಲಯುವ ಪೊಗುವ ॥ ಬಂಧುಮಾಧವಾ ॥ ೮ ॥ ಹಲವು ನಾಮರೂಪನೆನಿಸಿ। ನೆಲೆಗೆ ಏಕೋದೇವನಾಗಿ । ಬಲಿದು ಮೂಲಿಕೆಯೊಳು ನಿಂದ । ಚಲುವ ಶ್ರೀಗುರುವೆಂಕಟೇಶ ॥ ಬಂಧುಮಾಧವಾ ॥ ೯ ॥ ಶ್ರೀ8 ॥

॥ ೩೧ ॥ ರಾಗ, ಧನ್ಯಾಸಿ [ಧಾಟಿ:- ಕೋಲುಕೋಲೆನ್ನಿರೊ] ಏಕತಾಳ

ರಾಮರಾಮೆನ್ನಿರೊ । ಸೀತಾಪತೆ । ರಾಮರಾಮೆನ್ನಿರೊ ॥ ರಾಮಾ ಎನ್ನಿ ಸಹಸ್ರ । ನಾಮಕ್ಕೆ ಸಮವಾದ । ಭೂಮಿಜೆಪತಿ ರಘು । ರಾಮನ ದಿವ್ಯ ನಾಮ ॥ ರಾಮರಾಮೆನ್ನಿರೊ ॥ ೧ ॥ ಕ್ರೂರ ರಾವಣಭೀತಿ । ಗಾರುತ ಸುರ ರೆಲ್ಲ । ದೂರೆ ದಶರಥಕು । ಮಾರ ತಾನೆನಿಸಿದ ॥ ರಾಮರಾಮೆನ್ನಿರೊ ॥ ॥ ೨ ॥ ಆ ಮುದ್ದು ಕೌಸಲ್ಯೆಗೆ । ರಾಮ ಕೈಕೆಗೆ ಭರತ । ಸೌಮಿತ್ರಿ ಲಕ್ಷ್ಮಣ ಶತ್ರುಘ್ನರೊಡಗೂಡಿ ॥ ರಾಮರಾಮೆನ್ನಿರೊ ॥ ೩ ॥ ಇರಲು ರಾಮಲಕ್ಷ್ಮಣ ರ । ಕರದೊಯ್ಯೆ ಕೌಸಿಕ । ದುರುಳೆ ತಾಟಕಿಯು ಸಂ । ಹರಿಸಿ ಮಖವ ಕ್ಕಾಯ್ದಾ ॥ ರಾಮರಾಮೆನ್ನಿರೊ ॥ ೪ ॥ ಮಾರೀಚನ ಬಾಣದಿ । ತೂರಿ ಸುಬಾಹುವ ಸಂ । ಹಾರಿಸಿ ಅಹಲ್ಯೆಯು । ದ್ಧಾರವಗೈದ ರಘು ॥ ರಾಮ ರಾಮೆನ್ನಿರೊ ॥ ೫ ॥ ಮಿತುಳೆಗೆ ಪೋಗಿ ಗೌರಿ । ಪತಿಯು ಬಿಲ್ಲನೆ ಮುರಿದು। ಪೃಥಿವಿಜೆಯನೊಲಿಸಿದ । ಅತಿ ಪರಾಕ್ರಮಿ ರಘು ॥ ರಾಮರಾಮೆನ್ನಿರೋ ॥ ॥ ೬ ॥ ಅನುಜರು ದಶರಥ । ನನು ಕೂಡಿಬರೆ ಭಾರ್ಗ । ವನ ಧನುವ ಕೊಂಡಯೋಧ್ಯ । ಕ್ಕನುಕರಿಸಿ ತೆರಳಿಬಂದ ॥ ರಾಮರಾಮೆನ್ನಿರೋ ॥ ೭ ॥ ಜನಕನುಕ್ತಿಗೆ ಸೀತಾ। ವನಿತೆ ಲಕ್ಷ್ಮಣ ಸಹಿತ । ವನಕೆ ಬರಲು ಭರ। ತನಿಗೆ ಪಾದುಕೆಯಿತ್ತಾ ॥ ರಾಮರಾಮೆನ್ನಿರೋ ॥ ೮ ॥ ವಾಸ ಪಂಚವಟಿಯೊ । ಳಾಶೂರ್ಪನಖಿ ಕರ್ನ । ನಾಸಿಕ ತರಿದು ಖರ । ದೂಷಣರನು ಕೊಂದ ॥ ರಾಮರಾಮೆನ್ನಿರೋ ॥ ೯ ॥ ಮಿಸುನಿಯ ಮೃಗವ ಕಳುಹಿ । ದಶಕಂಠ ತಿರುಕನಾಗಿ। ವಸುಧಾತ್ಮಜೆಯ ಬಳಿಯೊ। ಳೊಸದು ಬರಲು ತಿಳಿದ ॥ ರಾಮ ರಾಮೆನ್ನಿರೊ ॥ ೧೦ ॥ ಇರುಳು ಸೀತೆಯು ಕದ್ದು । ದುರುಳ ರಾವಣನೊಯ್ದ। ಪರಿಯ ಪೇಳ್ದ ಜಟಾಯು । ಗಿರದೆ ಮುಕ್ತಿಯನಿತ್ತಾ ॥ ರಾಮರಾಮೆ ನ್ನಿರೋ ॥ ೧೧ ॥ ಕಬಂಧನ ಕಂಡು ಮುಂದೆ । ಶಬರಿಯ ಸಲಹಿ ಮರುತ ।

ಕುವರಗೊಲಿದರ್ಕಜ । ಗಭಯಸೌಖ್ಯವನಿತ್ತ ॥ ರಾಮರಾಮೆನ್ನಿರೋ ॥ ॥ ೧೨ ॥ ಕೊಂದೂ ವಾಲಿಯನು ಕಿ । ಷ್ಕಿಂಧ ಇನಜಗಿತ್ತ । ನಂದದಿ ಕಪಿಗಳ । ವೃಂದವ ನೆರಹಿದ ॥ ರಾಮರಾಮೆನ್ನಿರೋ ॥ ೧೩ ॥ ಅರಸಿಯು ಪುಡುಕಲು । ಮರುತಜನೊಳು ಸೀತಾ । ಗುರುತವರುಹಿ ಬರಲು । ಚರರ ಕಳುಹಿಸಿದ ॥ ರಾಮರಾಮೆನ್ನಿರೋ ॥ ೧೪ ॥ ವನಧಿಯು ದಾಟ ಲಂಕಾ । ವನಿಯೊಳಗಿಹಶೋಕಾ । ವನದಿ ಸೀತೆಯು ಕಂಡ । ಹನುಮರೊಡನೆ ರಘು॥ ರಾಮ ರಾಮೆನ್ನಿರೋ ॥ ೧೫ ॥ ಉಂಗುರವಿತ್ತು ವನವಾ । ಭಂಗಿಸಿ ಪುರವನನ । ಲಂಗೊಪ್ಪಿಸಿದ ಪವನ। ಜಂಗೊಲಿದ ಶ್ರೀರಾಮ ॥ ರಾಮರಾಮೆನ್ನಿರೋ ॥ ೧೬ ॥ ಮಣಿದು ಸೀತೆಗೆ ಪುನಹ । ವನಧಿಯು ದಾಂಟ ಚೂಡಾ । ಮಣಿಯನಿತ್ತೆರಗಲು । ಮನದಿ ಸಂತಸಗೊಂಡ ॥ ರಾಮರಾಮೆನ್ನಿರೋ ॥ ॥ ೧೭ ॥ ಗಣನೆಯಿಲ್ಲದ ಕಪಿ । ಗಣನೊಡನೈದಿ ಗಿಂಗ । ಳನು ತಂಸುತ್ತಂಬುಧಿ । ಯನು ಬಂಧಿಸಿದ ರಘು ॥ ರಾಮರಾಮೆನ್ನಿರೋ ॥ ೧೮ ॥ ಸೇತುವ ದಾಟ ಲಂಕಾ । ನಾಥನ ಪುರವ ಮುತ್ತಿ । ಯಾತೂ ದಾನವರೆಲ್ಲರ । ಘಾತಿಸಿದನು ರಣದಿ ॥ ರಾಮರಾಮೆನ್ನಿರೋ ॥ ೧೯ ॥ ಸುರಪತಿಜಿತು ಕುಂಭ। ಕರಣ ದಶಶಿರನ । ತರಿದು ಲಂಕೆಯ ನಿಜ । ಶರಣಗೊಲಿದ ರಘು ॥ ರಾಮ ರಾಮೆನ್ನಿರೊ ॥ ೨೦ ॥ ಧರಣಿಯಾತ್ಮಜೆಯನಂಗೀ । ಕರಿಸಿ ಪುಷ್ಪಕವೇರಿ । ಪರಿವಾರ ಸಹಿತಯೋಧ್ಯಾ। ಪುರಕೆ ತೆರಳಿಬಂದಾ ॥ ರಾಮರಾಮೆನ್ನಿರೋ ॥ ॥ ೨೧ ॥ ಮೆರೆವ ಸಿಂಹವಿಷ್ಟರವ । ನೇರಿ ತೋಷದಿ ರಾಜ್ಯ । ಪರಿಪಾಲಿಸಿದ ನಮ್ಮ । ಗುರು ವೆಂಕಟೇಶನ ॥ ರಾಮರಾಮೆನ್ನಿರೋ ॥ ೨೨ ॥ ಶ್ರೀ ॥

॥ ೩೨ ॥ [ಧಾಟಿ:- ರಾಮರಾಮೆನ್ನಿರೋ । ಸೀತಾಪತಿ]

ಕೋಲುಕೋಲೆನ್ನಿರೋ । ಸಜ್ಜನರೆಲ್ಲ । ಕೋಲುಕೋಲೆನ್ನಿರೋ ॥ ॥ ಪಲ್ಲ ॥ ಪ್ರಳಯೋದಕದಿ ಮಹ । ಜಲನಿಧಿಯೊಳು ವಟ । ದೆಲೆಯ ಮೇಲೊರಗಿದ । ಚಲುವ ಬಾಲಮುಕುಂದ ॥ ಕೋಲುಕೋಲೆನ್ನಿರೋ ॥ ೧ ॥ ಸೃಷ್ಟಿರಚನೆಯನ್ನು । ಕೊಟ್ಟನು ನಾಭಿಯಿಂದ । ಪುಟ್ಟದಜಗೆ ಸುರ । ಶ್ರೇಷ್ಠನೆನಿಸಿದನಾ ॥ ಕೋಲುಕೋಲೆನ್ನಿರೋ ॥ ೨ ॥ ಆದಿವರಹನಾಗಿ । ಮೇದಿನಿಯನು ತಂದ । ಕಾದಿ ಮಧುಕೈಟಭ । ಸೂದನನೆನಿಸಿದ ॥ ಕೋಲುಕೋಲೆನ್ನಿರೋ ॥ ೩ ॥ ಹಲವವತಾರದಿಂದ । ಕೊಲಿಸಿ ದುಷ್ಟರನೆಲ್ಲ । ವಲಿದು ಸಾಧುಭಕ್ತ ಸು । ಕುಲವನು ಸಲಹಿದ ॥ ಕೋಲುಕೋಲೆನ್ನಿರೋ ॥ ೪ ॥

ನಿಸಿ ಪೆಸರವನ ಮ । ರ್ಥಿಸುತ ವೇದಗಳನ್ನು । ಬಿಸಜಸಂಭವನಿಗೊ । ಪ್ಪಿಸಿದ ಮತ್ಸ್ಯರೂಪಗೆ ॥ ಕೋಲುಕೋಲೆನ್ನಿರೋ ॥ ೫ ॥ ಬೆನ್ನೊಳು ಮಂದರಾದ್ರಿ । ಯನ್ನು ಧರಿಸಿದಮೃತ । ವನ್ನು ಸುರರಿಗಿತ್ತ । ಚನ್ನಕೂರ್ಮ ರೂಪಗೆ ॥ ಕೋಲುಕೋಲೆನ್ನಿರೋ ॥ ೬ ॥ ಭೂತಳವನು ಕದ್ದ । ಖ್ಯಾತ ಹಿರಣ್ಯಾಕ್ಷನ । ಘಾತಿಸಿ ಧರೆಯ ತಂದ । ಶ್ವೇತವರಾಹನಿಗೆ ॥ ಕೋಲು ಕೋಲೆನ್ನಿರೊ ॥ ೭ ॥ ವಿಗಡ ದೈತ್ಯನ ಬಸುರ । ಬಗಿದು ಕರುಳ ಕೊರ ಳೊಳ್ । ನಿಗುಚಿ ಧರಿಸಿದ ನಮ್ಮ । ಸುಗುಣ ನಾರಸಿಂಹಗೆ ॥ ಕೋಲುಕೋ ಲೆನ್ನಿರೋ ॥ ೮ ॥ ಭೂಮಿಯನ್ನು ಯಾಚಿಸಿ । ಆ ಮಹಾಬಲಿಯ ಮನೆಯ । ಹೇಮದ್ವಾರವ ಕ್ಯಾದಾ । ವಾಮನರೂಪನಿಗೆ ॥ ಕೋಲುಕೋಲೆನ್ನಿರೋ ॥ ॥ ೯ ॥ ಕಾಮಧೇನುವಿಗಾಗಿ । ತಾಮಸಕ್ಷತ್ರಿಕುಲ ನಿ । ರ್ನಾಮಗೈದ ಭಾರ್ಗವ । ರಾಮಾವತಾರನಿಗೆ ॥ ಕೋಲುಕೋಲೆನ್ನಿರೋ ॥ ೧೦ ॥ ಸೇತುವ ಗಟ್ಟಿ ದೈತ್ಯ । ನಾಥ ಕುಂಭಕರ್ಣರ । ಘಾತಿಸಿ ಪುರಕ್ಕೈದ । ಸೀತಾಪತಿ ರಾಮಗೆ ॥ ಕೋಲುಕೋಲೆನ್ನಿರೊ ॥ ೧೧ ॥ ಗೊಲ್ಲರ ಪಳ್ಳಿಯೊಳ । ಗೆಲ್ಲೆಲ್ಲಿ ಪೊಕ್ಕು ಬೆಣ್ಣೆ । ಕಳ್ಳನೆನಿಸಿದ ನ । ಮ್ಮಪ್ರಭ ಕೃಷ್ಣನಿಗೆ ॥ ಕೋಲುಕೋ ॥ ೧೨ ॥ ಮಾರಕೋಟರೂಪದಿ । ಘೋರ ತ್ರಿಪುರ ಸ್ತ್ರೀಯರ । ಚಾರುವ್ರತವ ನಪ । ಹಾರಿಸಿದ ಬೌದ್ಧಗೆ ॥ ಕೋಲುಕೋಲೆನ್ನಿರೊ ॥ ೧೩ ॥ ತುಳ್ಕೀ ತೇಜಿಯನೇರಿ । ಅಳ್ಕದ ಮ್ಲೇಂಛರನ್ನು । ಶಿಕ್ಷಿಸಿ ನಮಂದ । ಕಲ್ಕ್ಯವ ತಾರನಿಗೆ ॥ ಕೋಲುಕೋಲೆನ್ನಿರೋ ॥ ೧೪ ॥ ಪ್ರಾರ್ಥಿಸಿದವರಿಗಿ । ಷ್ಟಾರ್ಥ ಗಳನೆ ಕೊಡುವ । ಪಾರ್ಥಸಾರಥಿಯ ಸು । ಕೀರ್ತನಪ್ರಿಯನಿಗೆ ॥ ಕೋಲು ಕೋಲೆನ್ನಿರೊ ॥ ೧೫ ॥ ಅರಿದು ಮರದು ನಾಮ । ಸ್ಮರಣೆ ಗೈದವರಿಗೆ । ಕರೆದು ಮುಕ್ತಿಯನೀವ । ಕರುಣಾಸಾಗರನಿಗೆ ॥ ಕೋಲುಕೋಲೆನ್ನಿರೋ ॥ ॥ ೧೬ ॥ ಮಂದರಧರ ಮುಚು । ಕುಂದವರದ ಮುನಿ । ವೃಂದಸೇವಿತ ಶ್ರೀ ಗೋ । ವಿಂದ ಮುಕುಂದನಿಗೆ ॥ ಕೋಲುಕೋಲೆನ್ನಿರೋ ॥ ೧೭ ॥ ಶೇಷ ಶಯನ ಗರು । ಡಾಸನ ದುರಿತ ವಿ । ನಾಶನ ಮುನಿಜನ । ಪೋಷ ಲಕ್ಷ್ಮೀಶ ನಿಗೆ ॥ ಕೋಲುಕೋಲೆನ್ನಿರೋ ॥ ೧೮ ॥ ಕಾಮಜನಕ ಗುಣ । ಧಾಮ ಸಾಸಿರ ನಾಮ । ಆ ಮಹಾ ದೇವ ಸಾರ್ವ । ಭೌಮ ನಿಸ್ಸೀಮನಿಗೆ ॥ ಕೋಲುಕೋಲೆನ್ನಿರೋ ॥ ೧೯ ॥ ತಾಪರಹಿತ ಸರ್ವ । ಗೋಪಗೋಪಶಾಸ್ತ್ರ ಕ । ಲಾಪ ನಿರ್ಲೇಪ ದಿವ್ಯ । ರೂಪನಾಗಿರುವಗೆ ॥ ಕೋಲುಕೋಲೆನ್ನಿರೊ

|| ೨೦ || ಧರೆಗುತ್ತುಮೂಲಿಕಾ । ಪುರದ ಶ್ರೀನಾರಸಿಂಹ। ಗುರುವೇಂಕಟಾ ರಮಣ ॥ ಭಂತಭಾಗ್ಯದಾತಗೆ ॥ ಕೋಲುಕೋಲೆನ್ನಿರೋ || ೨೧ || ಶ್ರೀ ॥

॥ ೩೩ ॥ ರಾಗ, ಆನಂದಭೈರವಿ [ಧಾಟಿ:- ಜಯ ಹರಿಭಕುತರಿಗಹುದೂ] ಏಕತಾಳ

ಒಬ್ಬನೆ ದೇವ ಕಣಾ । ನರಹರಿ । ಒಬ್ಬನೆ ದೇವ ಕಣಾ || ಒಬ್ಬನ ಸಮ ನಿ । ನ್ನೊಬ್ಬನೆನುತನಂ । ದಬ್ಬಿಸಿತದ್ವೈತದಿ ಬೆರದಾಡುತ । ಕೊಬ್ಬಿದ ಮದದಿಂ । ದುಬ್ಬುವ ದೈತ್ಯರ । ಜಬ್ಬುತ ನರಕಕೆ । ಮಬ್ಬೊಳಿಗೊಳಿಸುವ|| ಒಬ್ಬನೆ ದೇವ ಕಣಾ || ಪಲ್ಲ || ಓನ್ನಮೊ ನರಹರಿ । ಎನ್ನುತಲನುದಿನ । ವರ್ಣಿಪ ಬಾಲನ । ಬನ್ನಬಡಿಸಿ ಸ್ತಂಭ । ವನ್ನೊಡದುದಿಸಿ ಹಿ । ರಣ್ಯಾಕ್ಷನ ಕರು । ಳನ್ನು ಬಗಿದು ಭಕ । ತನ್ನ ಕ್ಯಾದವನಿವ ॥ ಒಬ್ಬನೆ ದೇವ ಕಣಾ ॥ ನರಹರಿ || ೧ || ನಕ್ರನ ಬಾಧೆಗೆ । ಸಿಕ್ಕಿ ಬಳಲಿ ಪೆಸ । ರಿಕ್ಕದೆ ಪರತ । ತ್ವಕ್ಕೊಂದಿಸಿ ಮರೆ । ಯೊಕ್ಕುತ ಧ್ಯಾನಿಸ । ಲಕ್ಕರಿಂ ದ್ವಿರದನ । ದುಃಖವ ಬಿಡಿಸಿದ । ಚಕ್ರಾಂಕಿತನಿವ ॥ ಒಬ್ಬನೆ ದೇವ ಕಣಾ || ೨ || ಈಕ್ಷಿಸಿ ವಿಧಿ ನಿಟ । ಲಾಕ್ಷನ ಪರಿಯುನ । ಪೇಕ್ಷೆಯುಗೊಂಡಾ । ಪೇಕ್ಷೆಯೋಳ್ ಭೃಗು ರಘ । ವಕ್ಷವನೊದೆಯು । ಲ್ಲಕ್ಷಣ ಮುನಿಯು ಸ । ಮಕ್ಷದಿ ಪೂಜಿಸಿ । ದಕ್ಷಯಾತ್ಮಕನಿವ ॥ ಒಬ್ಬನೆ ದೇವ ಕಣಾ ॥ ೩ ॥ ಕಿಡುಹಸ್ತವ ಪಿಡಿ । ದೊಡನೆ ಕರವ ಶಿರ । ಕ್ಕಿಡಲ್ಕೆತರೆ ಪಥ । ಪಿಡಿದೋಡಲು ಬೆ । ನ್ನಿಡಿದ್ಯೆತಹ ಖಳ । ನೊಡನೆ ನುಡಿದವನ । ಮಡುಹಿಸಿ ಕರುಣದಿ । ಮೃಢನ ಕ್ಯಾದವ ನಿವ ॥ ಒಬ್ಬನೆ ದೇವ ಕಣಾ ॥ ೪ ॥ ಖಂಡಪರಶುವಿನು । ದ್ಧಂಡ ಭಕತ ನಪ್ರ । ಚಂಡ ಬಾಣನ ಭುಜ । ತಂಡ ಸಾಸಿರಗಳ । ಖಂಡಿಸಿ ಸುಜನರ । ತಂಡ ಉಳುಹಿದಖಿ । ಳಾಂಡಕೋಟಬ್ರ । ಹ್ಮಾಂಡನಾಯಕನಿವ ॥ ಒಬ್ಬನೆ ದೇವ ಕಣಾ ॥ ೫ ॥ ಧರೆಯೊಳು ಪೂಜ್ಯನಂ । ದೊರೆದು ಭೃಗುಶಾಪವ । ಪರಿಹರಿಸೆನ್ನನ । ವರತ ಧ್ಯಾನಿಸಲು ಸ । ಜ್ಜರಿತ ಸೇತುವಿನ ಮೇ । ಲಿಂಸಿ ದವನ ಶುಭ । ಕರನ ಮಾಡಿದ ಶ್ರೀ । ಕರ ರಘುವರನಿವ ॥ ಒಬ್ಬನೆ ದೇವ ಕಣಾ ॥ ೬ ॥ ಪಂಕಜಭವ ಮಗ । ಶಂಕರ ಮೊಮ್ಮಗ । ಲೇಂಕರ ಸುರ ವರ । ಸಂಕುಲ ಕಾಯೆಯು । ಕಿಂಕರ ಸುಜನರ । ಸಂಕಟಹರನಕ । ಳಂಕ ಮಹಿಮ ಗುರು । ವೇಂಕಟನಾಯಕ ॥ ಒಬ್ಬನೆ ದೇವ ಕಣಾ । ನರಹರಿ । ಒಬ್ಬನೆ ದೇವ ಕಣಾ ॥ ೭ ॥ ಶ್ರೀ ॥

॥ ೩೪ ॥ ರಾಗ, ಸಾವೇರಿ [ಧಾಟಿ:- ಸೀತೋ ಕರುಣಯಾ ಪುನಿಹೀ ಮಾಂ] ಏಕತಾಳ

ಬಾರೋ ದೇವಾ । ಸುಜನೋದ್ಧಾರಾ । ತ್ರೈಭುವನಾಧಾರಾ॥ ಪಾರಾವಾರ ಗಂ । ಭೀರ ಸರ್ವಶಾಸ್ತ್ರವಿ । ಚಾರ ಮೆರೆವ ಶೃಂ । ಗಾರ ಶೋಭಿತ ಶ್ರೀ। ಕಾರ ದಿವ್ಯರಥವ। ನೇರಿ ವಿಭವದಿಂದ ॥ ಬಾರೋ ॥ ಪ॥ ಭೇರಿಕೊಂಬು ಕಹಳೇನ । ಪೇರಿ ಢಮರುಗ ತಿ । ತ್ರೀಂಡಿಂಡಿಮ ಢಕ್ಕೆ । ಮೌರಿ ಮುರಜ ಪಟಹ । ಭೇರಿವಾದ್ಯವಿತತಿ । ಭೋರಿಡುತಿರೆ ಮುದ । ವೇರಿ ಸರ್ವಜ್ಞರು। ಸಾರಿ ನೆರೆದಿರಲು ॥ ಭೂರಿ ಛತ್ರಚಾಮರ । ಚಾರುತರ ಮಕರ । ತೋರಣ ಪಿಡಿದ ಮ।ಯ್ಯಾರದಿ ಸಿಂದಸಿಗುರಿ । ವಾರಿಜಭವ ಮುಖ್ಯ । ಸೇರಿ ವಿಮಾನದೊ । ಳೋರಣಿಸುತ ವಿ । ಸ್ತಾರ ನೋಳ್ಪರು ॥ ಬಾರೋ ॥ ೧ ॥ ಎತ್ತ ನೋಡಿದಡತ್ತ।ಲೆತ್ತಿಪಿಡಿದಿಹ ವಿ।ಚಿತ್ರದ ಟೆಕ್ಕೆಪಕ್ಕೆಗಳು । ಸುತ್ತಮುತ್ತಲು ಜನ । ಮೊತ್ತಸಂದಣಿಸಿ ರೌಪ್ಯ । ಬೆತ್ತ ಕಂಚುಕಿ ತಾಳಿ । ವೃತ್ತಗಿಂಡಿಕಾಳಂಚಿ। ಹಸ್ತದಿ ಪಿಡಿದಿರೆ । ಕೀರ್ತಿಪ ಭಾಗವ। ತೋತ್ತುಮರುರೆ ಪೊಗ। ಳುತ್ತಿಹ ಪಾಠಕ। ರಿತ್ತಂಡದಿ ತಕ । ತಥೈಯುನ್ನುತ । ಮತ್ತಕಾಸಿನಿಯರು । ನರ್ತನ ಮಾಡುತ।ಲರ್ಥಿಯ ವಿಭವದಿ ।ಬಾರೋ॥ ೨ ॥ ಪಿಂಗದ ದ್ವಿಜರ ವೇ।ದಂಗಳ ಘೋಷಕೆ । ಕಂಗೆಡುತಲಿ ದುರಿ । ತಂಗಳೋಡುತಲಿರೆ । ಮಂಗಳರವದ ಮೃ । ದಂಗವೇಣುವೀಣಾದಿ । ಸಂಗೀತಗಾನಸ್ವ ।ರಂಗಳು ಮೋಹಿಸಲೂ । ಸಂಗಡ ಧವಳಶಂ। ಖಂಗಳ ನಿನದ ಬೆ। ಳ್ದಿಂಗಳ ತುಂಗಬೊಂಬಾಳದೀ। ಪಂಗಳ ಸಾಲ್ಗಳು ।ಸಂಗಡಿಸೆ ಮಹಾಸ। ಭಾಂಗಣಕ್ಕೆಭುಯುಪ್ರ।ದಂಗಳವೀವುತ ॥ ಬಾರೋ ॥ ೩ ॥ ಭುವನಪಾವನ ರಘೋ । ತ್ತಮವನೀಕ್ಷಿಸಿ ದುರಿ । ತವನೀಡಾಡುತ ಇಷ್ಟಾ।ರ್ಥವ ಪಡೆದ ಜನ । ನಿವಹವು ಬಹುದೇಶದಿಂ। ದವಸರದಿ ಪೊರಟು । ತವಕದಿ ಬಂದು ಹರುಷ ತಾಳಿ ನೋಡುವರು । ಅವನಿಯ ಮಧ್ಯಲಂಕಾ । ವಿವಿಧ ಶ್ರೀಕರ ವೈ। ಭವದುನ್ನತಿಯ ಕಂಡೆವು ।ಜನ್ಮಸಫಲ್ಯ ವದಾಯಿತು ಸುಖ। ಸವನಿಸೆನುತ ಸ್ತವ। ನವಗೈವರು ಮಾ। ಧವನೇ ಮನವಲಿದೂ ॥ ಬಾರೋ ॥ ೪ ॥ ಅಂಕುಶ ಧ್ವಜವ । ಜ್ರಾಂಕಿತ ಪದಯುಗ । ಪಂಕಜಗಳ ಭಕ್ತಿ । ಯುಂ ಕೊಡೆನ್ನುತವ। ಕಿಂಕರ ಸುಜನರ । ಕಿಂಕರನೆನಿಸಯ್ಯ । ಶಂಖಚಕ್ರಧಾರಣ । ಶಂಕರಪ್ರಿಯನೆ ವಿಾ।ನಾಂಕಜನಕ ಶ್ರೀವ । ತ್ಸಾಂಕಭಕ್ತ ತ್ರಿಜಗದ । ಸಂಕಟಹರ ಮುನಿ। ಸಂಕುಲಸೇವಿತ । ನೀಂ ಕರ್ಯಣಿಸು ವಳ । ಲಂಕೆ ಮೂಲಿಕೆಯ ನಿ । ಶ್ಯಂಖ ನೃಹರಿ ಗುರು । ವೇಂಕಟ

ನಾಯಕ ॥ ಬಾರೋ ದೇವಾ ॥ ೫ ॥ ಶ್ರೀ ॥

॥ ೩೫ ॥ ರಾಗ, ಸಾರಂಗ [ಧಾಟಿ:- ನಿನ್ನ ಕೃಪೆಯು ಎನ್ನ ಮ್ಯಾಲಿರಲೀ] ಅಷ್ಟತಾಳ

ಏನನೆಂಬೆನು ಕೃಷ್ಣನ ಲೂಟಿಯಾ । ಇ । ನ್ನೇನನೆಂಬೆನು ರಂಗನ ಬಾಧೆಯಾ । ಗೋಪಿ । ನೀನ್ಯಾಕೆ ಪೇಳದಿರೆಲೊ ಬುದ್ಧಿಯಾ ॥ ಏನನೆಂಬೆನು ॥ ॥ ಪಲ್ಲ ॥ ಕಡಗಕಾಲಂದುಗೆಗಳ ಧ್ವನಿಯಾ । ಮಿಡುಕದೆ ಮೆಲ್ಲನೈತರು ತೆನ್ನಯಾ ॥ ಕಡವ ಮೊಸರ ಕರಗಳಪಿಡಿದಾ । ಕೃಷ್ಣಾ । ಕಡಗೋಲ ಸಡಲಿಸಿಕೊಂಡೋಡಿದಾ ॥ ಏನನೆಂಬೆನು ॥ ೧ ॥ ತನುಬಗ್ಗಿ ಮನೆಗೆಲಸವಗೈವಾಗಾ । ಘು । ಕ್ಕನೆ ಬಂದು ಬೆನ್ನ ಹತ್ತಿ ಚನ್ನಿಗಾ ॥ ಕೊನೆಯುಗುರ್ಗಳ ಕುಚಕೊತ್ತುವನೆ । ಗಜ । ವನು ನಡಸುವಡಂಕುಶವೆಂದನೇ ॥ ಏನನೆಂಬೆನೇ ॥ ॥ ೨ ॥ ರಮಣನೊಂಗೆ ಪೋಗುವ ಭರದೀ । ಸಮುಕದಿಂದೂಟವಿಕ್ಕುವ ವೇಳ್ಯದೀ ॥ ಹಿಮುದುಪಟಳ ಘನವೆನುತೆಂದನೂ । ಬಂದ । ಪ್ಯಮುರಿಕೊಂಡಪ್ಪಿ ಸಡಲಿಸಲೀಸನೂ ॥ ಏನನೆಂಬೆನು । ೩ ॥ ವಸಗೆಯು ದಿನದಿ ಪತಿಯುಕೋಣೆಯಾ । ಹಸದಿಂದೊಳ ಪೊಕ್ಕು ಶಿಪ ಸತಿಯಾ ॥ ಮುಸುಕಿಕ್ಕಿ ಕತ್ತಲಿಯೊಳು ತಡದಾ । ರಂಗ । ಪೊಸಭೋಗವ ಕೊಟ್ಟು ತಲೆ ಸಡದಾ ॥ ಏನನೆಂಬೆನು ॥ ೪ ॥ ಮಂಡಲದೊಳಗೆ ಕೃಷ್ಣನ ಪೋಲುವಾ । ಇಂಥಾ । ಪುಂಡರ ಕಾಣಲಿಲ್ಲವೆ ನಿಜವಾ ॥ ಕಂಡರೆ ಗುರು ವೆಂಕಟೇಶ್ವರನೂ । ತಾ । ನ್ಹಿಂಡುದೈವದ ದೈವನಾಗಿಹನೂ ॥ ಏನನೆಂಬೆನು ಕೃಷ್ಣನ ಲೂಟಿಯಾ ॥ ೫ ॥ ಶ್ರೀ ॥

॥ ೩೬ ॥ ರಾಗ, ಆನಂದಭೈರವಿ [ಧಾಟಿ:- ಜಯ ಹರಿಭಕತರಿಗಹುದೂ] ಏಕತಾಳ

ಅಲ್ಲಲ್ಲಲ್ಲಲ್ಲಾ । ಸುಖವಿನ್ನಿಲ್ಲಿಲ್ಲಿಲ್ಲಿಲ್ಲಾ ॥ ಸುಳ್ಳುಸಂಸಾರ ಮಾಯಾ ಭ್ರಾಂತಿಯು ವ-ಸ । ಪೊಳ್ಳು ಇದೆಂದೂ ಬಲ್ಲವರಿಗೆ ನಿಜ । ವಲ್ಲಲ್ಲಲ್ಲಾ ॥ ಸುಖವಿನ್ನಿಲ್ಲಿಲ್ಲಲ್ಲಾ ॥ ಪಲ್ಲ ॥ ರೊಕ್ಕವು ತೀರದ ಕಾಲಕೆ ತನ್ನನು । ಮಕ್ಕಳು ಮಂಗಳು ಛೀಟ್ಟಕೆ ತರುಸವ । ರಲ್ಲಲ್ಲಲ್ಲಲ್ಲಾ ॥ ಸುಖವಿನ್ನಿಲ್ಲಿಲ್ಲಿಲ್ಲಿಲ್ಲಾ ॥ ೧ ॥ ಅಂಗನೆ ಮಕ್ಕಳು ಆಪ್ತರು ಬಂಧುಜನಂಗಳು ಒಬ್ಬರು ಸಂಗಡಬರುವವ । ರಲ್ಲಲ್ಲಿಲ್ಲಲ್ಲಾ ॥ ಸುಖವಿನ್ನಿಲ್ಲಿಲ್ಲಿಲ್ಲಲ್ಲಾ ॥ ೨ ॥ ವಲ್ಲಭ ಶ್ರೀಗುರು ಲಕ್ಷ್ಮೀವೆಂಕಟ । ಸಲ್ಲದೆ ಬ್ಯಾರೊಬ್ಬರು ಬಂಧುಗಳ್ಯಾ । ರಲ್ಲಲ್ಲಲ್ಲಲ್ಲಾ ॥ ಸುಖವಿನ್ನಿಲ್ಲಿಲ್ಲಲ್ಲಾ ॥ ೩ ॥ ಶ್ರೀ ॥

## ॥ ೩೭ ॥ ಶ್ರೀಕೃಷ್ಣನಿಗೂ ಸತ್ಯಭಾಮೆಗೂ ಆದ ಸಂವಾದ.

೧ನೆಯ ಸಂಧಿ.

ಅಂಗುಲ್ಯಾ ಕಃ ಕವಾಟಂ ಪ್ರಹರತಿ ಕುಟಿಲೇ ಮಾಧವಃ ಕಿಂ ವಸಂತೋ
ನೋ ಚಕ್ರೀ ಕಿಂ ಕುಲಾಲೋ ನ ಹಿ ಧರಣಿಧರಃ ಕಿಂ ದ್ವಿಜಿಹ್ವಃ ಫಣೀಂದ್ರಃ ॥
ನಾಹಂ ಘೋರಾಹಿಮರ್ದೀ ಕಿಮಸಿ ಖಗಪತಿಃ ನೋ ಹರಿಃ ಕಿಂ ಕಪೀಂದ್ರೋ ।
ಇತ್ಯೇವಂ ಸತ್ಯಭಾಮಾಪ್ರತಿವಚನಜಿತಃ ಪಾತು ನಃ ಪದ್ಮನಾಭಃ ॥ ೧ ॥

ಭಾಮಿನಿಷಟ್ಪದಿ.

ಶ್ರೀರಮಣ ಷೋಡಶಸಹಸ್ರದ । ನಾರಿಯರ ಮಂದಿರವ ತಿರುಗುತ । ಬೇರೆಬೇರವರವರ ಮನದಿಷ್ಟಾರ್ಥಗಳನಿತ್ತು ॥ ನಾರಿ ಮದನಕಠಾರಿ ಮೋಹನ । ಕಾರಿ ಬಹುಶೃಂಗಾರಿ ಸಲೆವ । ಯ್ಯಾರಿ ಭಾಮೆಯ ಸಾರಿದನು ಕಂಸಾರಿ ಕಡುದಯದಿ ॥ ೧ ॥

ಕಂದಪದ್ಯ.

ಪೂಸಿದ ಗಂಧದ ಪರಿಮಳ । ಸೂಸುವ ಪೂಮಾಲೆ ಕಸ್ತೂರಿತಿಲಕದ ನೊಸಲಂ ॥ ಭಾಸಿಪ ಕಾಂತಿಯ ಮೋಹನ । ರಾಶಿಯು ಮೆಲ್ಲಡಿಯನಿಡುತೈತಂ ಮುದದಿಂ ॥ ೨ ॥ ಮಂಗಳಮಹಿಮ ಕವಾಟದಿ । ನಂಗುಲಿಯಂ ಪ್ರಹರಗೈಯಲ್ ಸರಿರಾತ್ರಿಯೊಳಾ ॥ ತುಂಗಸ್ತನಿಯೋರ್ವಳೆ ಸತ್ಯಭಾಮಾಂಗನೆಯು ಮಾತಾಡಿಸಿದಳ್ ಕಟಕಿಗಳಿಂ ॥ ೩ ॥

ರಾಗ ಪಹಾಡಿ, ಆದಿತಾಳ (ಕಟಕಿಯ ನುಡಿ.)

ಕಾಟಕನಂತೆ ಕ।ವಾಟಪ್ರಹರಗೈವ । ಬೂಟಕಪುರುಷ ನೀನ್ಯಾರೇ ॥ ಮಾಟನ ಪೆಸರನು । ಆಟಲಿಕಾನೀಗ । ಲೂಟಿಯ ಮಾಡದೆಪೇಳೊ ॥ ೪ ॥

ರಾಗ ಶಂಕರಾಭರಣ, ಅಷ್ಟತಾಳ. (ಕೃಷ್ಣನ ನುಡಿ)

ಮೋದವನೀವ ಬಿಂ।ಬಾಧರೆ ಕುಂಭಪ।ಯೋಧರಯುಗಳೆ ಕೇಳೂ ॥ ಈ ಧರೆಯೊಳಗೆನ್ನ। ಮಾಧವನೆಂದೆಲ್ಲ। ಸಾಧುಗಳ್ ಕರೆವರ್ಕಾಣೇ ॥ ೫ ॥

॥ ಕಟಕಿ ॥ ಪೊಸತಿದು ನಿನ್ನಯ। ಪೆಸರು ಮಾಧವನೆಂದು । ರಸಿಕರು ಕರೆವದುಂಟಾಗೀ ॥ ಋಸೆಯೊಳು ಚೈತ್ರದಿ। ವಸ ವಿರಾಜಿಪ ವನ। ವಸವಂತ ನೀನಹುದೇನೈ ॥ ೬ ॥

॥ ಕೃಷ್ಣ ॥ ಬಿಸಜಗಂಧಿನಿ ಸಾ।ರಸಲೋಚನೆ ಕೇಳು । ವಸವಂತ ನಾ ನಲ್ಲವೇ ॥ ದೆಶೆಗೆಡಿಸುವ ರ। ಕ್ಕಸರ ಮರ್ದಿಪ ಚಕ್ರಿ । ಪೆಸರೆನಗಿಹುದು ಕಾಣೇ ॥ ೭ ॥

॥ ಕಟಕಿ ॥ ಕುಂಭಿನಿಯುಲಿ ಚಕ್ರಿ । ಎಂಬರಾದರೆ ಕೇಳು । ಡಂಭದಿ ಭಾಂಡವಾ ರಚಿಸೇ ॥ ಇಂಬಾದ ಸಂತೆಯಾ । ಡೊಂಬೀಲಿ ಮಾರುವ । ಕುಂಭಗಾರ ನೀನಹುದೇನೈ ॥ ೮ ॥

॥ ಕೃಷ್ಣ ॥ ಸುರುಚಿರ ವಸನಾಲಂ । ಕರೆ ಶುಭಕರೆ ಮನೋ । ಹರೆ ಮುಕ್ತಾಚರಣೆ ಕೇಳೂ ॥ ಮೆರೆವ ಕುಲಾಲ ನಾನಲ್ಲವೆ ಧರಣೀ । ಧರರೆಂಬ ರೆನ್ನ ಕಾಣೇ ॥ ೯ ॥

॥ ಕಟಕಿ ॥ ದಣಿಯುದನುದಿನ ಧ । ರಣಿಯನು ಪೊತ್ತಿಪ । ಗುಣನಾನು ನಿನಗುಂಟಾಗೀ ॥ ಎಣೆಗೊಂಡ ನಾಲಿಗೆ । ಕೊನೆ ಎರಡಾಗಿಹ । ಫಣಿರಾಜ ನೀನಹುದೇನೈ ॥ ೧೦ ॥

॥ ಕೃಷ್ಣ ॥ ಭೃಂಗಕುಂತಳೆ ಸಾ।ರಂಗಲೋಚನೆ ಮಾ। ತಂಗಗಮನೆ ನೀ ಕೇಳೂ ॥ ಶಿಂಗಿದುಂಬಿರುವ ಭು।ಜಂಗನಲ್ಲವೆ ಕಾ । ಳಿಂಗಮರ್ದನನು ಕಾಣೇ ॥ ೧೧ ॥

॥ ಕಟಕಿ ॥ ಸೋಜಿಗವೇನಿದು । ಮಾಜಲ್ವ್ಯಾತಕೊ ಫಣಿ । ರಾಜನ ಮರ್ದಿಪನಾಗೇ ॥ ಓಜ ಅಂಬರಚರ ।ನೈಜನೆನಿಪ ಖಗ। ರಾಜನು ನೀನಹು ದೇನೈ ॥ ೧೨ ॥

॥ ಕೃಷ್ಣ ॥ ಮೃಗಮದಗಂಧಿನಿ । ಮೃಗಲೋಚನೆ ಕೇಳು । ಮೃಗ ರಾಜ ನಾನಲ್ಲವೇ ॥ ಜಗದ ಸಜ್ಜನರೆ ।ಅಗಲದ ಹರಿಯೆಂಬ । ಸೊಗಸೀನ ಪೆಸರೆನಗೇ ॥ ೧೩ ॥

॥ ಕಟಕಿ ॥ ನಾಡೊಳು ನಿನ್ನವ। ರಾಡಲು ಹರಿಯೆಂಬಾ। ಪಾಡಿನ ಪೆಸ ರುಂಟಾಗೀ ॥ ಕಾಡಿನ ಮರಗಳೊ। ಳಾಡುತಾ ಡುತ್ತಿರುವ । ಕೋಡಗ ನೀ ನಹುದೇನೈ ॥ ೧೪ ॥

॥ ಕೃಷ್ಣ ॥ ವಾನರನೆಂದೆನ್ನ । ಹೀನೀಸಬೇಡವೆ । ರಾಣಿ ಕೇಳೆಲೆ ನಾ ನಿನ್ನಾ॥ ಪ್ರಾಣದೊಲ್ಲಭ ಕೃಷ್ಣ। ಕಾಣೆ ಎನ್ನೊಡನುದಾ ।ಸೀನವ ಮಾಡುವ ರೇನೇ ॥ ೧೫ ॥

॥ ಸತ್ಯಭಾಮೆ ॥ ಹರಣದೊಲ್ಲಭನೆಂಬ । ಪರಿಯು ಕೇಳುತಲತಿ । ಭರದಿಂದ ಬಾಗಿಲತೆರೆದೂ॥ ಕರಪಿಡಿದಂತಃ।ಪುರಕ್ಕೊಯ್ದಳು ಶ್ರೀ। ಗುರುವೆಂಕಟಾಚಲಪತಿಯಾ ॥ ೧೬ ॥

೨ನೆಯ ಸಂಧಿ.

ಯಾತಸ್ತ್ವಂ ಕುತ ಏವ ಕೃಷ್ಣ ಮೃಗಯಾಸಕ್ತೋ ವನಾಂತಂ ಗತಃ ।
ಗಂಧೋ ಯೋ ವನಪುಷ್ಪಜಃ ಶ್ರಮಜಲಂ ಘರ್ಮ ಕ್ಷತಂ ಕಂಟಕೈಃ ॥
ಅಸ್ತ್ಯೇವಂ ಮೃಗಯಾಂ ಗತಸ್ಯ ಭವತೋ ದಷ್ಟೋಽಧರೋ ದೃಶ್ಯತೇ ।
ಶಂಕಾಪೂರ್ಣಮಿವಾತ್ರ ಕಾರಣಮಿದಂ ಕುರ್ಯಾತ್ರ್ಯಮಾಣಾನಿ ತೇ ॥ ೧ ॥

ಕುಸುಮಷಟ್ಪದಿ

॥ ಸತ್ಯಭಾಮೆ ॥ ಚಿತ್ರಕರವಾಗಿರ್ದ । ಮುತ್ತಿನಾಣಿಕಗಳಿಂ । ಕೆತ್ತಿರ್ದ ಮಂಚದಲಿ ಕುಳ್ಳಿರಿಸುತಂ ॥ ಮತ್ತಕಾಶಿನಿ ಹರಿಯು । ಉತ್ತಮಾಂಗವನೀಕ್ಷಿ । ಸುತಪ್ರಾಗ ಬೆದರಿ ನೋಡಿದಳು ಕುರುಪಂ । ೧ ॥

॥ ಸಖಿ ॥

ಕನ್ನೆಯುರದು ಅನ್ಯೋನ್ಯದಿ ನೆರಹಿಸಿ। ಚಿನ್ಹೆಗಳವಯುವದಲಿ ಕಂಡೂ॥ ಮುನ್ನದಿ ಮತ್ಸರವನು ತಾಳುತ ಹರಿ। ಯುನ್ನುಡಿಸಿದಳಾ ಕಟಕಿಯುಂ ॥ ೨ ॥

ರಾಗ ಶಂಕರಾಭರಣ, ಆದಿತಾಳ.

॥ ಸತ್ಯಭಾಮೆ ॥ ಶ್ರೀಕರದ ಮರೆಯುತ್ತ । ನೇಕ ಸತಿಯುರ ರಮಿಸಿ । ಸಾಕಾಯಿತೆ ಇತ್ತ ಬಂದು । ದೇಕೆಲೊ ರಂಗಾ ॥ ೩ ॥

॥ ಕೃಷ್ಣ ॥ ಕೋಕಿಲಗಾನೆ ಪ್ರವೀಣೆ । ಲೋಕದ ಬಾಲೆಯುರ್ ನಿನ್ನ । ನೇಕ ದೇಶ ಪೋಲ್ವರೇ ಸಖಿ । ಕಾಂತೇ ॥ ೪ ॥

॥ ಭಾಮೆ ॥ ಠಕ್ಕಿನ ಮಾತುಗಳ್ಯಾಕೆ । ಸೊಕ್ಕು ಜವ್ವನೆಯುರ ತೋಳ। ರೆಕ್ಕೆಯೊಳರ್ಧರಾತ್ರಿ । ಮಿಕ್ಕಿತೇ ಕಾಂತಾ ॥ ೫ ॥

॥ ಕೃಷ್ಣ ॥ ರಕ್ಕಸರಾ ವಂಶವನು । ತಿಕ್ಕುವ ಕಾರಣ ರಾತ್ರಿ । ಮಿಕ್ಕಿತಲ್ಲದನ್ಯಸ್ತ್ರೀಯುರ್ಗೆ । ಸಿಕ್ಕಲಾಪೆನೇ । ಕಾಂತೇ ॥ ೬ ॥

॥ ಭಾಮೆ ॥ ಬಲ್ಲೆ ನಿನ್ನ ಬಗೆಯೊಳನ್ಯ । ನಲ್ಲೆಯ ನೆರದಿರಲು । ಗಲ್ಲದ ಮೇಲಿದೆಗೋ ಕ್ಷತ । ದೆಲ್ಲಿಪ್ಪೋ ರಮಣಾ ॥ ೭ ॥

॥ ಕೃಷ್ಣ ॥ ನಲ್ಲಳೇ ಕೇಳಿತ್ತು ಯುದ್ಧ । ದಲ್ಲಿ ಶರಗಳೆಸೆಯೆ ಗಂಗ । ಳೆಲ್ಲ ಸೋಂಕೀ ಕ್ಷತವು ಗಲ್ಲ । ದಲ್ಲಿ ತೋರಿದವೆ ॥ ೮ ॥

॥ ಭಾಮೆ ॥ ಸುಳ್ಳಿಗಾರರೊಡೆಯ ಭುಜಗ । ಳಲ್ಲಿ ಕೂರುಗುರ ಘಾಯ । ಮೆಲ್ಲ್ಯಾಯಿತು ಏನೆಂದೂ ಪುಸಿ । ಸೊಲ್ಲಿಪೆ ಕಾಂತಾ ॥ ೯ ॥

॥ ಕೃಷ್ಣ ॥ ಮುಳ್ಳಿಶಾವಂತಿಗೆಯ ವನ । ದಲ್ಲಿ ಸಂಚರಿಸುತಿರೆ । ಬಳ್ಳಿ ಸೋಂಕೀ ಕ್ಷತವು ಭುಜಗ । ಳಲ್ಲಿ ತೋರ್ದವೆ । ಕಾಂತೆ ॥ ೧೦ ॥

॥ ಭಾಮೆ ॥ ಏಸು ಪುಸಿಯ ನುಡಿವೆ ಮೈಗೆ । ಪೂಸಿದ ದಿವ್ಯ ಗಂಧವು । ಸೂಸುತಿದೆ ಯಾವ ಸತಿ ಲೇಪಗೈದಳೊ ॥ ೧೧ ॥

॥ ಕೃಷ್ಣ ॥ ಮೋಸವಲ್ಲ ಕೇಳೆ ಮಂದ । ಹಾಸೆ ಮಲಯಜಬನದಿ । ಲೇಸಾಗಿ ತಿರುಗಲು ಗಂಧ । ಸೂಸಿತು ಕಾಣೆ । ಸಖೀ ॥ ೧೨ ॥

॥ ಭಾಮೆ ॥ ಮಂಗಲಾಂಗ ಅನ್ಯಸತಿಯ । ಸಂಘ ನಿನಗಾಗದಿರಲು । ಕಂಗಳು ಕೆಂಪಡರಿದ । ಇಂಗಿತವೇನೋ । ಪ್ರಿಯ ॥ ೧೩ ॥

॥ ಕೃಷ್ಣ ॥ ಭೃಂಗಳೆ ನೀನಾಲಿಸು ಯು।ದ್ಧಾಂಗಣ ರೋಶಾವೇಷ । ವಂಗಲಿಸೆ ಅರುಣ ನಯ । ನಂಗಳಾಗಿವೆ । ಕಾಂತೆ ॥ ೧೪ ॥

॥ ಭಾಮೆ ॥ ಕಾಂತ ನಿನ್ನನ್ಯಾತರದ । ದಂತಕ್ಷತಗಳಿದ್ಯಾವ । ಕಾಂತೆ ಚುಂಬಿಸಿದಳೊ ಇದ । ಕೆಂತು ಪುಸಿಯೊ । ಕಾಂತಾ ॥ ೧೫ ॥

॥ ಕೃಷ್ಣ ॥ ಪ್ರಾಥದಿ ಪಾಂಚಜನ್ಯವ । ನಾಂತು ಊದಲು ಅರ್ಧಚಂದ್ರ। ನಂಥ ರೇಖೆಯು ತೋರಲ್ಯಾತೆ । ಕಾಂತೆ ಕೇಳು ॥ ೧೬ ॥

॥ ಭಾಮೆ ॥ ಸೋತ ಸತಿಯೊಡನೆ ಚೌರ । ಪೇತಿಬಂಧವೆಸಗದಿರಲು । ನಾಥ ಮೈ ಬೆವರಿಡುವ । ರೀತಿ ಇದೇನೊ। ಕಾಂತಾ ॥ ೧೭ ॥

॥ ಕೃಷ್ಣ ॥ ಪ್ರೀತೆ ನಿನ್ನ ನೋಳ್ಪ ಭರದಿ । ಸೋತು ನಡೆಯೆ ತನುವು ಬಳಲಿ । ಧಾತುಗುಂದಿ ಶ್ರಮಜಲವು । ತಾ ತೋರಲ್ಯಾತೆ। ಕಾಂತೆ ॥ ೧೮ ॥

॥ ಭಾಮೆ ॥ ಪಂಕಜಾಕ್ಷ ಎನ್ನ ಮನದ । ಶಂಖೆಯನ್ನು ಬಿಡಿಸು ಶ್ರೀ ಗುರು । ವೆಂಕಟೇಶ ನಂಬುಗೆಯ । ನೀಂ ಕರುಣಿಸು । ಪ್ರೀಯ ॥ ೧೯ ॥

## ೩ನೆಯ ಸಂಧಿ.

ಅಂಭಾಂಸಿ ಪ್ರವಿಶಾಮಿ ಕುಂಭನಿಹಿತಂ ಕರ್ಷಾಮಿ ಕುಂಭೀನಸಂ ।
ಜ್ವಾಲಾಮಾಲಕರಾಳಿನಂ ಹುತವಹಂ ನಿಶ್ಶಂಕಮಧ್ಯಾವಿಶೇ ॥
ಯದ್ವಾ ಮಾನಿನಿ ದೇವತಾಮಭಿಮತಾಮುಲ್ಲಂಘಯಾಮಿ ಧ್ರುವಂ ।
ವಿಸ್ವಾಸಸ್ತ್ವವ ನಾಸ್ತಿ ಚೇದಪಿ ತುಲಾಮಾರೋಪಯಾಮಿ ಧ್ರುವಂ ॥ ೧ ॥

ಅಂಭಸ್ಥೇ ಶಯನೀಯಮೇತದುದಧೌ ಲೀಲಾಶಯಾನಂ ಫಣೀ ।
ತ್ವತ್ತೇಜಃ ಪರಮಾಣುಶೇಷ ದಹನೋ ಭೃತ್ಯಾಃ ಸಮಸ್ತಾಃ ಸುರಾಃ ॥
ಕುಕ್ಷಿನ್ಯಸ್ತಜಗತ್ರಯಸ್ಯ ಭವತೋ ಕಿಂ ಸ್ಯಾತ್ತುಲಾರೋಪಣಂ ।
ಇತ್ಥಂ ವಾಚಮುದೀರಿತೋ ವಿನತಯಾ ಸ್ಮೇರೋ ಹರಿಃ ಪಾತು ನಃ ॥ ೨ ॥

ರಾಗ ಸಾರಂಗಿ ಅಥವಾ ಸಾರಂಗ, ಅಷ್ಟತಾಳ

॥ ಕೃಷ್ಣ ॥ ಏಣಾಕ್ಷಿ ಬಂದೆನ್ನ । ಊಣೆಯ ಬಿಟ್ಟು ಪಿಕ। ಗಾನೆ ಮುನಿಯಬೇಡವೇ ॥ ಜಾಣೆ ಅನ್ಯಸ್ತ್ರೀಯ ಕೇಣಿ ಇಲ್ಲೆಂದು ಪ್ರ। ಮಾಣವ ಮಾಡುವೆನೂ ॥ ೧ ॥ ಭಾಮೆ ॥ ಕಾಣೆ ನಿನಗೆಣೆ । ಗಾಣೆ ನಂಬಿದ ಮನ । ಗಾಣಿಸು ವಂಪದಲೀ ॥ ಜಾಣ ನೀ ಪೇಳ್ವ ಪ್ರ । ಮಾಣವದೇನೆಂದು । ಪ್ರಾಣದೋಲ್ಲಭನೆ ಪೇಳೂ ॥ ೨ ॥ ಕೃಷ್ಣ ॥ ಜಡನಿಧಿ ಎನಿಸುವ। ಮಡುವಿಗೆ ದುಮುಕಿಕ್ಕಿ । ತಡಿಗಡರಲು ಕಂಡೂ ॥ ದೃಢವೆಂದು ನಂಬಿ ನಿ । ನ್ನೊಡಲಸಂಶಯನುಳಿ। ದೊಡಗೂಡೆಲೆ ಬಾಲೇ॥ ೩ ॥ ಭಾಮೆ ॥ ಕಡಲಶಯನ ನಿ। ನ್ನಡಿಯಿಂದೊಗೆದು ಪೆಸ। ರೊಡೆದಳು ಸುರಗಂಗೆಯೂ ॥ ಮಡುವಿನ ಜಲ ನಿನ್ನ । ತಡೆಯಲಾಪುದೆ ಪ್ರಾಣ। ದೊಡೆಯ ವಿಸಜ್ಜರಿಯೇ ॥ ೪ ॥ ಕೃಷ್ಣ ॥ ಅಂಬುಜಾಂಬಕಿ ಪರ। ರಂಬೆಯ ಭೋಗವು । ಲಂಬನವಿಲ್ಲೆನುತಾ ॥ ಕುಂಭಿನಿಹಿತ ಫಣಿ । ಚುಂಬಿಸಿಕೊಂಡಿಹ । ಜಂಬೀರವ ತೆಗೆವೇ ॥ ೫ ॥ ಭಾಮೆ ॥ ತುಂಬಿಹ ವಿಷಧರ। ನೆಂಬ ಶೇಷನ ಬೆನ್ನೊ । ಳಿಂಬಾಗಿ ಪವಡಿಸಿದಾ ॥ ಅಂಬರಚರಯಾನ। ನೆಂಬರು ವಿಷ ನಿನ್ನ। ಡಂಬರ ಮುಟ್ಟುವದೇ ॥ ೬ ॥ ಕೃಷ್ಣ ॥ ಕುಟಿಲಕುಂತಳೆ ಅನ್ಯ । ಕುಟಿಲೆಯರುಗಳ ಸಂ। ಕಟವೆನಗಿಲ್ಲೆನುತಾ ॥ ಛಿಟಛಿಟಛಿಟಲೆಂಬ । ನಟಿಸುವಗ್ನಿಯ ಪೊಕ್ಕು । ಸುಡದಲೆತ್ತೈತಹೆನೇ॥ ೭ ॥ ಭಾಮೆ ॥ ಧಿಟ ತವ ಮುಖವಿ ಪ್ರ। ಕಟಸುವಗ್ನಿಯು ನಿನ್ನ । ಲಟಕಟಿಸಲುಬಲ್ಲುದೇ ॥ ಪಟುತರವಲ್ಲವು । ಸಟೆಯು ಪ್ರಮಾಣದಿಂ । ಘಟಿಸುವದೇನುಂಟೊ ॥ ೮ ॥ ಕೃಷ್ಣ ॥ ಅಂಗನೆ ಕೇಳ್ ಪರ। ರಂಗನೆಯರ ಆ। ಲಿಂಗನವಿಲ್ಲೆನುತಾ ॥ ಹಿಂಗದೆ ಕ್ರೂರದೇ। ವಾಂಗಣದ್ವಾರವು। ಲ್ಲಂಘಿಸುವೆನು ಕಾಣೇ ॥೯॥ ಭಾಮೆ ॥ ಅಂಗಜಪಿತ ನಿನ್ನ । ಅಂಗದಿರಮೇಶ ಗಣಂಗಳು ಉದುಭವಿಸೀ ॥ ಹಿಂಗಿಗರಹರವು। ರಂಗಳದಾಲಯು । ನುಂಗದಿದ್ದರೆ ಸಾಕೂ ॥ ೧೦ ॥ ಕೃಷ್ಣ ॥ ದಂತಿಗಮನೆ ಪರಸೀ। ಮಂತಿನಿಯರೊಳ್ ರತಿ । ಅಂತ್ಯಸ್ತೆನಗಿಲ್ಲೆನುತಾ॥ ಕಿಂತಾಲದಿ ತೂಗೆ। ಗುಂಜಿಗೆ ಸಮವಿರೆ ದೃ। ಷ್ಟಾಂತಕದುವೆ ಸಾಕೂ ॥೧೧॥ ಭಾಮೆ ॥ ಕಂತುಜನಕನಾ । ಪಿಂತೆ ಮುನಿಗೆ

ದಾನವೇ । ಕಾಂತದಿ ಕೊಂಡಲು ನೀನೇ ॥ ನಿಂತು ತೂಗಿದ ಪರಿ । ಯೆಂತು ಮರೆವೆ ಈ ಕು । ತಂತ್ರವಿದಾರೊಡನೇ ॥ ೧೨ ॥ ಕೃಷ್ಣ ॥ ಲಲನೆ ಇದೆಲ್ಲವ । ಸುಲಭವಾದರೆ ಕೇಳು । ಚಲುವೆ ನಿನ್ನವಯುವದೀ ॥ ಕಲನೆಲೆ ಕಲಕಿ ನಿ । ಶ್ಚಲದ ಪ್ರಮಾಣದಿಂ । ದೊಲಿಸುವೆ ಈಗ ನಿನ್ನಾ ॥ ೧೩ ॥ ಜಲಜಕುಟ್ಮಳ ದಂಥ । ನೆಳೆವೊಲಿಗಳಿಂದೆಂಬ ನಿರ್ಮಲ ಶಿವಲಿಂಗಗಳಾ ॥ ತಲೆಯ ಮೇಲೆ ಕರ । ತಳಗಳಿಟ್ಟೀರ್ದ ಚಂದ್ರನ । ನೆಲೆಗೊಳಿಪೆ ಕಾಣೇ ॥ ೧೪ ॥ ಮಡದಿ ನಿನ್ನ ನಿಡು । ಜಡೆ ಎಂಬ ಸರ್ಪನ । ಪಿಡಿಸು ಕರಕೆ ಸುತ್ತೀ ॥ ಉಡುಪತಿ ಮುಖವಡಿ । ಗಡಿಗೆ ಚುಂಬಿಸುತಲಾ । ರಡಿಗಳ ಕೆದರುವೆನೇ ॥ ೧೫ ॥ ಬಡದದ ಸವಿ । ಗೊಡನನ್ಮೃತದ ರುಚಿ । ಗೊಡುತಲಿ ಗಡರವದೀ ॥ ಸಡಗರದ ರಥವ । ನಡು ಸಿಂಹನ ಸೆರೆ । ಬಡಲಿಸುವೆನೆ ಕಾಣೇ ॥ ೧೬ ॥ ಹರಿಯಿಂತೆನುತಿರೆ । ಸ್ಮರಪಿತನವು ಮುಂ । ಬಂದು ತವಕವೇರೀ ॥ ಬರೆ ಸೆಳದಪ್ಪುತ । ಗುರುಕುಚಗಳ ಪಿ । ಯುರಕೊತ್ತುತ ಬಿಗಿದೂ ॥ ೧೭ ॥ ಹರುಷವುಕ್ಕಿ ಚ । ಪ್ಪರಿದು ಚುಂಬಿಸುತ ರುಚಿ । ಗರಿವುತ ಗಳಗವದೀ ॥ ಪರಿ ಪರಿ ಬಂಧದಿ । ಗುರು ವೆಂಕಟೇಶನ । ನೆರದೊಲಿಸಿವಳಾಗಾ ॥ ೧೮ ॥ ಶ್ರೀ ॥

## ಮಹಾಭಾರತದೊಳಗಣ ದ್ರೌಪದೀವಸ್ತ್ರಾಪಹರಣ.

॥ ೩೮ ॥ ಪ್ರಥಮಾಂಕ.

ಪತಿವ್ರತೇ । ದ್ರುಪದಸುತೇ । ಪುಣ್ಯಭರಿತೇ ॥ ಪತಿವ್ರತೇ ದ್ರುಪದಸುತೆ । ॥ಅನು॥ ಪತಿವ್ರತೇ । ದ್ರುಪದಸುತೇ । ಪೊಡವಿಯೊಳಗೆ ಸದ್ಗುಣಕೃತಯುತೇ । ಸುಜನಸಂತತಿ ನುತೇ ॥ ಅತಿ ದುರುಳ ಕೌರವನು ಮಾನ । ಚ್ಯುತಿಯಗೈಯಲು ಕೃಷ್ಣ ನೀನೇ । ಗತಿಯೆನುತ ಸಭೆಯೊಳಗೆ ನುತಿಸಲ । ಚ್ಯುತನಕ್ಷಯ ವಸ್ತ್ರವನಿತ್ತುಳುಹಿದ ॥ ಪತಿವ್ರತೇ । ದ್ರುಪದಸುತೇ ॥ ಪಲ್ಲ ॥ ಕುರುಡನಿಂದ ಪಾಂಡವರಾ । ಕರಸುತಾ ದುಷ್ಟಂತ ಕೌರವಭೂವರಾ ॥ ವಿರಚಿಸುತ ಕೃತ್ರಿಮದ ಲತ್ತವ । ದುರುಳ ಶಕುನಿಯು ಮತದಿಂದಾಡಲು । ಇಂಸಿದಾ । ಪಣಗಳೆಲ್ಲವ ಹಂಸಿದಾ ॥ ಮೆರೆವ ಸಿರಿ ಸಾಮ್ರಾಜ್ಯ ತನ್ನನು । ಜರು ಸಹಿತ ತಾ ಸೋತು ಕಡೆಯಲಿ । ಅರಸಿಯನು ಸೋಲಲ್ಕೆ ಕುರುಪತಿ । ಹರುಷದಿಂದೊಲದೊಲಿದ ಗರ್ವದಿ ॥ ಪತಿವ್ರತೇ । ದ್ರುಪದಸುತೇ ॥ ೧ ॥ ಮದವು ಪೆರ್ಚಿ ಮೂರ್ಖತ್ವದೀ । ಮಾತನಾಡುತ್ತ । ನಧಿಕತರ ವಿನೋದದೀ ॥ ವಿದುರ ಬಾ ಪಾಂಚಾಲೆಯನು ತಂ । ದುದಿತ ದಾಸಿಯರೊಳಗೆ ಬೆರಸೆನೆ । ಕುದಿವುತಾ ।

ನುಡಿದನು ಕೆದರುತಾ। ಹದನಗೆಟ್ಟೆಯೊ ಪಾಂಡುತನುಜರ । ಸುದತಿ ನಿನ್ನಯು ತೊತ್ತೆಯುಕಟಾ ।ವಿಷಮುಡುವಿಲಿಕ್ಕಿದೆಯೊ ಕುಲವ ನೀ । ಬದುಕುಪಾಯು ವ ಕಾಣೆನೆಂದನು ॥ ಪತಿವ್ರತೇ । ದ್ರುಪದಸುತೇ ॥ ೨ ॥ ಕೆಲಸಾರೆಂದು ವಿದು ರನ । ನಟ್ಟಸುತಾಗ । ಕಳುಹೀದ ಪ್ರಾಪ್ತಿಕನಾ ॥ ಕಳುಹಲವನೈರುತ್ತ ದೇವಿಯು ಬಳಿಗೆ ಬಂದೆರಗುತ್ತ ನುಡಿದನು । ಜಳುಕುತಾ ।ತನುವನು ಬಳು ಕುತಾ ॥ ಇಳೆಯುಧಿಪ ತಾ ಸೋತು ಕಡೆಯಲಿ । ಬಳಿಕ ನಿಮ್ಮೊಡ್ಡಿತ್ತ ಸೋಲಲು । ಕಲಿಸುಯೋಧನ ನಿಮ್ಮ ತಹುದೆಂ । ದೊಲವಿನಿಂದಲಿಂದೆನ್ನ ನಟ್ಟಿದ ॥ ಪತಿವ್ರತೇ । ದ್ರುಪದಸುತೇ ॥ ೩ ॥ ಸಿಡಿಲೆರಗಿದ ಬಾಳೆಯು॥ ಬಾಡಿ ಬೀಳ್ವಂತೆ । ನುಡಿಯು ಕೇಳುತ ದೇವಿಯೂ ॥ ನಡುಗಿ ಮೂರ್ಛೆಸುತೆದ್ದು ನುಡಿದಳು । ವಡೆಯು ಸೋತ ಮೇಲಿನ್ನನೊಡ್ಡುವ । ನಡತೆಯೋ । ಶಾಸ್ತ್ರದ ದೃಢತೆಯೋ ॥ ಒಡನೆ ಬಹುದೇ ಪ್ರಷ್ಪವತಿಯುಹೆ । ನಡೆಯೆನಲ್ಕೈತಂದು ಪೇಳಲು । ಕಿಡಿಯುಗುಳುತನುಜನನು ಕಳುಹಿದ । ಬಿಡದೆಳೆದು ತಹು ದೆಂದು ಖತಿಯುಲಿ ॥ ಪತಿವ್ರತೇ । ದ್ರುಪದಸುತೇ ॥ ೪ ॥ ದುರುಳ ದುಶ್ಶಾಸನ ನು। ದೇವಿಯು ಬಳಿಗೆ। ಬರುತ ಝೇಂಕರಿಸಿದನೂ॥ ಶಿಂಮುಡಿಗೆ ಕೈಯಿಕ್ಕ ತೆಳೆಯುಲು । ಪರಿಚರದ ದಾಸಿಯುರು ಹಾಯೆಂ।ದೊರಲುತಾ । ಬೆದರುತಿರೆ। ಮರುಗುತಾ ॥ ಭರದಿ ತಂದೊಡ್ಡೋಲಗದಿ ನಿಂ । ದಿರಿಸಿ ವಸ್ತ್ರಾಭರಣ ತೆಗೆ ಸೆನೆ । ದುರುಳ ಶರಗನು ಪಿಡಿಯುಲಾ । ತರುಣಿ ಗುರು ವೆಂಕಟನ ನೆನ ದಳು ॥ ಪತಿವ್ರತೇ । ದ್ರುಪದಸುತೇ ॥ ೫ ॥

## ದ್ವಿತಿಯಾಂಕ.

ರಾಗ, ಆನಂದಭೈರವಿ [ಧಾಟಿ:- ಪಾಹಿ ಮಾಂ ಶ್ರೀವೇಣುಗೋಪಾಲಾ] ಆದಿತಾಳ

ಅರಿಗುಸುರುವೆ। ಇಂದೆನ್ನಳಿಮಾನವಾ ।ಆರು ಕ್ಯಾವವರಿಲ್ಲವೈ॥ ಚಾರು ಸದ್ಧರ್ಮ ವಿ । ಚಾರವ ತಿಳಿದಿಹ । ಧೀರರಿಗಿ ಪರಿ ಮೀರಿತೆ ಮೌನವು ॥ಪ॥ ಕ್ರೂರಖಳನು ಪರ। ನಾರಿಯು ಶರಗವ । ಪಿಡಿದು ಸೆಳೆಯೆ ಬೇಗಾ । ತೋರ ದಂಡದಲಿ ತೋ।ಳ್ಗಳಲಿ ಬಲ್ಮೊಲೆಗಳ । ವಾರೆ ಮುಚ್ಚಿದಳಾಗಾ ॥ ಘೋರ ಸಭೆಯು ನೋಡಲು ತಲೆಗುತ್ತಿ। ಜಾಮಾರಿ ಕಳವಳಿಸುತಾ । ನೀರಪರಾಧಿ ಯು ಮಾನಗೊಂಬುವು ಶ್ರುತಿ । ಸಾರವೆ ಎಂದಳಲುತಾ ॥ ಚಾರುವಿವೇಕಿಗ ಳ್ಯಾರು ಇಲ್ಲವೆ ವಿ ।ಚಾರಹೀನರಿಗಾರು ಪೇಳುವರಿನ್ನೂ॥ ಅರಿಗುಸುರುವೆ ॥ ॥ ೧ ॥ ಚಿತ್ತದಲ್ಲಿ ಕೃಪೆಯಿಲ್ಲದಾಯಿತೆ ಎನ್ನ ಮುತ್ತಾತ ಗಾಂಗೇಯಾ ।

ಶಾಸ್ತ್ರಪೌರಾಣ ವೇದವನರುಹಿರುವ ದ್ವಿಜೋತ್ತಮ ಕೃಪಾಚಾರ್ಯ॥ ಅಸ್ತ್ರ ಶಸ್ತ್ರವಿದ್ಯಾಭ್ಯಾಸ ಗೈಸಿರುವ ಭೂಕೃತ್ರಿವಾಸ ಗುರುವೇ । ಸತ್ವಾಧಿಕನಶ್ವತ್ಥಾಮ ನೀ ಸುಮ್ಮನಿಹು । ದುತ್ತಮಂಗೆ ಥರವೇ ॥ ಧೂರ್ತರೋಲಗದಿ ಮಾರ್ಖತ್ವದಿ ನಿಪುಣರ್ ಸಾಭ್ಯಸ್ಥರೆನ್ನುವ ಗಾದೆ । ಎಸ್ತಂಸಿದುದಿಲ್ಲಿ ॥ ಆಂಗುಸುರುವೆ ॥ ೨ ॥ ದೃಷ್ಟಿ ಪೋದರೆ ಜ್ಞಾನ । ದೃಷ್ಟಿ ಶೂನ್ಯವೆ ಮಾವಾ । ದುಷ್ಟಸುತಗುಸುರಬಾರದೆ । ಹುಟ್ಟಿದರ್ನಿಮ್ಮಲ್ಲಿ ಗಾಂಧಾರಿಯುತ್ಯವ್ಮಾ । ಧೃಷ್ಟನ ಕೈಬಿಡಿಸಲಾಗದೆ ॥ ಪಟ್ಟದರಸಿ ಭಾನುಮತಿ ನೀ ತಂಗಿಯುಲ್ಲವೆ । ನಿಷ್ಟುರವಿದು ಸಂಯೋ । ಥಟ್ಟನೆ ಪೇಳಿ ನಿಮ್ಮಣ್ಣಗೆ ದುಸ್ಸಳಿ ಕಷ್ಟ ಬಿಡಿಸು ಸಖಿಯೇ ॥ ಎಷ್ಟನಕಲಿ ಮೊರೆಯಿಟ್ಟರು ಬಿಡಿಸುವ ಶ್ರೇಷ್ಠಂಲ್ಲದಾಯಿತು । ಕೆಟ್ಟಿತು ನೀತಿಯು ॥ ಆಂಗುಸುರುವೆ ॥ ೩ ॥ ಎಲೆ ಧರ್ಮಜ ನಿನ್ನ ಸಾಧು ಸಜ್ಜನತ್ವದ । ಬಲಿಯೊಳಿಕ್ಕಿದೆ ತಮ್ಮಂದ್ಯರನೂ । ಕಲಿ ಭೀಮನೆ ಕೇಳು ಕಡುಹನುಳಿದು ಹಗೆ । ಗಳಿಗೊಪ್ಪಿಸಿದೆ ಲಲನೆಯನೂ ॥ ಫಲುಗುಣ ನಿನ್ನ ಪಂಥ ಪರಾಕ್ರಮವೆಲ್ಲಿ । ಮುಳುಗಿ ಪೋದುದು ಪೇಳೈ । ಉಳಿದರಿಬ್ಬರಿಗೆಣೆ ಇಲ್ಲೆಂಬ ನಕುಲ । ಸಹದೇವ ನೀವಲ್ಲೈ ॥ ಬಳಕೆಯು ಕೌರವ ಸುಲಿವನು ಪ್ರಾಣವ । ಕಳೆವನು ಮಾನವ ಕಳಚುವ ಮುನ್ನವೆ ॥ ॥ ಆಂಗುಸುರುವೆ ॥ ೪ ॥ ಪ್ರಾಣತ್ಯಾಗದ ದುಃಖ ಒಂದೇ ಕ್ಷಣ । ಮಾನಹಾನಿ ದುಃಖವು ದಿನದಿನದೀ । ಈ ನಿರೋಧವ ಬಿಡಿಸುವರಿಲ್ಲ ಹಾ । ಕೃಷ್ಣ ನೀನೊಲಿವುದು ದಯದೀ ॥ ನಾನಾ ದೈನ್ಯತೆಯ ಬಟ್ಟರೂ ಸಕಲರು । ಜೀವಹಾನಿಯುಂತಾದರಲ್ಲಾ ॥ ದೀನಜನಾರ್ಥದಾಯಕನೆಂಬ ಬಿರುದುಳ್ಳ । ಶ್ರೀನಾಥ ನೀನಲ್ಲದಿಲ್ಲಾ ॥ ಕೌಣಪಕ್ಷೀಕ್ಷಕ । ಅನಾಥರಕ್ಷಕ । ಶ್ರೀನರಹರಿ ಗುರುವೇಂಕಟನಾಯಕ ॥ ಆಂಗುಸುರುವೆ ॥ ೫ ॥ ಶ್ರೀಃ ॥

## ತೃತೀಯಾಂಕ.

ರಾಗ, ಬೃಂದಾವನಸಾರಂಗ [ಧಾಟಿ:- ಪತಿವ್ರತೇ । ದ್ರುಪದಸುತೇ] ತ್ರಿವುಡೆತಾಳ

ಕಾಯೋ ಶ್ರೀಕರ ಕೇಶವಾ । ಎನ್ನಭಿಮಾನವ । ಕಾಯೊ ಶ್ರೀಕರ ಮಾಧವಾ ॥ ಪಲ್ಲ ॥ ಕಾಯೊ ಕಂಜಜ। ಧ್ಯೇಯ ಮುನಿಜನ। ಪ್ರಿಯ ದೀನಸಹಾಯ ಕರುಣದಿ । ಕಾಯೊ ಶ್ರೀಕರ ಕೇಶವಾ॥ ಅನು ॥ ಖೂಳ ಕೌರವರಾಯನೂ। ಲತ್ತವಾಡುತ। ಸೋಲಿಸಿದ ಐವರನೂ ॥ ಖೂಳ ದುಶ್ಯಾಸನ ಬಂತೆನ್ನ ಮುಡಿವಿಡಿದೇಳಿನುತ್ತೆಳದನೂ ॥ ಕೊಂಡ್ಯೊವುತೊಡ್ಡೋಲಗದಿ

ನಿಲಿಸಿದನೂ । ನಿಷ್ಠೂರನು ॥ ಮೇಲುದನು ಸೆಳೆವುತ್ತಿರಲ್ಕೆ ಸ । ಭಾಲಯದಿ ಪ್ರಾರ್ಥಿಸಲು ಯಾರೂ । ಪೇಳಿ ಬಿಡಿಸುವರಿಲ್ಲದ್ಯಾತು ಕೃ । ಪಾಳು ನಿನ್ನಯ ಮರೆಯ ಹೊಕ್ಕೆನು ॥ ಕಾಯೊ ಶ್ರೀಕರ ಕೇಶವಾ ॥ ೧ ॥ ಶರಗ ಬಿಡಿಸುವರಿಲ್ಲ । ಎನ್ನಭಿಮಾನವು । ಬರಿದೆ ಹೋಗುವದ್ಯಾತಲ್ಲ ॥ ಶರಣಾಗತರ ಕ್ಕಾವ । ಬಿರಿದು ನಿನ್ನದು ದೇವ । ಕರುಣದಿಂದೀಕ್ಷಿಪುದು । ಎನ್ನಭಿಮಾನವ । ಮರೆಯದೆ ರಕ್ಷಿಪುದು । ನೀ ಕರುಣಿಸುವದು ॥ ಹರಿ ಮುರಾರಿ ಮುಕುಂದ ಕೇಶವ । ಶರಧಿಶಯನ ಸುರೇಶ ಸರ್ವೇ । ಶ್ವರ ದುರಿತಸಂಹರಣ ಭವಭಯ । ಹರಣ ದೀನೋದ್ಧರಣ ದೇವನೆ ॥ ಕಾಯೋ ಶ್ರೀಕರ ಕೇಶವಾ ॥ ೨ ॥ ಪತಿಗಳೊಪ್ಪಿಸಿ ಕೊಟ್ಟರು । ಪಾಡುಪಂಥಪ । ಖತಿಯನೆಕ್ಕುವ ಬಿಟ್ಟರೂ ॥ ಗತಿಯಗಾಣೆ ನಾನಿನ್ನು । ಗತಿಹೀನರಿಗೆ ನೀನೆ । ಗತಿ ಎಂದು ಶ್ರುತಿ ಪೇಳ್ವುದೂ । ನಿನ್ನ ಶರಣಾ । ಗತರಿಗೆ ಭಯವಿಲ್ಲೆಂದು । ನಿಶ್ಚಯವಿದೂ ॥ ಪ್ರತಿರಹಿತ ಸುಲಲಿತಚರಿತನ । ಚ್ಯುತ ಸೂನೃತನತುಲಿತಮಹಿಮ ಖಳ । ಮಥನ ಪುಣ್ಯ ಸತ್ಕಥನ ಮುನಿಜನ । ನುತ ಸುರಾರ್ಚಿತ ರತಿಪತಿಯ ಪಿತ ॥ ಕಾಯೊ ಶ್ರೀಕರ ಕೇಶವಾ ॥ ೩ ॥ ತರಳ ಧೃವನಿಗೊಲಿದೆ । ಪ್ರಹಲ್ಲಾದನ । ಕರುಣದಿಂದುಳುಹಿಸಿದೆ ॥ ಬರಲು ವಿಭೀಷಣಗೆ ಸ್ಥಿರಪಟ್ಟವಗಟ್ಟಿದೆ । ಕರಿರಾಜನನು ಸಲಹಿದೆ । ಅಂಬರೀಷನ । ಭರದಿ ಚಕ್ರದಿಂದ ಕ್ಕಾಯ್ದೆ । ಕೃಪೆಯ ಗೈದೆ ॥ ಕರದು ನಾರಗನೆಂದಜಾಮಿಳ । ಗಿರದೆ ಮುಕ್ತಿಯನಿತ್ತ ಸುವ್ರತ । ಭರಿತ ರುಕ್ಮಾಂಗದಗೊಲಿದ ಶ್ರೀ । ಯರಸ ಸದ್ಭಕತರ ಕ್ಕಾವಂದದಿ ॥ ಕಾಯೋ ಶ್ರೀಕರ ಕೇಶವಾ ॥ ॥ ೪ ॥ ಸತಿಯರೊಳಗನುಸೂಯೆ । ರೇಣುಕೆ ಅರುಂಧತಿ ಬೃಹಸ್ಪತಿಜಾಯೆ ॥ ಮತಿಯುತೆ ವೃಂದೆ ಮಂಡೋದರಿ ಸಾವಿತ್ರಿ । ಅತಿರೂಪಿನಹಲ್ಲೆ ಪ್ರೌಢೇ । ಅವರಂದದೀ । ಪತಿವ್ರತೇ ತಾನುಳ್ಳಡೆ । ಉಪೇಕ್ಷೆಮಾಡೆ ॥ ಮತಿವಿಹೀನನು ಪಿಡಿದ ಶರಗ ಪ್ರ । ಹೃತವೆನಿಸುತಭಿಮಾನ ಉಳುಹಿಸು । ಗತಿನೀನಲ್ಲದಿನ್ನಿಲ್ಲ ಲಕ್ಷ್ಮೀ । ಪತಿ ಮುಕುಂದ ಗೋವಿಂದ ಕೃಷ್ಣನೆ ॥ ಕಾಯೊ ಶ್ರೀಕರ ಕೇಶವಾ ॥ ॥ ೫ ॥ ರಕ್ಷಿಸೊ ರಕ್ಷಿಸೆನ್ನಾ । ಕಾರುಣ್ಯಕ । ಟಾಕ್ಷದಿಂದೀಕ್ಷಿಸೆನ್ನಾ ॥ ಅಕ್ಷಯಾತ್ಮಕನೆ ನೀ । ರಕ್ಷಿಸದಿರೆ ಜೇರೆ । ರಕ್ಷಿಪರಿಲ್ಲ ದೇವಾ । ಆಹಾ ಭಕ್ತ । ರಕ್ಷಕನೆ ಸಂಜೀವಾ । ಶ್ರೀಕೇಶವಾ । ಪಕ್ಷಿಗಮನನೆ ಹಾಹಾ ಹಾ ಸ । ದ್ದುಕ್ಷ ಹಾಹಾ ಹಾ ಸುರಾಘ । ವೃಕ್ಷ ಹಾಹಾ ಸಲಹುದೀಗ ಸಾ । ರಕ್ಷ ಬಿರಿದುಳ್ಳೇಕದೇವನೆ ॥ ಕಾಯೊ ಶ್ರೀಕರ ಕೇಶವಾ ॥ ೬ ॥ ಈ ತೆರದಿ ಪಾಂಚಾಲೆಯು । ನುತಿಸಲು ಶ್ರೀನಾಥ ಕೇಳಿದ ಮೊರೆಯೂ ॥ ಅತತೂಕ್ಷಣಕ್ಷಯ । ಶೀತುವಾಗಲೆಂದು

ಕೈ । ಸಾತಿಶಯದಿ ಪೇಳ್ದನೂ । ಖಳನ ಕೈಗಳ್ಸೋತು ಹಿಮ್ಮೆಟ್ಟಿದನೂ । ಬಳಲಿದನೂ ॥ ಕೌತುಕದ ಥರಥರದ ವಸ್ತ್ರ । ವ್ರಾತರಾಶಿಗಳೆಸೆದುದೇನೆನೆ । ಭೂತಳದಿ ಗುರು ವೇಂಕಟೇಶನ । ಪ್ರೀತಭಕತರಿಂಗಿಲ್ಲ ಭೀತಿಯೂ ॥ ಕಾಯೊ ಶ್ರೀವರ ಕೇಶವಾ ॥ ೭ ॥ ಶ್ರೀ೪ ॥

## ಚತುರ್ಥಾಂಕ.

ರಾಗ ಆರಬಿ, [ಧಾಟಿ:- ಶ್ರೀಮನೋಹರ ಕೃಷ್ಣನಿಗೆ ಜಯ ಮಂಗಲಂ] ಏಕತಾಳ.

ಶ್ರೀನಿವಾಸನ ಸಾರಿದವರಿಗೆ ಏನೂ ಭಯವಿಲ್ಲಾ। ಮಾನುನಿಯ ಅಭಿಮಾನ ಉಳುಹಿದ । ದಾನವಾಂತಕ ದೀನರಕ್ಷಕ ॥ ಶ್ರೀನಿವಾಸನ ಸಾರಿದವರಿಗೆ ॥ ಪ ॥ ಸೆಳೆವುತಿರ್ದನು ಖೂಳ । ವಸ್ತ್ರವೂ ಹಲವೂ । ಬೆಳೆವುತಿರ್ದವೂ । ಬಳಲುತಿರೆ ಬೆಂಡಾದ ಬಾಹಿರನೂ । ಛಲನೂ । ತೆಗೆದೂ ನಿಂದನೂ ಚಲುವ ಬಹು ವಿಧವರ್ಣದ ವಸನಗಳೂ । ಮಿಗಿಲೂ । ಗಗನವ ನಿಲುಕಲೂ ॥ ಕಳಿತ ಸಭೆಗತಿ ಕೌತುಕಂಗಳು । ತುಳುಕುತಿರೆ ಬೆರಗಾದರೆಲ್ಲರು । ಘಳಿಸಿದೆಯೊ ಅಪಕೀರ್ತಿಯನು ಬಿಟ್ಟು । ಕಳುಹು ಕಾಂತೆಯನೆಂಪ ವಿದುರನು ॥ ಶ್ರೀನಿವಾಸನ ಸಾರಿದವರಿಗೆ ಏನು ಭಯವಿಲ್ಲ ॥ ೧ ॥ ನೀತಿ ಬಲ್ಲತಿಹುಚ್ಚ ವಿದುರನು । ಇವನ । ಮಾತಿಲಿ ಫಲವೇನು । ಈ ತಳೋದರಿ ತೊತ್ತೆಯಾಗೆಲಸದಲೀ । ಇರಲೀ । ಬೆರಸಿ ಬಳಸಲೀ ॥ ಘಾತೆ ಇವಳು ದೃಷ್ಟಿಬಂಧಗಳೂ । ಹಗಲೂ । ಇರುಳಂತೆಸಗಿದಳೂ ॥ ಭೀತಲಜ್ಜಾಜಾತಿಯುಳಿದುದು । ಪ್ರೀತೆಯೈವರಿಗೊಬ್ಬಳೀ ಬಹು । ಪಾತಿವ್ರತೆ ಕರ್ಣನೆ ಬೆಳದೊಸನವ । ಈ ತತೂಕ್ಷಣದಲಿ ಪೊಸೆಂದನು ॥ ಶ್ರೀನಿವಾಸನ ಸಾರಿದವರಿಗಿನ್ನೇನೂ ಭಯವಿಲ್ಲಾ ॥ ೨ ॥ ರಾಯ ಸೋತಮೇಲೆನ್ನ ಸೋಲಲೂ । ಗೆಲಲೂ । ಇವರೊಡವೆಯೊ ಕೇಳೂ । ಗಾಂಗೇಯ ಶಾಸ್ತ್ರೋಕ್ತಿಗಳ ಸಮ್ಮತವೇ । ಹಿತವೇ । ಮತವೇ ಎಂದೆನಲೂ । ಕೌಂತೇಯನುಸುರಲಿ ಸತ್ಯವಾಕ್ಯವನೂ । ಧಿಟನೂ । ಬಿಡುವನೆಂದನು ॥ ಜೀಯ ನಿಮ್ಮ ಪಸಾಯತೆಯರೊಳ । ಗೀ ಯುವತಿಯಳನು ಬೆರಸು ತೊತ್ತಿರ । ಲಾಯ ಬೇರುಪಕೃತಿಯೇನೆಂದು ರಾಧೇಯ ಕುರುಪತಿಗೊರೆಯಿಸುತೆಂದನು ॥ ಶ್ರೀನಿವಾಸನ ॥ ೩ ॥ ಎಲೆಗೆ ಭಜಿಸಾ ಕೌರವೇಂದ್ರನನೂ । ನೀನೂ । ಮರೆವುದೈವರನೂ । ವಲಿಸು ಗುಣದಲಿ ಮಾತಾ ನೀ ಕೇಳು । ಬಾಳೂ । ತಾಳೂ ಎನಲೆಂದಳೂ ॥ ಕೊಲುವನೀತನ ರಣದಲಿ ಭೀಮನೂ । ಬಿಡನೂ । ವಲಿಸುವನು

ಎಂದಾ । ಲಲನೆಯೋಕ್ತಿಯು ಕೇಳಿ ಘರ್ಜಿಸಿ । ಎಳೆದ್ಯೊಯ್ವುತ ನಮ್ಮಯ ದಾಸೀಜನ। ರೊಳಗೆ ಬೆಂಸೆಲೆ ತಮ್ಮನೆನಲಾ । ದೆಳದೆಳದುದ್ಧೃತಾದ ಭರದಲಿ॥ ಶ್ರೀನಿವಾಸನ ॥ ೪ ॥ ಬಂದು ನೃಪದಾತ್ಮಜೆಯು ತುಡುಕಿದನೂ । ಖಳನೂ। ದುಶ್ಶಾಸನನೂ । ಇಂದುಮುಖಿ ಹೆಣಗಿದಳೂ । ಕೂಗಿದಳೂ । ಪ್ರಳಾಪಿಸಿದಳೂ ॥ ಇಂದ್ರನಿಲಯಮುಮುಖ್ಯ ಸುಮನಸ । ವೃಂದಯುಮರರ್ರೈ ಬಿಡಿಸಿರೆಪ್ಪರು । ಇಂದಿರೇಶ ಮುಕುಂದ ದುರ್ಜನ । ವೃಂದಶೀಕ್ಷರವಿಂದಲೋಚನ । ಹೊಂದಿದೆನು ಗುರು ವೆಂಕಟನ ಕೃಪೆ। ಯಿಂದ ರಕ್ಷಿಸು ಎಂದಳಬಲೆಯು ॥ ಶ್ರೀನಿವಾಸನ ಸಾಂದವಂಗಿಸ್ನೇನು ಭಯವಿಲ್ಲಾ ॥ ೫ ॥ ಶ್ರೀ ॥

## ಪಂಚಮಾಂಕ.

ರಾಗ ನಾಟಿ. ಏಕತಾಳ.

ಶ್ರೀಕೃಷ್ಣನ ಕೃಪೆಯೂ ॥ ಶ್ರೀಕೃಷ್ಣನ ಕೃಪೆಯುಳ್ಳ ಭಕತರಿಗೆ ಪ್ರಾಕೃತಜನರುಪಹತಿ ಬಾಧಿಪುದೇ ॥ ಶ್ರೀಕೃಷ್ಣನ ಕೃಪೆಯೂ ॥ ಪ ॥ ಕಡುಮೂರ್ಖನು ಕೌರವನುಕ್ತಿಯ ಕೇಳ್ ಡಿಯಿಡುತ್ತೈತಂದಾಗ ಪಾಂಚಾಲಿಯು । ತುಡುಕುತಳೆಯೆ ಹೆಣಗಿದಳು ಪ್ರಳಾಪಿಸು। ತ್ತಡಿಗಡಿಗೊರಲುತಿರೇ॥ ಸಡಗರಿಸುತ ದುರ್ಯೋಧನ ತನ್ನಯ । ತೊಡೆಗಳ ತೋರಲು ಭೀಮನ ಗಧೆ ತವ । ತೊಡೆಗಳ ಕಡಿಯುಲಿ ದೃಢವಿದು ತಪ್ಪದು।ನುಡಿಯುತ್ತೈವರ ಮಡದಿ ಶಪಿಸಿದಳೂ ॥ ಶ್ರೀಕೃಷ್ಣನ ಕೃಪೆಯೂ ॥ ೧ ॥ ಕಡಲ ಘರೆಗಳೊಳಗುಬ್ಬಿ ತುಡುಕುತಿಹ।ವಡಭಾನಲನಂದದಿ ಮೇಘಂಗಳು । ತುಡುಕಿಹ್ಯಾಕುವ ರವಿಯಂತಿರೆ ಸಭೆಯೊಳ।ಗಡ ಹ್ಯಾವುತ ಭೀಮಾ ॥ ಕುಡಿ ಕುಡಿ ಕೌಟಾರನ ರಕ್ತವ ತಲೆ।ಗಡಿದು ದುರ್ಯೋಧನ ನೂರುಗಳನು ಹಿ।ಮ್ಮಡಿಸಿ ಮುನಿಯುಲಿ ಧರ್ಮಜನೆನುತೆದ್ದನು । ಘುಡುಘುಡಿಸುತ ಸಭೆ ನಡುಗಿದುದಾಗಲೆ ॥ ಶ್ರೀಕೃಷ್ಣನ ಕೃಪೆಯೂ ॥ ೨ ॥ ಹೆದರಿಕೆ ಹೊಕ್ಕದು ಸಭೆಗಾ ಕೌರವ । ನೆದೆ ಬಿರಿದುದು ಭಗ್ನನೆ ಸ್ಥಾನಾಂಬುಧಿ । ಕದಡುತಲುಕ್ಕಿತು ಹೆದರಿಕೆಗರಹೋಡದು ಭೂಪಾಲಂಗೆ ॥ ಹದನಹುದೋ ಹಾ! ಹಾ! ಯೆನುತಿರ್ದರು। ವಿದುರ ಭೀಷ್ಮ ಕೃಪ ದ್ರೋಣಾದಿಗಳು । ಕೆದರುಗಂಗಳ ಕಾಂತಿಯುಹುದಿದವು ಹರು । ಷದ ಪುಳಕದಿ ಪವನಜನನು ನೋಡುತ ॥ ಶ್ರೀಕೃಷ್ಣನ ಕೃಪೆಯೂ ॥ ೩ ॥ ಶಿಂಗನಾರ್ಭಟೆಯನು ಕಾಣುತ್ತೋಡುವ ಮಾ।ತಂಗನಂದದಿ ದೇವಿಯ ತುಡುಕಿದ ಖಳರ್ । ಹಿಂಗುತ ಬಿಟ್ಟಗಲಿದರು

ಮಾರುತಿ ಇದಿರಂಗವಿಸಲು ನಡುಗೀ || ಅಂಗನೆ ನುಡಿ ನುಡಿ ಬೆದರದಿಂವರ ಖಂ। ಡಂಗಳ ತರಿದು ಉಣಲಿಕ್ಕುವೆ ಭೂ। ತಂಗಳ ಶನತ್ತುಡಿಗೆವಲಯುವ ನುಲ್ಲಂಘಿಸುವೆನು ಕೇಳೆಂದನಾ ಭೀಮನು || ಶ್ರೀಕೃಷ್ಣನ ಕೃಪೆಯೂ|| ೪ || ಕೇಳುತಲರ್ಜುನ ನಡೆತಂದನಿಲಜಗೆ। ಪೇಳಿದ ರಿಪುಗಳವಿಡಿವ ಹೊತ್ತಲ್ಲಿದು ನೃ।ಪಾಲನ ಭಾಷೆಯು ಕೆಡಿಸುವದನುಚಿತವೆಂದುಸುರಲು ಕೇಳೀ|| ತಾಳಿದ ಕೌರವ ನೂರ್ವರ ತರಿವೆನು। ಖೂಳ ದುಶ್ಶ್ಯಾಸನ ರಕುತವ ಕುಡಿವೆನು। ಬೀಳುಗಡಿವೆ ಕುರುಪತಿಯು ತೊಡೆಗಳ ಚಂ। ಡಾಡಿಪೆ ಗಧೆಯಿಂದೆಂದನಾ ಭೀಮನು || ಶ್ರೀಕೃಷ್ಣನ ಕೃಪೆಯೂ || ೫ || ಇನತನುಜನ ಶಿರಭಾಂಡದಿ ದುಶ್ಶ್ಯಾ।ಸನನ ರಕುತವನು ತುಂಬುತ ದುರ್ಯೊಧನನೆಡಬಲದ ಖಂಡಂ ಗಳನಿಟ್ಟು ಶಾ।ಕುನಿಯುಕಲಿಜವನೂ || ಎಣೆಗೊಳಿಸುತ ಕೌರವರ ತಲೆಗಳಿಂ ದೋಲೆಯುನು ಪೂಡುತ ಕ್ರೋಧಾಗ್ನಿಯಿಂ ಕಾದಿ। ದುಣಲಿಕ್ಕುವೆ ಶಾಕಿನಿ ಢಾಕಿನಿಯರ। ಗಣಕಿದು ನಿಶ್ಚಯ ವನಿತೆ ಕೇಳೆಂದನೂ || ಶ್ರೀಕೃಷ್ಣನ ಕೃಪೆಯೂ || ೬ || ಧರಣಿಜಲಾನಲನನಿಲಮುಖ್ಯಸುರ। ವರರೆಲ್ಲರು ನೀವು ಬಂದುಕೊಳ್ಳಿರೆನೆ। ಶಿರವ ಕಡಿವೆನೆನೆ ತಂವೆ ಕರ್ಣನಿಗೆಂದನು। ವರ ಶಕು ನಿಗೆ ಸಹದೇವಾ ಬಂಸಿದರೀಪರಿ ಭಾಷೆಯುನಾಗಳೆ। ಕುರುಕುಲಜರು ಕಳ ವಳಿಸುತಲಿರ್ದರು। ಧರೆಯೊಳು ಶ್ರೀಗುರು ವೆಂಕಟರಮಣನ। ಶರಣ ಹೊಕ್ಕಂಗೆ ಇತರಭಯುವಿಲ್ಲವು || ಶ್ರೀಕೃಷ್ಣನ ಕೃಪೆಯೂ || ೭ ||

## ಷಷ್ಠಾಂಕ.

ರಾಗ. ಘಂಟಾರವ [ಧಾಟಿ:- ಒಬ್ಬನೆ ದೇವ ಕಣಾ] ಏಕತಾಳ.

ಜಯ ಹಂಭಕುತರಿಗಹುದೂ। ಅಪಜಯುಹಂವಿಮುಖರಿಗಹುದೂ || ಲಯುವರ್ಜಿತಲಕ್ಷ್ಮೀರಮಣನ ಪದ।ದ್ವಯುದಾಶ್ರಿತಜನರಿಗೆ ಭಯುವುಂಟೇ || ಜಯುಹಂಭಕತರಿಗಹುದೂ || ಪಲ್ಲ || ಭಾಷೆಯು ಭೀಮಾರ್ಜುನರೂ। ಸ್ವರ್ಗವಾಸಿಗಳಿಗೆ ಬರಸಿದರೂ। ಶೋಷಣೆಭಯುಭಾಂಸಿತೂ। ಕಂಡಾ ಸಭೆಯಲ್ಲ ನಡುಗಿತೂ || ಸೂಸಿತುತ್ಪಾತದ ರಾಶಿಗಳಾಪುರ।ವಾಸಿಗಳೆಲ್ಲರು ಲೇಸಲ್ಲೆಂದರು || ಜಯ ಹಂಭಕತರಿಗಹುದೂ || ೧ || ಪ್ರಳಯೋತ್ಪಾತ ತೋರಿದವೂ। ಖಳಕುಲಸಂಹಾರ ಸಮಯುವೂ || ಘಳಿಲನೆ ದ್ರುಪದಾ ತ್ಮಜೆಯಾ। ಬೇಡಿಕೊಳುತ್ತುಳುಹಿಸು ಸಂತತಿಯಾ || ಕಳುಹದಿರೆಂದು

ಗಂಗಾಸುತ ಮುಖ್ಯರು । ತಿಳುಹಿಸಲಂಧ ನೃಪಾಲನೈತಂದನು ॥ ಜಯ ಹರಿ ಭಕತರಿಗಹುದೂ ॥ ೨ ॥ ಮಗಳೆ ನೀ ಮರೆ ಬಳಲಿಕೆಯೂ । ಎನ್ನ ಮಗನೆಸಗಿದ ಉಪಹತಿಯಾ ॥ ಜಗದಿ ಸಜ್ಜನರು ನಿನ್ನವರೂ । ಮೂರ್ಖರಿಂಗೆ ಮೊದಲಿಗರು ಎನ್ನವರೂ॥ ಅಗಣಿತ ಅಪರಾಧಗಳ ಕ್ಷಮಿಸು ಮನ। ಸಿಗೆ ಬಂದುದ ಕೇಳ್ ಪ್ರಕಟದಿ ಕೊಡುವೆನು ॥ ಜಯಹರಿಭಕತರಿಗಹುದೂ ॥ ೩ ॥ ಜರದುದೆಲ್ಲವನು ಮರತೆವೂ । ಮಾವ। ಹಿರಿಯರು ನಮಗೆಲ್ಲ ನೀವೂ ॥ ಅರಸರ ಸೆರೆಯ ಬಿಡುವದೂ । ನಮ್ಮ । ಧರಣಿ ಬಲ ಸಹ ಕೊಡುವದೂ॥ ಅರಿಕೆ ಇವೇನೆನೆ ಸೈನಿಕ ಸಹಿತಲೆ ।ತೆರಳಿ ರಾಜ್ಯಕೆ ಸುಸ್ಥಿರದಿರವಲೆಂದನು ॥ ಜಯ ಹರಿಭಕುತರಿಗಹುದೂ ॥ ೪ ॥ ಎನುತಾಭರಣ ವಸನವಾ। ನಿತ್ತನಿಬರಿಗಿತ್ತು ಬೆಸನವಾ ॥ ವಿನಯದಿ ಬೀಳ್ಕೊಂಡಿವರೂ । ಸರ್ವರ। ರನುಕೂಲದಿ ಪೊರಟರೂ ॥ ಮನದಿ ಹಿಗ್ಗುತ ಶ್ರೀಗುರು ವೆಂಕಟರಮಣನ । ನೆನವುತ ಸಂಭ್ರಮದಿ ತೆರಳಿದರು ॥ ಜಯ ಹರಿಭಕುತರಿಗಹುದು । ಅಪಜಯ ಹರಿವಿಮುಖರಿಗಹುದೂ ॥ ೫ ॥ ಶ್ರೀ ೬ ॥

## ಸಪ್ತಮಾಂಕ. ಮಂಗಲಪದ.

ರಾಗ ರೇಗುಪ್ತಿ, ಮಟ್ಟಿತಾಳ.

ಮಂಗಳ ಜಯ ಮಂಗಳಜಯ ಮಂಗಳ ರಂಗನಿಗೆ॥ ಗಂಗೆಯನಂಗುಟದಿಂ ಪಡೆ। ದಂಗಜಜನಕನಿಗೆ॥ ಮಂಗಳ ॥ ಪ ॥ ವಸುದೇವನ ಸುತನೆನಿಸಿದ । ಬಿಸಜನಾಭನಿಗೆ ।ಅಸುರೆಯ ಮೊಲೆ ವಿಷವನು ಪೇ।ರ್ದಸು ಸಹಗೊಂಡವಗೆ ॥ ಶಶಿರವಿತೇಜಗೆ ಕಂಸದ್ವಿಷಚಿದ್ರಸಗೆ । ಪಸುಪಾಲಗೆ ಋಷಿನುತ ಸಾ।ರಸಭವಪೂಜಿತಗೇ ॥ ಮಂಗಳಜಯ ಮಂಗಳಂ ॥ ೧ ॥ ಚ್ಯುತರಹಿತಚ್ಯುತನಿಗೆ ಮುನಿ। ನುತ ಗುಣಗಣಯುತಗೆ ॥ ಪ್ರತಿರಹಿತಪ್ರತಿಮಗೆ ಕ್ಷಿತಿ। ಹತಸೂಂಧೃತಗೇ ॥ ಶ್ರುತಿಸ್ಮೃತಿಸಂಯುತಚರಿತಗೆ । ರತಿಪತಿತಾತನಿಗೆ । ಪೃಥೆಸುತಸಾರಥಿಯಾದಾ । ಶ್ರಿತಜನವಾಂಛಿತಗೇ ॥ ಮಂಗಳ ॥ ೨ ॥ ಅಂಕುಶಧ್ವಜ ಪಂಕಜರೇ । ಖಾಂಕಿತ ಚರಣನಿಗೆ ॥ ಶಂಕರಮುಖ್ಯಾಮರಮುನಿ । ಸಂಕುಲಸೇವಿತಗೇ॥ ಕುಂಕುಮಚಂದನಚರ್ಚಿತ ಶ್ರೀವ।ತ್ಸಾಂಕಿತ ಮಾಧವಗೆ । ಬಿಂಕದ ವಳಲಂಕೆಯ ಗುರು । ವೇಂಕಟರಮಣನಿಗೆ ॥ ಮಂಗಳ ಜಯ ಮಂಗಳ ಜಯ ಮಂಗಳ ರಂಗನಿಗೆ॥ ೩ ॥ ಶ್ರೀ ೭ ॥



## ಭಾಗವತದೊಳಗಣ ಪ್ರಹ್ಲಾದಚರಿತ್ರೆ.

॥ ೩೯ ॥ ರಾಗ, ಬೇಗಡೆ [ಧಾಟಿ:— ಧಾಂ ಧಾಂ ಧಾಂ ಧಾಂ] ಏಕತಾಳ

ಶ್ರೀನರಹರಿ ಶರಣಾಗತರಕ್ಷಕ । ದೀನಜನೋದ್ಧಾರೀ ॥ ಭಾನುಶತಕ್ಕೋಟಿ ಸಮಾನತೇಜ ಮಹ । ದಾನವ ವಂಶಾರಣ್ಯ ದಹಿಪ ಕೃಶಾನು ಸುಜನಸುರಧೇನು ಸರ್ವೋತ್ತಮ ॥ ಶ್ರೀನರಹರಿ ॥ ಪಲ್ಲ ॥ ಶರಣ ಪ್ರಹಲ್ಲಾದನಂದೂ। ಶ್ರೀಶನ। ಚರಣವೆ ಗತಿಯೆಂದೂ ॥ ಮರೆಯದಚ್ಯುತನ ಪದವಾ । ಮನದಿ ಮಮಕರಿಸಿ ಸ್ಮರಿಸುತ್ತಿರುವಾ ॥ ಪರಿಯ ಹಿರಣ್ಯಕಶ್ಯಪು ಕಾಣುತ ತನ। ಗಾಯಹ ನಾರಾಯಣನ ನಾಮಂಗಳ। ಸ್ಮರಿಸುವ ಶಿಶುವಿನ ಬಾಲಭಾಷಿತಗಳ। ಮರೆಯಿಸಬೇಕೆನುತಾ॥ ಕರಸುತ ಅಣ್ಣಂಗಳಿಗೆಂದನು ಈ ತರಳನ ದುರ್ಭಾಷಿತವ ಬಿಡಿಸಿ ಕುಲ । ಬಿರಿದಿನ ವಿದ್ಯವ ಕಲಿಸುತ ಬರಹವ । ಬರಿಸಿರೆನಲು ಭಕತನ ಬಿಡದುಳುಹಿದ ॥ ಶ್ರೀನರಹರಿ॥ ೧ ॥ ಅಣ್ಣಗಳತಿಮುದದಿ । ಅಕ್ಷರಾಭ್ಯಾಸ । ವನ್ನು ಗೈಯುತ ವಿಧದೀ ॥ ಓನ್ನಮೋ ಶಿವಾ ಎಂದು ತಾ ಬರೆ ಬಲುಚಿಣ್ಣನೆ ಎನಲೆಂದೂ ॥ ಎನ್ನೊಡೆಯನು ಶ್ರೀನಾರಾಯಣ ಗತಿ ; ಎನ್ನುತ ಬರೆವುತ್ತಿರೆ ಕಾಣುತ ಕರ। ವನ್ನು ಪಿಡಿದು ಬರೆಸಿದರದು ವಿಷ್ಣುಪ್ರಸನ್ನವೆಂದ್ಯಾತು॥ ಮನ್ನದಿ ವಿಸ್ಮಯಬಡುತಲೆ ಪ್ರತಿದಿನ। ದಿನ್ನದಿ ಪಾಠವ ಪೇಳಲು ಮುರಹರ । ಪನ್ನಗಶಯನ ಪರಾತ್ಪರವಸ್ತು ನೀ । ನೆನ್ನನು ಸಲಹೆಂದನು ಪ್ರಹಲ್ಲಾದನು ॥ ಶ್ರೀನರಹರಿ ॥ ೨ ॥ ದಣಿದರಣ್ಣಗಳೆಲ್ಲರೂ । ಪ್ರಹ್ಲಾದನ। ದನುಜಗೊಪ್ಪಿಸುತೆಂದರೂ ॥ ತನಯನ ತಿದ್ದುವರೇ । ತಮ್ಮಿಂದನು । ಸರಿಸದು ಪೇಳುವರೇ ॥ ಎನಲುರಿ ಮಸಗಿ ಕೋ । ಪಾನಲನಾಗಿಘ । ರ್ಜನೆ ಗೈಯುತ ಸುತನಂ ಕಾಣುತ ಪೇ । ಳ್ದನು ಕೇಳೆಲವೊ ನೀ ವಿಷ್ಣುವನೊಂದೇ । ಕ್ಷಣ ಮರೆಯದೆ ನೆನವೆ ॥ ನಿನಗೇನಹನವ ಪೇಳೆನೆ ಪೇಳ್ದನು ಕೇಳ್ । ಜನಕನು ನೀನೀ ಜನ್ಮಕ್ಕೆ ನಿಜವಹ । ಜನಕನು ಶ್ರೀಲಕ್ಷ್ಮೀಪತಿ ಬಲು ಬಲು । ಜನುಮದಿ ಜಾಗ್ರತೆ ಇತ್ತು ಪೊರೆವುತಿಹ ॥ ಶ್ರೀನರಹರಿ ॥ ೩ ॥ ಮೆರೆವಾ ತ್ಯಾತಂದೆಗಳೂ । ಶ್ರೀಹರಿಯೆಂದು । ವರಲುವ ನಿವನೀಗಲೂ ॥ ಹರಿ ಇವನನು ಕ್ಯಾವಾ । ಆ ಪರಿಗಳ । ಪರಿಕಿಸುತ್ತೀಕ್ಷಿಸುವಾ॥ ತರಳನು ಇವ ನಮಗಲ್ಲವೆನುತ ಮಹ। ಗರಳವು ಕುಡಿಸಲ್ಕಮೃತವಾದುದು ಬಲು । ಉರಿಯಂ ಪೊದಿಸಲು ಸೀತಳವಾದುದು । ಹವ್ಯಾರ್ಗಗ್ರಗಳಿಂದಾ ॥ ಉರುಳಿಸಲವನಿಯು ತಲ್ಪವಾದುದು ಪದ । ಕರಗಳ ಕಟ್ಟ

ಗಾಢೋದಕದಲಿ ಶಿಲೆ । ಬೆಸಸುತ ಮುಳುಗಿಸಲಿದ್ದು ಬಂದನು ಜಗ । ದೊಡೆಯ ಜನಾರ್ದನ ನಮೊ ಜಯವೆಂದನೂ ॥ ಶ್ರೀನರಹರಿ ॥ ೪ ॥ ಎಣಿಸಲಪರಿಮಿತದಾ । ಕೊಲೆಗಳ । ತನಯಗಾಗ ಕೊಲಿಸಿದಾ ॥ ಇನಿತಲೆಗಳು ಸೋಂಕದೇ । ಪ್ರಹಲ್ಲಾದನು । ಸುಖಿಪಿರೆ ಬಲು ಕೋಂಕದೇ ॥ ಮನದೊಳಗದ್ಭುತಪಡುತೆಂದನು ನೀ । ನೆನಹುತ್ತಿಹ ನಿನ್ನೊಡೆಯನದೆಲ್ಲಿಹ । ನೆನಲು ಕೇಳೆನ್ನಯ ಸ್ವಾಮಿಯು ಸಚ್ಚಿ । ತ್ರಸ ಜೀವರುಗಳಿಗೆ॥ ಅಣುರೇಣು ತೃಣಕಾಷ್ಟದಿ ಪರಿಪೂ । ರ್ಣನು ಪರಬೊಮ್ಮ ಪರಾತ್ಪರವಸ್ತುವು । ಮನದಿ ಮೊರೆವನಂತೆನ್ನಯ ನಾರಾ । ಯಣನ ಪದಂಗಳನೆನಲಿಂತೆಂದನೂ ॥ ಶ್ರೀನರಹರಿ ॥ ೫ ॥ ನಿಲ್ಲೆಲೊ ಎಲೆ ಖೂಳಾ । ನಿನ್ನೊಡೆಯನ । ದೆಲ್ಲಿ ತೋರುವೆ ಪೇಳಾ ॥ ಅಲ್ಲದಿದ್ದರೆ ನಿನ್ನಾ । ಕೈಯ್ಯಾರೇ । ಕೊಲ್ಲದಿರೆನು ಮುನ್ನಾ ॥ ಸೊಲ್ಲಿಸೆನಲು ತವಕಿಸದಿರು ಕೇಳ್ ನಿ । ನ್ನಲ್ಲಿ ಎನ್ನಲ್ಲಿಳೆಯಲ್ಲಿ ಹೊರಗೊಳಗ । ದೆಲ್ಲೆಲ್ಲಿಯು ಹರಿ ಇಲ್ಲದನ್ಯತ್ರವು ನಿಜ । ವೆಲ್ಲವು ಶ್ರುತಿಮತವೂ ॥ ಎಲ್ಲೆಲ್ಲೆಂಬುದಿಲ್ಲೆನ್ನೊಡೆಯನು ಕರೆ । ದಲ್ಲಿಗೆ ಬಹ ಕರುಣಾಂಭೋನಿಧಿ ಬಹು । ಸುಲ್ಲಭ ಸುಜನಜನರ್ಗೆ ದುಷ್ಟರಿಗೆ । ಭಲ್ಲೆಯನಾಗಿಹ ಭಾಗೀರಥೀಪಿತ ॥ ಶ್ರೀನರಹರಿ ॥ ೬ ॥ ಹೋರಾಡದೆ ಈಗ । ಈ ಸ್ತಂಭದೀ । ತೋರದಿದ್ದರೆ ಬೇಗಾ ॥ ತೋರದಿರಲು ಕಡಿದೂ । ನಿನ್ನನು ಕೈ । ಯ್ಯಾರೆ ಚಲ್ಲುವೆ ಬಡಿದೂ॥ ತೋರೆನುತ್ತಲೆ ಖಳ ಖಡ್ಗವ ಕಂಠಕ್ಕೇರಿಸಿ ಝಳಪಿಸಿ ಝಡಿದು ಪಿಡಿವುತಿರೆ । ಬಾರೋ ನರಹರಿ ಭಕ್ತೋದ್ಧಾರಕ । ಬಾರೋ ಬಾರೆಂದೂ ॥ ಚೀರೆ ಪ್ರಹಲ್ಲಾದನು ಕಳವಳಿಸುತ ಬಾ । ಯಾರಿ ಕರೆಯಲಾಕ್ಷಣದಲಿ ಸ್ತಂಭದಿ । ತೋರಿ ಪುಟ್ಟಿತು ಹೂಂಕೃತಿ ಕಟ್ ಕಟ್ ಠೇಂಕಾರ ಬ್ರಹ್ಮಾಂಡ ಹೊಡೆದುದೆಂಬಂದದಿ ॥ ಶ್ರೀನರಹರಿ ॥ ೭ ॥ ಘುಡುಘುಡುಸುತ್ತೀದುರ್ಗದೂ । ಆ ಸ್ತಂಭದೊಳ್ । ನುಡಿದುದು ರವ ಮಿಗಿಲೂ ॥ ಕಟ್ ಖಟ್ ಖಟಲ್ ಛಿಟಲೂ । ಛಿಟ್ ಛಿಟಲೆಂದು । ನಡುವೆ ಶೀಳಿದುದಾಗಲೂ ॥ ಛಟ್ ಛಟಾಲ್ ಛಟಲೆಂ । ದೊಡೆದು ಮೂಡಿದ ನರಸಿಂಹ ಕೋಪಾನಲ । ಕಿಡಿಗಳ ಸೂಸುತ ಹ್ರುಂ ಹ್ರುಂ ಹ್ರುಂ ಎಂ । ದಡಿಗಡಿಗೆ ಘುಂಕರಿಸೀ ॥ ಬಿಡದುಚ್ಛಳಿಸಲ್ ಥಡ್ ಥಡ್ ಥಡ್ ಥಡರೆಂದು । ನಡುಗಿದುದಾ ಮಂದಿರಹರ್ಮ್ಯಂಗಳು । ಸಡಲುತಲಿರೆ ಪ್ರಹಲ್ಲಾದನ ಮುಂದಲೆ । ಬಿಡುತಲಸುರನಿದೇನೆಂದೀಕ್ಷಿಸಿದನೂ ॥ ಶ್ರೀನರಹರಿ ॥ ೮ ॥ ತರಣಿಕೋಟಿಪ್ರಕಾಶದಾ । ಮಹಾದ್ವಾರ ।

ಭರದಿಂದ ತೆರದಂದದಾ ॥ ಮೆರೆವ ತೇಜೋರಾಶೀ । ರಂಜಿಸುತಿರೆ । ಸುಮನಸೋದ್ಭವಸಹಸೀ ॥ ಸ್ಫುರಿಸುವ ಮಣಿಮಕುಟದ ಮಸ್ತಕದ ಬ್ಯಾ । ದೆರದ ಮೃಗೇಂದ್ರವದನದ ಭಯಂಕರ । ದುರುಬೆಯ ತೀವ್ರವದನಪಂಕ್ತಿ ಯ ಕಿಡಿ।ಗೆರವ ಧ್ವನಯನಗಳಾ ॥ ಅರಳಿದ ನಾಸಾಪುಟಧೂಂಕೃತಿಗಳ । ಮೆರೆವ ಮಕರಕುಂಡಲಗಳ ಕರ್ನಗಳೊಳು । ಉರುತರ ರೋಶಾವೇಶದಿ ರಾಜಿಪ । ಪುರುಷವಯವದ ಶ್ರೀಕರ ನರಸಿಂಹನು ॥ ಶ್ರೀನರಹರಿ ॥ ೯ ॥ ಹಿರಣ್ಯಕಶ್ಯಪು ಕಂಡೂ । ಘರ್ಜಿಪ ಪೊಸ । ಪರಿಯ ಮೃಗವಿದೆಂದೂ ॥ ಧುರಕಳುಕದೆ ವದಗೀ । ಕಾದುತ್ತ । ಲಿರಲು ಕಾಣುತ ಖಡುಗೀ ॥ ಅರೆ ಸಂಜೆಯೊಳಾರ್ಭಟಿಸಿ ರಕ್ಕಸನನು । ಭರದಿಂ ಪಿಡಿದಪ್ಪಳಿಸಿ ಹೊಸ್ತಿಲಲಿ ಕು । ಳ್ಳಿರುತತಿ ರೋಶಾವೇಷದಿ ತೊಡೆಗಳೊ । ಳಿರಿಸಿ ಮಲಗಿಸುತಲಿ ॥ ಎರಡು ಕರಗಳಿಂದೊತ್ತಿ ಪಿಡಿದು ಮ । ತ್ತೆರಡು ಕರಗಳಿಂದುದರನುಗುರ್ಗ ಳಿಂ । ದಿರಿದು ಬಗದು ಸರ್ರನೆ ಸೀಳ್ದು ಭಯಂ । ಕರದ ವಿಧದ ನರಸಿಂಹನೆನಿ ಸಿರುವ ॥ ಶ್ರೀನರಹರಿ ॥ ೧೦ ॥ ಎಳೆ ಕರುಳ್ಗಳ ತೆಗೆದೂ । ಕೊರಳಿಗೆ ವನ । ಮಾಲೆ ಇಕ್ಕಿದನುಗಿದೂ ॥ ತಿಳಿರಕುತವ ಸುರಿದಾ । ದ್ವಯ ಕುಡುತೆಗ । ಳಲಿ ಮೊಗದ ಮೊಗದಾ ॥ ಖಳನ ಮರ್ದಿಸಿ ಕರಾಳನೆನಿಸಲು । ಜ್ವಲಿಸುವ ಕೋಪಗಳುರುಬೆಗೆ ಭೂ । ವಳಯವು ಬೆಂಡಾಗುತ ಬೇಯಲು ಬಲು । ಜಲ ನಿಧಿಗಳು ಕುದಿಯೇ ॥ ಉಳಿಯಲಜಾಂಡಘಟವು ಕಾದುದು ಶ್ರೀ । ನಿಳ ಯನ ರೌದ್ರವು ಪೇರ್ಚಿತಿದುವೆ ಜಗ । ವಳಿವಿನ ದಿನವ್ರೋ ಎನುತಜ ಮುಖ್ಯರು । ಘಳಿಲನೆ ಪೊರಮಡುತಲಿ ಸ್ತುತಿಗೈದರು ॥ ಶ್ರೀನರಹರಿ ॥ ॥ ೧೧ ॥ ಜಯಜಯ ಜಗದೀಶಾ । ರಕ್ಷಿಸು । ಜಯ ನರಮೃಗ ವೇಷಾ ॥ ಜಯತು ಜಗದ್ಭರಿತಾ । ಸುಲಲಿತ । ಜಯಜಯತು ಸುಚ್ಚರಿತಾ ॥ ಜಯ ಮಂಗಲದಾಯಕ ಜಯ ಜಯಜಯ । ಭಯಭಂಜನ ಭಕ್ತೋದ್ಧಾರಕ ಜಯ । ಜಯ ಕರುಣಾಕರ ಕಮನೀಯಾಂಗನೆ । ಜಯ ಜನ್ಮಾದಿವಿದೂರನೆ ಜಯಜಯ ॥ ಲಯಗೈದೆಯೊ ದೇವನೆ ರಾಕ್ಷಸನನು । ಜಯವಾಯಿತು ಜನಗಳ ಭಯಹಿಂಗಿತು । ದಯಗೈದೆಮ್ಮನು ರಕ್ಷಿಸು ಭಕ್ತ । ಪ್ರಿಯ ಭವಹರ ಜಯಜಯ ಎನುತೀರ್ದರು ॥ ಶ್ರೀನರಹರಿ ॥ ೧೨ ॥ ಸುರರಿಂತು ಸ್ತುತಿಸುತ್ತಾ । ಮಲ್ಲಿಗೆ । ಎರಳ ಮಳೆಯಗರೆವುತಾ ॥ ಶರನಿಧಿ ಸುತೆಯ ತಂದೂ । ನೃಸಿಂಹನ । ಇದಿರು ನಿಲ್ಲಿಸುತಂದೂ ॥ ಶರಣ ಪ್ರಹ್ಲಾದನು ಸಹಿತೊಂದಿಸಿ ಶ್ರೀ । ವರನೆ ಕರುಣದಿಂದೆಮ್ಮನು ಸಲಹುದು । ದುರುಳನ ಸಂಹರಿಸಿದೆ ಲೇಸಾಯ್ತುದು ।

ಮೆರೆವ ಕೋಪಜ್ವಾಲೇ ॥ ಉರಿವೃತ್ತಿದೆ ಲೋಕಂಗಳ । ಭರವ ನಿಲಿಸಿ ಶಾಂ ತತ್ವದಿಂದೆಮ್ಮನೆ । ಲ್ಲರ ರಕ್ಷಿಸು ಎನುತೆರಗಲು ಲಕ್ಷ್ಮಿಯು । ಕರದು ತೊಡೆ ಯಲಿ ಕುಳ್ಳಿರಿಸುತ್ತಿಂತೆಂದನು ॥ ಶ್ರೀನರಹರಿ ॥ ೧೩ ॥ ಮಿಗುವ ಕೋಪವ ನಿಲಿಸೀ । ಬ್ರಹ್ಮಾ । ದಿಗಳೆಲ್ಲರನು ಮನ್ನಿಸೀ ॥ ಮಗುವೆ ನೀ ಬಾರೆನುತಾ । ಪ್ರಹಲ್ಲಾದನ । ಬಿಗಿದಪ್ಪಿದ ನಗುತಾ ॥ ಜಗದೊಳಗೆನ್ನಯ ಭಕ್ತರ ಬಾಧಿಪ । ರಿಗೆ ಭಯವನು ತೋರುತ ಭಂಜಿಸುವೆನು । ಅಗಲರಿಯದೆನ್ನಯ ಮರೆ ಹೊಕ್ಕರ । ಸುಗುಣರ ಲೋಕದಲೀ ॥ ನಿಗಮಸಿದ್ಧ ಸಹಜವು ಬೆದರದಿರೆಂ । ದೊಗುಮಿಗೆ ಹರುಷದಿಂದೆಲ್ಲರ ರಕ್ಷಿಸಿ । ಮಿಗೆ ಭಕ್ತಗೆ ವರಗಳ ಪಾಲಿಸು ತಲಿ । ಜಗದೊಡೆಯನಂತರ್ಧಾನವಗೊಂಡನು । ಶ್ರೀನರಹರಿ ॥ ೧೪ ॥ ಮಂಗಳ ಮಾಧವಗೇ । ಜಯತು ಜಯ । ಮಂಗಳ ಭೂಧವಗೇ ॥ ಮಂ ಗಳ ದಿವ್ಯಸಿಂಹಾ । ಜಯತು ಶುಭ । ಮಂಗಳ ಜಯರಂಹಾ ॥ ಮಂಗಳ ಶ್ರೀಕರುಣಾಕರ ಶುಭಕರ ಮಂಗಳ ಸುಖಸಂಪದ ವಾಂಛಿತಪ್ರದ । ಮಂಗಳ ಹಿರಣ್ಯಕಶ್ಯಪುಮರ್ದನ । ಸುತ್ತುಂಗ ಜನಾರ್ದನಗೇ ॥ ಮಂಗಳ ಕವಿಜನ ಪೋಷ ಸರ್ವೇಶಗೆ । ಮಂಗಳ ಮೂಲಿಕವಾಸಖಿಳೇಶಗೆ । ಮಂಗಳ ಶ್ರೀನರ ಸಿಂಹ ಸಲಹೊ ಜಯ । ಮಂಗಳ ಶ್ರೀಗುರುವೇಂಕಟನಾಯಕ ॥ ಶ್ರೀನರ ಹರಿ ಶರಣಾಗತರಕ್ಷಕ ದೀನಜನೋದ್ಧಾರೀ ॥ ೧೫ ॥ ಶ್ರೀ೮ ॥



## ಭಾಗವತದೊಳಗಣ ಭಕ್ತರತ್ನಮಾಲೆ.

॥ ೪೦ ॥ ರಾಗ ರೇಗುಪ್ತಿ, ಝಂಪೆತಾಳ. ಇವನ್ನು ಷಟ್ಪದಿಯಲ್ಲಿ ಹಾಡುವದು.

ಭಕ್ತಿಯಲಿ ಭಜಿಸು ಹರಿಯಾ । ಮನವೇ । ಭಕ್ತಿಯಲಿ ಭಜಿಸು ಹರಿ ಯಾ ॥ ಪಲ್ಲ ॥ ಭಕ್ತಿಯಲಿ ಭಜಿಸಿ ಸದ್ಭಕ್ತಜನರೆಲ್ಲರು ಅ। ನಿತ್ಯ ಸಂಸಾರದಿಂ ದುತ್ತರಿಸಿ ಸಕಲಸಂ । ಪತ್ತುಸಮೃದ್ಧಿ ಪರಮುಕ್ತಿಯಂ ಪಡೆದು ಹರಿಯೊತ್ತಿ ಲಿರುತಿಹರು ಕಂಡ್ಯಾ ॥ ಮನವೇ ಭಕ್ತಿಯಲಿ ಭಜಿಸು ಹರಿಯಾ ॥ ಅನುಪಲ್ಲ ॥ ಆಲದೆಲೆ ಮಂಚದಲಿ ಏಳು ಕೋಟೀ ಮಿತದ । ಬಾಲಕತ್ವದಿ ನಿದ್ರಾಲೋಲ ನಾಗುತ್ತ ಬಹು । ಗಾಢ ಪವಡಿಸಲಾಗ ಮೇಲೆ ನಾಭೀಕಮಲನಾಳದಿಂದಜ ನುದಿಸಲೂ ॥ ಮೇಲುನಿರಿದೆ ನುತಿಸೆ ಸಾಲೋಕದೊಳು ಜೀವ । ಜಾಲಸೃಷ್ಟಿ ಯಗೈವ ಮೂಲಾಧಿಕಾರವಂ । ಪಾಲಿಸಿದ ಪರಮಕೃಪಾಳು ಹರಿಯಂಘ್ರಿಗಳ

ಶೀಲದಿಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೧ ॥ ಉರುತರದ ತಪದಿಂದ ಹರನ ಮೆಚ್ಚಿಸಿ ದೈತ್ಯ । ಸುರಿಹಸ್ತವಂ ಪಡೆದು ಮರಳಿ ಕರವಂ ಶಿರದೊ । ಳಿರಿಸಲ್ಕೈತರೆ ಕಂಡು ಹರಣದಾಸೆಯೊಳೋಡಿ ಹರಿಗೆ ಮೊರೆ ಯಿಡಲು ಕೇಳೀ ॥ ಭರದಿ ಸ್ತ್ರೀರೂಪಾಗಿ ಕರವ ದುರುಳನ ಶಿರದೊ । ಳಿರಿಸುವಂದದಿ ಮನವ ಮರುಳುಗಾಣಿಸಿ ನಲಿದು । ಕರಿಗೊರಳನಂ ಕ್ಕಾದ ಕರುಣಾಂಬುನಿಧಿಯ ಪದಸರಸಿಜವ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೨ ॥ ಧಾರುಣೀಸುರರುಂಡು ಜಾರಿದ ಪ್ರಸಾದಮಂ । ಹಾರೈಸಿ ಮೆಲ್ಲುತಲಪಾರವೈರಾಗ್ಯ ಮನ । ದೋರಿ ಭಜಿಸಲು ಭವವಗಾರುಗೆಡಿಸುತ ವಿಧಿಯ ಸಾರಿ ಮಗ್ಗುಲೊಳು ಸೇರೀ ॥ ವಾರಿಜಾಸನನ ಸುಕುಮಾರ ನೆನಿಸಲು ದಯದಿ । ಸಾರವೀಣೆಯನಿತ್ತು ಚಾರುಕೀರ್ತನೆಗೊಲಿದು । ನಾರ ದಾಂಕನಿಗೊಲಿದ ನಾರಾಯಣನ ಪಾದ ವಾರಿಜವ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೩ ॥ ಮತಿಗೆ ಸಂತುಷ್ಟಿಯಂ ಜೊತೆಯಾಗ ದತಿಮನೋ । ವ್ಯಥೆಯಾಗೆ ನಾರದವ್ರತಿಪನೈತಂದು ಸನುಮತಿಸಿ ಉಪದೇಶ ಸಂಗತಿಯನರುಹುತ ಭೂತಹಿತನುಪ್ಪ ತೆರದಿ ಪರಿಯಾ ॥ ಮತಸಂಗ್ರಹದ ಭಾಗವತವ ರಚಿಸೆಂದು ಮುನಿ । ಪತಿ ಬೀಳುಗೊಡೆ ಧ್ಯಾನಸ್ಥಿತ ವ್ಯಾಸ ರೂಪದಿಂ । ದತಿದಯದಿ ಪೊರೆದ ಆಶ್ರಿತರಕ್ಷ ಹರಿಯ ಪದಶತದಳವ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೪ ॥ ಅವನಿಯಮರರ ಶಾಪನವಘಡಿಸು ತಿರಲೇಳು । ದಿವಸದಲಿ ಸದ್ಗತಿಯನಪ್ಪುಕಬೇಕೆಂದಾಗ । ವಿವಿಧ ಪೌರಾಣ ಗಳ ನಿವಹಮೆನಿಸುವ ಭಾಗವತವನಂ ಶುಕನ ಮುಖದೀ ॥ ಭುವಿಪತಿ ಪರೀಕ್ಷಿತಂ ಕವಲುಮನವಲಿಯೆ ಅಶ । ನಪ ತೊರೆದು ಲಾಲಿಸುತ ಶ್ರವಣ ಮಾತ್ರದಿ ಮುಕ್ತಿ। ಯುವತಿಯನ್ನಿತ್ತ ಮಾಧವನ ಪದಯುಗಳವಂ ಜವದಿಂದ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೫ ॥ ಧಿಂಕಿಟ್ಟು ಶರಧಿಯಂ ಭೋಂಕನೇ ದಾಂಟಿರುಳು । ಲಂಕಿಣಿಯ ಸಂಹರಿಸಿ ಪಂಕಜಾಂಬಕಿ ಸೀತೆ । ಗಂಕಿತದ ಮುದ್ರಿಕೆಯನುಂ ಕೊಟ್ಟು ಚೂಡಾಮಣಿಯಂ ಕೊಟ್ಟು ಕಡು ಮೋಹದೀ ॥ ಶಂಕಿಸದಶೋಕವನನಂ ಕಿತ್ತು ರಾವಣನ । ಲಂಕೆಯಂ ಸುಟ್ಟು ನಿಶ್ಶಂಕೆಯಿಂ ತಿರುಗಿ ಮಣಿ । ಯಂ ಕೊಡಲು ವಿಭವಪಟ್ಟವಂ ಕೊಟ್ಟ ರಘುಜಪದಪಂಕಜವ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ॥ ೬ ॥ ಪೆತ್ತ ಮಾತೆಯ ಸೆರೆಯನುತ್ತರಿಸಲೆನುತಾಗ । ಕಿತ್ತಮೃತಕಲಶವ

ಪೊತ್ತುತ್ತೈತರೆ ಸುರರ । ಮೊತ್ತದಧಿಪತಿಯು ಕಾಣುತ್ತ ಶಣಸಲು ಗಣಿಸ ದೆತ್ತಿ ನಡೆಯಲ್ಕಾಗಲೂ ॥ ಯುಕ್ತಿಯಿಂ ಬಲಿದು ಸುಡಿಯುತ್ತ ಭಾಷೆಗೆ ವಲಿಸಿ । ಉತ್ತಮಾಂಘ್ರಿಯ ವಾಹನತ್ವವಂ ಗರುಡಂಗೆ । ಚಿತ್ತವಿಸಿ ಕರುಣ ದಿಂದಿತ್ತ ಹರಿಯಂಘ್ರಿಗಳ ಚಿತ್ತದಲಿ ಭಜಿಸು ಕಂಡ್ಯಾ ॥ ಮನವೇ । ಭಕ್ತಿ ಯಲಿ ॥ ೭ ॥ ಉತ್ತಾನಪದನೃಪನ ಪುತ್ರ ರಾಜಾಸನವ! ಪತ್ತಲಳವುತ್ತ ಕಾಣು ತ್ತಿರಲು ಮಲತಾಯಿ । ಧೂರ್ತವಚನನ ಪೇಳೆ ಚಿತ್ತದಲಿ ವೈರಾಗ್ಯವೆತ್ತಡವಿ ಗೈತರಲ್ಕೇ ॥ ಚಿತ್ರನಾರದ ಮುನಿಪವಿತ್ತ ಉಪದೇಶವಂ । ಪೊತ್ತರಣ್ಯದಲಿ ತಪವೆತ್ತಿರಲು ದಯದಿ ಉ । ನ್ನತ್ತ ಧ್ರುವಪದ ಪೃಥದೊಳಿತ್ತ ಹರಿಯಂಘ್ರಿ ಗಳ ಚಿತ್ತದಲಿ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೮ ॥ ಮಗುತನ ದೊಳಾರಭ್ಯ ನಿಗಮಗೋಚರನ ಪದ । ಯುಗಳವಂ ನೆನವುತಿರೆ ವಿಗಡ ರಕ್ಕಸ ನಾನಾ । ಬಗೆಗಳಿಂ ಬಾಧಿಸಲು ಮಿಗೆ ವಜ್ರಸ್ತಂಭದಿಂದೊಗೆದು ನರ ಮೃಗನಾಗಲೂ ॥ ವಿಗಡ ದೈತ್ಯನ ಬಸುರ ಬಗೆಯುತಂ ಕರುಳ್ಗಳಂ । ತೆಗೆದು ವನಮಾಲೆ ಕೊರಳಿಗೆ ಧರಿಸಿ ಪ್ರಹ್ಲಾದ । ಗಗಣಿತದ ವರವಿತ್ತ ಸುಗುಣಾಂಬುನಿಧಿಯ ಪದಯುಗಳವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೯ ॥ ವಸುಧಾತ್ಮಜೆಯ ಬಿಡುವಡೆಸೆವ ನೀತಿಯ ಸುಡಿಯ । ದಶಶಿರಗೆ ಪೇಳೆ ಪೊರಡಿಸಲವನ ಸಂಸರ್ಗ । ಹಸನಲ್ಲವೆಂದು ತನ್ನೆಸವ ಲಂಕಾಪುರವನಸುರೇಂದ್ರ ಬಿಳುಗೊಂಡೂ ॥ ಅಸುರಾರಿ ರಾಮಪದಬಿಸಜ ದಾರಡಿಯಾಗ । ಲೆಸವ ಭಕ್ತಿಗೆ ಮೆಚ್ಚಿ ಶಶಿರವಿಗಳುಳ್ಳನಕ । ಶಾಶ್ವತ ಮೆನಿಸಿ ಲಂಕಾದಿ ದೆಶೆಯ ಪದವಿತ್ತವನ ಬಿಸಜವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೧೦ ॥ ಜನಪನಿಂದ್ರದ್ಯುಮ್ನ ಮುನಿಯಗಸ್ತ್ಯನ ಶಾಪ । ವನು ತಾಳ್ದು ಗಜನಾಗಿ ವನದಿ ಕ್ರೀಡಿಸ ಚರಣ। ವನು ನೆಗಳ್ಪಿಡಿಯೆ ಬಹು ದಿನ ಕಾದಿ ದಣಿದು ಬಲು ತನುಗುಂದಿ ಮನದೊಳಾಗಾ ॥ ಅನುಪ ಮಿತ ಪರತತ್ವವನು ನೆನೆಯೆ ವಹಿಲದಿಂ । ವಿನತಾತ್ಮಜನನೇರಿ ಕ್ಷಣದೊಳೈ ತಂದು ನ । ಕ್ರನ ಬಾಯ ಸೀಳಿ ಕರಿಯನು ಕ್ಯಾದ ಹರಿಯ ಪದವನಜವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೧೧ ॥ ಧಾರುಣೀಸುರ ವೇದ ಪಾರಕನಜಾಮಿಳನು । ಮಾರವಿರಪದಲಿ ಪೊಲೆಗಾರತಿಯ ಕೂಡಿ ನಾ । ಲ್ಕಾರು ಮಕ್ಕಳ ಪಡೆದಪಾರ ಪಾಪವ ಘಳಿಸಿ ಸಾರಿಬರೆ ಕಡೆಗಾಲವೂ ॥ ಘೋರಾಕೃತಿಯ ಯಮನ ಚಾರರಡಸಿರೆ ಭಯದಿ । ನಾರಾಯಣಾ ಎನಲು

ಹಾರಿಪೋದುದು ದುರಿತ । ಚಾರು ಮುಕುತಿಯನಿತ್ತ ಮಾರಜನಕನ ಪಾದ ವಾರಿಜವ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೧೨ ॥ ಶ್ರುತಿಮತ ದೆಕಾದಶೀ ವ್ರತವ ಪೃಥಿವಿಯೊಳು ನಿ । ಷ್ಟಿತದಿ ನಡೆಸಲು ದುರಿತ ಪಥ ವಳಿಯೆ ಜವನ ಸನು । ಮತದಿ ಏಧಿಕೃತದ ಶತರತಿ ತೆರದ ಮೋಹಿನೀ ಸತಿ ಬಂದು ರುಕುಮಾಂಗದಾ ॥ ಪೃಥಿವಿಪನ ವಚನ ಸಂಗತಿಗೊಳಗು ಗೊಳಿಸಿ ಸು।ವ್ರತದ ಶಾಶ್ವತಕೆ ನಿಜಸುತನ ಶಿರವೀಯಲ್ ಸನು । ಮತಿಸುತ್ತ ಸುತನಿಂಗೆ ಹಿತಮುಕ್ತಿಯಿತ್ತ ರತೀಪತಿಪಿತನ ಭಜಿಸು ಕಂಡ್ಯಾ॥ ಮನವೇ । ಭಕ್ತಿಯಲಿ ॥ ೧೩ ॥ ಕುಂಭಿನಿಯೊಳ್ ದ್ವಾದಶಿಯ ಸಂಭ್ರಮದಿ ಸಾಧಿಸುತ। ಉಂಬ ಸಮಯದಿ ಶಿಷ್ಯರಂ ಬೆರಸಿ ದುರ್ವಾಸ । ನೆಂಬ ಋಷಿಯೈದಿ ತನ್ನಂ ಬಿಟ್ಟು ಭುಂಜಿಸಿದನೆಂಬ ನೆವನದಿ ಶಾಪಮಂ ॥ ಮುಂಬರಿದು ಚಕ್ರವಂ ಬೆನ್ನಟ್ಟುತಿರ ಕಂಡು । ಕಂಬುಧರನೀರ್ವರನೊಡಂಬಡಿಸಿ ಶಾಪ ತನ । ಗಿಂಬು ಗೊಡಲೆಂದುಳುಹಿದಂಬರೀಷವರದನ ಪದಾಂಬುಜವ ಭಜಿಸು ಕಂಡ್ಯಾ॥ಮನ ವೇ । ಭಕ್ತಿಯಲಿ ॥ ೧೪ ॥ ಹಲವು ಯಜ್ಞವಗೈದು ಬಳಿಕ ಸುರಪನ ಪದವ । ಯೊಳಗೊಂಬಡತಿಧರ್ಮ ಬಲುಹಿನಿಂದೆಸಗುತಿರೆ । ತಿಳಿದು ವಾಮನನಾಗಿ ಖಳಖಳಿಪ ಕಾಂತಿಯಿಂ ತೊಳಗುತ್ತೈತರೆ ಕಾಣುತಾ ॥ ಬಲುಭಕ್ತಿಯಿಂದೆರಗ ಲಿಳೆಯ ಮೂರಡಿ ಬೇಡಿ । ಕೊಳುತ ಪದದ್ವಯದಿ ಭೂತಳವಳದು ಪಾತಾಳ । ಕ್ಕಿಳಿಸಿ ಬಲಿ ಮನೆಯ ಬಾಗಿಲ ಕ್ಕಾದ ಹರಿಯ ಪದಜಲಜ ವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೧೫ ॥ ಮಾನವಾಧಿಪ ಪಾಂಡುಸೂನುಗಳ ಸತಿಯಂ ಮ । ಹಾನುಸಭೆಯಲಿ ನಿಲಿಸಿ ಮಾನವಂ ಕಳೆಯುತಿರೆ । ಮಾನಿನೀಮಣಿ ಮನದಿ ಧ್ಯಾನಿಸಿದಳ್ ಪರಮಾತ್ಮ ನೀನೇ ಗತಿಯನಾಥೆಯಾ ॥ ಮಾನಾಭಿಮಾನವಾಧೀನ ನಿನ್ನದು ಎನಲು । ದಾನ ವಾಂತಕನಕ್ಷಯಾನುವಸ್ತ್ರವನಿತ್ತು । ಮಾನಿನಿಯ ಕ್ಕಾದೀರ್ದ ಶ್ರೀನಿವಾಸನ ಪದಧ್ಯಾನವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೧೬ ॥ ಮದ ಮುಖದ ಕೌರವನ ಸದನಕ್ಕೈದುತ ಸಂಧಿ । ಯೊದಗಿಸುವಡೈತರುತಲಧಿಕ ಭಕ್ತನ ಮನೆಗೆ । ಮುದದಿಂದಲೈದುತತಿ ಕ್ಷುಧೆಯಡಗಲೊಕ್ಕುಡುತೆ ಪದದ ಪಾಲನು ಕೊಳ್ಳುತಾ ॥ ಪದುಳದಿಂ ಸವಿದು ಮಿಕ್ಕುದ ನೆಲಕೆ ಬಿಸುಡಲತಿ । ಅದುಭುತದಿ ಬಹುಕ್ಷೀರದುದಧಿಯಂದದಿ ಪರಿಯೆ । ವಿದುರನಂ ಕ್ಕಾದ ಶ್ರೀ ಪದುಮನಾಭನ ಪಾದಪದುಮವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿ

ಯಲಿ ॥ ೧೭ ॥ ಕೊಳುಗುಳದೊಳುಭಯ ಬಲದೊಳಗೆಸೆವುತಿಹ ಬಂಧು । ಬಳಗವೀಕ್ಷಿಸಿ ದುರಿತಕಳುಕಿ ಧನುಶರವಿಕ್ಕೆಯೊ । ಳಿಳುಹೆ ನಿಜವಂ ತೋರಿ ಕಳೆದು ಮನಭ್ರಮೆಯ ತಾ ತಿಳಿಸಿ ಗೀತೆಯನು ಬಳಿಕಾ ॥ ನಲಿದು ಸಾರಥಿ ತನವನಳವಟ್ಟು ಕೌರವರ । ಕೊಲಿಸಿ ಭೂಮಿಯ ಭಾರವಿಳಿಸಿ ಸಖತನ ಬಲಿದು । ಫಲುಗುಣನ ಕ್ಕಾಯ್ದರ್ದ ನಳಿನಾಂಬಕನ ಪಾದನಳಿನವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯುಲಿ ॥ ೧೮ ॥ ಗಂಗೆಯಾತ್ಮಜನು ಸಮರಾಂಗಣ ದೊಳಾಗ ಬಾ । ಣಂಗಳಿಂ ಘಣೆಗೆಸೆಯೆ ಮುಂಗೆಳಿಸಿ ಕೋಪದಿಂ । ಭಂಗಿಸುವೆನೆಂದು ಚಕ್ರಂ ಗಾಢದಿಂ ಕರದಿ ತಾಂ ಸೆಳೆದಿರೆಯುಮು ಬಳಿಕಾ ॥ ಮಂಗಳಾತ್ಮಕ ಭಕ್ತಸಂಗ ಶಾಂತತ್ವದ ಗು । ಣಂಗಳುಕ್ಕುಟಿಳ ತೋರ್ಕಂಗ ಳೊಡೆಯ ನೀನೆಂದು । ಮುಂಗುಡಿಸಿ ಸ್ತುತಿಸೆ ಭೀಷ್ಮಂಗಭಯವಿತ್ತನ ಪದಂಗಳಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯುಲಿ ॥ ೧೯ ॥ ನಂದ ನಂದನನೆನಿಸಿ ನಂದಗೋಕುಲದಿ ಖಳ । ವೃಂದಮಂ ಸವರೆ ಕೇಳ್ದಂದು ಕಂಸಂ ಕರಸ । ಲೆಂದಟ್ಟಲಾಗ ಬರಲಂದು ಮಥುರಾಸ್ಥನೋಳ್ಮಿಂದು ಬಹೆ ನೆಂದು ಬಳಿಕಾ ॥ ವಂದಿಸುತ ಜಲಕಿಳಿಯಲಿಂದಿರಾವರ ಪೂರ್ಣ । ಮಂದಿರದ ನಿಜರೂಪದಂದವಂ ತೋರಿ ದಯ । ದಿಂದ ಅಕ್ರೂರಾಭಿವಂದನೆಗೆ ಒಲಿದ ಗೋವಿಂದನಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯುಲಿ ॥ ೨೦ ॥ ಸುರ ವರರು ಕೂಡಿ ಹರಿಹರಬೊಮ್ಮರೊಳಗಾರು । ಪರತತ್ವನೆಂಬುದಂ ಪರಿಕಿ ಸಲು ಬೇಕೆನುತ । ಪರಮಋಷಿ ಭೃಗುವು ವಿಧಿಶಂಕರರ ಪುರಕೈತರಲ್ ಜರೆಯೆ ಕೋಪದಿ ಶಾಪಿಸೀ ॥ ಹರಿಯ ತಿಳುಹುತ ಹರಿಯ ಪುರಕೈದಿ ವಕ್ಷಮಂ । ಭರದೊಳೊದೆಯಲು ಮುನಿಯ ಚರಣವಂ ಮುದ್ದಾಡಿ । ಪರಮ ಶಾಂತಿಯ ತೋರ್ದ ಸರ್ವೋತ್ತಮನ ಪಾದಸರಸಿಜವ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯುಲಿ ॥ ೨೧ ॥ ಯಾದವಂಗೆಮಿ ಶಾಪ ಬಾಧಿಸುವದಾಗೆ ಮಧು । ಸೂದನಂ ಉದ್ಧವಗೆ ಬೋಧೆಯಂಗೊಟ್ಟು ಬಿಸು । ಆದಿ ತತ್ವಾರ್ಥ ಸಂಪಾದವಂ ಅರುಹಿ ಭವಬಾಧೆಯಂ ಬಿಡಿಸಿ ಬಳಿಕಾ ॥ ವೇದದಿಂ ತಾನೊರೆದು ಸಾಧುಗಕ್ಕೆ ಸಂಸ್ಕೃತಿಯ । ಹಾದಿಯಿಲ್ಲೆಂಬುದನು ನಾದಿಶಿದ್ಧವ ಗೈದ । ಶ್ರೀಧರಾಚ್ಯುತ ಭಕ್ತರಾಧೀನ ಹರಿಯ ಶ್ರೀಪಾದವಂ ಭಜಿಸು ಕಂಡ್ಯಾ॥ ಮನವೇ । ಭಕ್ತಿಯುಲಿ ॥ ೨೨ ॥ ಬಿಡತನಗಳಡಸಲತಿ ದೃಢದಿಂ ಸುಧಾಮನು ನಿಜ । ಮಡದಿಯನುಮತದಿ ಹರಿಯೆಡೆಗೈಯ್ಯುತಿರೆ ದಯದಿ । ಪಿಡಿಯವಲ

ನುಂಡು ಶಿಂಗಡಣದೈಶ್ವರ್ಯಮಂ ಕಡುವೇಗದಿಂದಿತ್ತನಾ ॥ ಸಡಗರದ ಗುರು ಕೇಳ್ದ ನುಡಿಯ ದಕ್ಷಿಣೆಗೆ ನೆಗ। ಳ್ಪಿಡಿದು ಮಡಿದಿಹ ಸುತನ ತಡೆಯ ದಾಕ್ಷಣದಿ ತಂ। ದೊಡನಿತ್ತ ಸಕಲ ಜಗದೊಡೆಯನಂಘ್ರಿಗಳೇಕ ದೃಢ ವಿಡಿದು ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೨೩ ॥ ಇನಿತು ಯುಗ ಯುಗದಿ ಬಹುಜನ ಭಕ್ತಜನರೆಲ್ಲ । ರನುಪಮನ ಭಜಿಸುತ್ತ ಚಿಪ್ಪನಭೀಷ್ಟ ಮುಕ್ತಿಯಂ । ನನುವಿಂ ಪಡೆದರನಿತ ನೀನೆಂದು ವರ್ಣಿಸುವಡೆನಗಳವೆ ಶ್ರುತಿ ಸಿದ್ಧದೀ ॥ ವನಜಾಸನಾದಿ ಮುನುಮುನಿಸಿದ್ಧಸಾಧ್ಯರುಗ । ಳನಿಮಿಷಾಧಿಪ ಮುಖ್ಯರನುಕರಿಸಿ ಭಕ್ತಿಯಿಂ । ವನಜಾಂಬಕನ ಭಜಿಸಿ ಮನದಿಷ್ಟ ಪಡೆದು ಸುಖವನು ಭುಜಿಸುತಿಹರು ಕಂಡ್ಯಾ ॥ ಮನವೇ । ಭಕ್ತಿಯಲಿ ॥ ೨೪ ॥ ಅವನೀ ಭಾಗವತರತ್ನಮಾಲಿಯು ಪಠಿಸಿ । ಭಾವಶುದ್ಧದಿ ಹೇಳಿಕೇಳಿದತಿ ಸಜ್ಜನರ । ಘಾವಳಿಯ ಪರಿಹರಿಸಿ ಸಕಲ ಸಂಪದವಿತ್ತು ಕ್ಯಾವ ಕರುಣಾಬ್ಧಿ ಬಿಡದೇ ॥ ಓವಿ ಮನವಿಡಿದೇಕ ನಿಶ್ಚಲದ ಭಕ್ತಿಯಿಂ । ದಾವಾಗಲಂ ನಾಮಸ್ಮರಣೆಗೈಯ್ಯುತ ಮನದಿ । ಶ್ರೀವರಾಹರಮಣ ಗುರುವೆಂಕಟೇಶನ ಪಾದರಾಜೀವವಂ ಭಜಿಸು ಕಂಡ್ಯಾ ॥ ಮನವೇ । ಭಕ್ತಿಯಲಿ ಭಜಿಸು ಹರಿಯಾ ॥ ೨೫ ॥ ಶ್ರೀ ॥



## ದೂರ್ವಾಸಭೋಜನ

॥ ೪೧ ॥ ರಾಗ, ರೇಗುಪ್ತಿ [ಧಾಟಿ:- ಆರು ಹಿತವರು ನಿನಗೆ ಮೂರು ಮಂದಿ] ಝಂಪೆತಾಳ

ಶ್ರೀಕೃಷ್ಣನೊಲಿದ ಭಕತರಿಗೆ ಭಯವಿಲ್ಲಾ ಅ। ಪ್ರಾಕೃತಾನಂದಸ್ವರೂಪನಾಗಿರುವಾ ॥ ಶ್ರೀಕೃಷ್ಣನೊಲಿದ ॥ ಪಲ್ಲ ॥ ಕಪಟ ಜೂಜಿಂದ ಸೋಲಿಸುತ ಸರ್ವಸ್ವಮಂ । ನಪಹರಿಸಿ ಕೌರವಂ ಕುಂತೀಕುಮಾರರಂ । ವಿಪಿನ ಕಟ್ಟಲ್ಕೆಂಟು ವರುಷವಂ ಕಳೆದು ಯಮುನಾನದಿಯ ತಟದೊಳಿರಲು ॥ ದ್ವಿಪನಗರಕೆಯ್ದಂದುದಿನ ದೂರ್ವಾಸನೈತರ । ಲ್ಕಪರಿಮಿತ ಸಂಭ್ರಮೋತ್ಸಾಹದಿಂದಿದಿರ್ಗೊಂಡು । ತಪಸಿಯಂನೆಂಟುಸಾವಿರ ಶಿಷ್ಯಸಮುದಾಯಕೊಂದಿಸುತ ಕರತಂದನೂ ॥ ಶ್ರೀಕೃಷ್ಣ ॥ ೧ ॥ ಸುರುಚಿರಾಸನದಿ ಕುಳ್ಳಿರಿಸಿ ಮಧುಪರ್ಕಮಂ । ವಿರಚಿಸುತ ಷಡ್ರಸಾದಿಗಳ ಭೋಜನವಿ ಸ । ತ್ಕರಿಸಿ ಸಂತುಷ್ಟಿಯಂ ಬಡಿಸೆ ಮುನಿನಾಥ ಮೆಚ್ಚಿದೆ ವರವ ಬೇಡುಯೆನಲೂ ॥ ತೆರಳುವದು

ಪಾಂಡವರ ಬಳಿಗೆ ನೀವ್ ಭೋಜನಾಂ । ತರ ಸಮಯಕ್ಕೆಂದು ಬನ್ನೈಸಲೊಪ್ಪುತಲಾಗ । ಮರುದಿವಸ ಶಿಷ್ಯರಂ ವೆರಸಿ ನಡೆತಂದ ಕುಂತಿಜರಿರುವರಣ್ಯದೆಡೆಗೇ ॥ ಶ್ರೀಕೃಷ್ಣ ॥ ೨ ॥ ಸದಮಲದ ಭಕ್ತಿಯಿಂ ಸೋದರರ್ವೆರಸಿ ಮುನಿ । ಪದಕೆರಗಿ ದರ್ಭಾಸನದಿ ಕುಳ್ಳಿರಿಸುತರ್ಘ್ಯ । ಮಧುಪರ್ಕದಿಂದ ಸತ್ಕರಿಸಿ ಮಜ್ಜನಕಖಿಳರಂ ಬೀಳುಗೊಟ್ಟು ಬಳಿಕಾ॥ ಸುದತಿಯಂ ಕರಸುತ್ತೈತಹ ಭಾವವಂ ತಿಳಿದು । ಬೆದರಿದಂ ಮನದೊಳಗೆ ಬಂದ ದೂರ್ವಾಸಾದ್ಯ । ರುದರದ ಕ್ಷುಧಾಗ್ನಿಯಂ ತಂಪಿಸದಿರಲ್ ಕೋಪಿಸುವನೆಂದು ಚಿಂತಿಸಿದನೂ ॥ ॥ ಶ್ರೀಕೃಷ್ಣ ॥ ೩ ॥ ರುದ್ರನೀತಂ ಸುರಪನತುಳ ಸಂಪದವಂ ಸ । ಮುದ್ರದೊಳಗಪ್ಪಿದಂ ಭೂಪಂಬರೀಷನಂ । ಮುದ್ರಿಸಲ್ ಚಕ್ರದಿಂದುಳಿದನಲ್ಲದೆ ಇವನ ರೋಷದಿಂದುಳಿದರುಂಟೇ ॥ ಅಬ್ರಧರನೇ ಬಲ್ಲನೆನುತಾಗ ಕಳವಳಿಸ । ಲುಮ್ಯುಕ್ತ ಸುರಭಿಯಂ ತಹೆನೆಂದು ಭೀಮನೆನ । ಲದ್ರಜಿತ ಮಲ್ಲ ಶ್ರೀಕೃಷ್ಣನಲ್ಲದೆ ಕ್ಯಾವರಿಲ್ಲೆಂದನಾ ಧೌಮ್ಯನೂ ॥ ಶ್ರೀಕೃಷ್ಣ ॥ ೪ ॥ ಎನಲರಸಿ ಸುದಿದಳೆಮ್ಮವಸರಕ್ಕೊದಗುತಿಹ । ಮೊಹಗಾರ ಕೃಷ್ಣನಂ ಭಾವಿಸುವೆನೀಗಳೆಂ । ದೆನುತರ್ಕಮಂಡಲವ ನಿರೀಕ್ಷಿಸುತ ನಿಮಿಲಿತೇಕ್ಷಣೆಯಾಗಿ ಕರಪುಟವನೂ ॥ ಅನುಸರಿಸಿ ಮಸ್ತಕದೊಳಿಟ್ಟು ಚಿನ್ಮಯಮೂರ್ತಿ । ಹೃದಯದೊಳು ಧಾರಣಂ ಗೈದೇಕದೃಢದಿ ಧಾ । ರುಣಿಯಮೇಲ್ವೂರಿ ಪದದುಂಗುಟದಮಲಚಿತ್ತದಿ ನೆನವೀಕ್ಷಿಸುತ್ತ ಹರಿಯಾ ॥ ಶ್ರೀಕೃಷ್ಣ ॥ ೫ ॥ ಕಾಮಶತ್ಕೋಟಿ ಲಾವಣ್ಯನಂ ಪುಣ್ಯನಂ। ತಾಮರಸಸಂಭವನ ತಾತನಂ ಖ್ಯಾತನಂ। ರಾಮಣೀಯಕ ಕೋಮಲಾಂಗನಂ ರಂಗನಂ ಮಂಗಲ ತರಂಗವೆನಿಪಾ ॥ ಶ್ರೀಮನೋಹರ ಸತ್ಕಲಾಪನಂ ಭೂಪನಂ । ಕಾಮಿತಪ್ರದ ಮೇಘಶ್ಯಾಮನಂ ರಾಮನಂ । ಪ್ರೇಮಸದ್ಭಕ್ತ ಸಂತೃಪ್ಣನಂ ಕೃಷ್ಣನಂ ನೆನೆದಳಾ ಪಾಂಚಾಲಿಯೂ ॥ ಶ್ರೀಕೃಷ್ಣ ॥ ೬ ॥ ಘೋರ ತಾಪತ್ರಯವಿದೂರ ದನುಜಾಠವಿಕು । ಠಾರ ಸಕಲಾಗಮವಿಚಾರ ರಂಜಿತ ಜನೋ । ದ್ಧಾರ ಧರಣೀಧರ ನಪಾರಲೀಲಾ ಗೋಪಿಜಾರ ಪಾವನಚರಿತನೇ ॥ ಮಾರಪಿತ ಮೋಹನಾಕಾರ ಭಯಕೃದ್ಭಯಸಂ । ಹಾರ ಮಹಶರಧಿಗಂಭೀರ ತ್ರೈಭುವನದಾ । ಧಾರ ವರಕೀರ್ತಿವಿಸ್ತಾರ ಕರುಣಾಬ್ಧಿ ಶ್ರುತಿಸಾರ ವೈದೋರೆಂವಳೂ ॥ ಶ್ರೀಕೃಷ್ಣ ॥ ೭ ॥ ಶ್ರುತಿತತಿಗಳಿಗಗಮ್ಯ ಸನ್ನುತ ತಪೋನಿಷ್ಠತರ । ಮತಿಗಗೋಚರ ನಪ್ರಾಕೃತರೂಪ ಭಕ್ತಸಂ । ತತಿರಕ್ಷ ಸತತ ಸದ್ಗುಣಭರಿತ ದೇವ ದೇವಕೀ

ಸುತ ಸುರಾರ್ಚಿತ ಚರಣನೇ ॥ ಗತನಯನನಾತ್ಮಜನ ಕೃತಕದಿಂದೈತಂದ । ಯತಿಯಭ್ಯಾಗತನಂ ತೃಪ್ತಿ ಪಡಿಸದಿರಲ್ಕಾಪ । ಹತಿಯೆಸಗದಿರಸು ನೀ ನತಿದಯದಿ ಶ್ರೀಲಕ್ಷ್ಮೀಪತಿಯ ಮೈದೋರೆಂದಳೂ ॥ ಶ್ರೀಕೃಷ್ಣ ॥ ೮ ॥ ತರಳ ಧ್ರುವ ಪ್ರಹ್ಲಾದ ಬಲಿ ವಿಭೀಷಣರನು । ಧ್ಧರಿಸಿದಂದದಲಂಬರೀಷನಂ ಕ್ಕಾದಂತೆ । ಮರಿಯದೀಕ್ಷಣದಿ ಮೈದೋರನಾಥರ ನಾಥನೆಂದು ದ್ರೌಪದಿ ಧ್ಯಾನಿಸೇ ॥ ಅಂತನಾಗಲ್ ಜಗದ್ವಂತ ಶ್ರೀಕೃಷ್ಣ ತವ । ಕರುಣವಿನ್ನೆಂತೊ ಭಕ್ತರ ಮೇಲೆ ತೀವ್ರದಿಂ । ಗರುಡವಾಹನನಾಗಿ ಬಂದನಾಗಲ್ ಸಕಲ ಸುರ ವರರು ಪೇಯಿಸ್ನೆಲೂ ॥ ಶ್ರೀಕೃಷ್ಣ ॥ ೯ ॥ ಅತ್ತಲರಸುವ ನಿಗಮಪಾಟಗಳ ಕೋಟಗಳ। ಚಿತ್ತಕೊವಗುಕ್ತಿವ ಪರಮಾತ್ಮ ನಿತ್ಯಾತ್ಮ ಪರ। ವಸ್ತು ತಾನೆಂಬೀ ಮಹಾತತ್ವಮಂ ಜಗಕೆ ತಾನಾಗ ಬೆರಸಿ ಮೆರಸೀ ॥ ಇತ್ತಲೀ ಪಾಂಚಾಲಿ ನೆನ ಪಾಗ ಘನಬೇಗ। ಚಿತ್ತವಿಸುವೀ ಮನುಜನಾಟಕದ ಪಾಟಕದ। ಭಕ್ತಸುಲ್ಲಭ ನೆನಿಪ ಮೂರ್ತಿಯಂ ಅರ್ತಿಯಿಂ ಕಂಡರಾ ಪಾಂಡುಸುತರೂ ॥ ಶ್ರೀಕೃಷ್ಣ ॥ ॥ ೧೦ ॥ ಪದಕೆರಗಲಿನಿಬರಂ ತೆಗದಪ್ಪಿ ಸಂತೈಸು । ತ್ತಧಿಕತರ ಪ್ರೇಮದಿಂ ದ್ರೌಪದಿಯ ಬಳಿಗೈದಿ। ಮುದದಿ ನುಡಿಸಿದನಿದಾ ತಂಗಿಯೇ ಯೆನ್ನ ಬರಿಸಿದ ಕಾರಣವನುಸುರೆನೇ ॥ ಹೃದಯದೋಳ್ ಧ್ಯಾನಿಸುವ ಚಿನ್ಮಯಾತ್ಮಕನ ಬಾ। ಹ್ಯದಿ ಕಂಡು ಕಣ್ದೆರೆದು ಕಮಲಾಕ್ಷಿ ಭಕ್ತಿಭಾ। ವದಿ ಚರಣಕೆರಗಿ ಜಯ ಜಯ ನಮೋ ಜಯ ಭಕ್ತವತ್ಸಲ ನಮೋ ಎಂದಳೂ ॥ ಶ್ರೀಕೃಷ್ಣ ॥ ೧೧ ॥ ಕೃತಕದಿಂದೈತಪ್ಪ ಸಾಧಿಸಿ ಬಂದ ದೂರ್ವಾಸ । ನತುಲ ಕ್ಷುದ್ಬಾಧೆಯಂ ತಂಬಿಸಲುಪಾಯವಂ । ಮತಿಗೆ ಗೋಚರಿಸಲಿಲ್ಲದರಿಂದ ತವ ಪದಾಬ್ಜಗಳ ಮರೆಹೊಕ್ಕನೆನುತಾ ॥ ನುತಿಸುತಿಹ ಪಾಂಡವರ ರಾಣಿಯಾ ಶಿರವ ನೆಗ । ಹುತ ನುಡಿದನೆಲೆ ತಂಗಿ ನಿನಗೇನಹುದು ಬಂದೆನೀ ತೃ।ಪ್ತಿ ಪಡಿಸುವೆನೆಂದು ಮೇಣುಂಟುಳ್ಳದಂ । ವಂಚಿಸದೆ ತನಗುಣಿಸಬೇಕೆನುತ ಹರಿ ನುಡಿದನೂ ॥ ಶ್ರೀಕೃಷ್ಣ । ೧೨ ॥ ಚರವಚರಭರಿತನಾಗಿಹ ನಿತ್ಯತೃಪ್ತನಂ । ಪರಿತೋಷ ಪಡಿಪೆನೆಂತೆನಲಿಹುದೆ ಸಾಕು ಕ್ಷುಧೆ। ಯುರವಣಿಸುತಿದೆ ನಿನ್ನ ಪಾತ್ರದೊಳ ಗೇನುಳ್ಳದರ ವಂಚಿಸದೆಯುಣಿಸೆಂದನೂ ॥ ತರುಣಿ ತತ್ಪಾತ್ರದೊಳು ಕೈ ಯಿಕ್ಕುತರಸಲುಳಿ । ದಿರುವ ಕಿಂಚಿತ್ಶೇಷ ಶಾಕಪತ್ರವನು ಶ್ರೀ । ವರನ ಕರಕಮಲಹಸ್ತದೊಳಿಡಲ್ ಬ್ರಹ್ಮಾರ್ಪಣಯೆನುತ ಸವಿದುಂಡನೂ। ಶ್ರೀಕೃಷ್ಣ ॥ ೧೩ ॥ ಚರವಚರಭರಿತನಾಗಿಹ ನಿತ್ಯತೃಪ್ತನುಂ । ಪರಿತುಷ್ಟನಾಗಿ ಧರ್ರನೆ

ತೇಗಲತ್ತ ಮುನಿ । ವರ ಕೃತ್ತಿವಾಸ ಮುಖ್ಯರ ಕ್ಷುಧೆಗಳಡಗುತಳ್ಳಿಗಳುಬ್ಬು ತುದರಂಗಳೂ ॥ ಭರಿತವಾಗಲ್ತಿಳಿದು ಮನದಿ ದೂರ್ವಾಸನೈ । ತರುತಖಿಳ ಶಿಷ್ಯಸಮುದಾಯದೊಡನೈತಂದು । ಅರರ ಗೋವಿಂದ ಬಂದನೆ ಎನುತಿರಲ್ ಕಾಣುತ್ತಿವಿರೆದ್ದನಾ ಕೃಷ್ಣನೂ ॥ ಶ್ರೀಕೃಷ್ಣ ॥ ೧೪ ॥ ಮುನಿವರನ ಚರಣ ಕೆರಗಲ್ಕೈತರಲ್ಕಾಣುತ । ಮನದಿ ತೊಲಗುತೊಂದಿಸಲುರುಬೆ ಬಿಡದಾಲಿಂ । ಗನ ಗೈದು ಕುಳ್ಳಿರಿಸುತಿಂತೆಂದ ತರುಮೂಲದೆಡೆಗಳ್ಳಿವು ತಂಪಿಸೀ ॥ ಕೊನೆಗಳ್ಗೆ ಬೇರೆ ನೀರೆರೆಯಲುಂಟೇ ಸಕಲ । ಜನುರೇನುತೃಪ್ತಿಕಾಪ್ತಭರಿತ ಸಂತುಷ್ಟಿಸಲು । ವನಜೋದ್ಭವಾದ್ಯರ ತೃಪ್ತಿಸಮುದೆ ಕೃಷ್ಣ ತವ ಮಹಿಮೆಗೆ ನಮೋ ಎಂದನೂ ॥ ಶ್ರೀಕೃಷ್ಣ ॥ ೧೫ ॥ ಕರುಣದಿಂ ಭೋಜನವ ಕೈಕೊಂಬು ದೆನುತ ಪದ । ಕೆರಗಲರಸಂಗೆಂದನೆಲೆ ಭೂಪ ನಿಮ್ಮನುಂ । ಪರಿಪಾಲಿಸುವ ಕೃಷ್ಣನಿರಲನ್ಯರಿಂದೇನನಹುದು ಕುಹಕೋಪಾಯುವಂ ॥ ಕುರುರಾಯನೆಸಗ ಲೈತಂದೆ ಶ್ರೀವಿಷ್ಣುಪದ । ದರುಶನವಪ್ಪಾತು ಸುಖಿಸಿಹುದಿನ್ನು ನಿಮಗೆನುತ । ಹರಿಗೆ ನಮಿಸುತ್ತಖಿಳ ಶಿಷ್ಯರೊಡಗೂಡಿ ತೆರಳಿದನಾಗ ದೂರ್ವಾಸನೂ ॥ ॥ ಶ್ರೀಕೃಷ್ಣ ॥ ೧೬ ॥ ಮಂಗಳವಪ್ಪಾತು ಮುರಹರ ತನ್ನ ಮೈದುನರಾ । ಲಿಂಗಿಸುತ ದ್ರೌಪದಿಯ ಸಂತೈಸಿ ದಯದಿ ಯದು । ಪುಂಗವಂ ದ್ವಾರಕಿಗೆ ತೆರಳ್ದನಿತ್ತಲು ಪಾಂಡುಸುತರೀರ್ದರತಿ ಮೋದದೀ ॥ ತುಂಗಬಲವಾಯು ರಾರೋಗ್ಯಸುಖ ಸಕಲ ಸಿ । ಧ್ದಂಗಳುಂ ಪರಿಹರಂ ಬರದೋದಿ ಕೇಳ್ದ ಜನ । ರಿಂಗೆ ಸಂಪದವಿತ್ತು ಪೊರೆವ ಮೂಲಿಕೆಯ ಶ್ರೀಗುರು ವೆಂಕಟೇಶ ಮುದದೀ ॥ ಶ್ರೀಕೃಷ್ಣನೊಲಿದ ಭಕತರಿಗೆ ಭಯವಿಲ್ಲಾ ॥ ೧೭ ॥ ಶ್ರೀ ॥

---

॥ ೪೨ ॥ [ಧಾಟಿ:- ವಾಸುದೇವಂ ಸದಾನಂದತೀರ್ಥಂ] ಲಘುವಾಯುಸ್ತುತಿಯಂತೆ.

ಅಚ್ಯುತಾನಂತ ಗೋವಿಂದ ನಾರಾಯಣಾ । ಅಚ್ಯುತಾನಂತ ಗೋವಿಂದ ನಾರಾಯಣಾ ॥ ಪಲ್ಲ ॥ ನವವಿಧ ಭಕ್ತಿಯಿಂ ದಿವಸರಿ ಬಿವಸದೀ । ಶ್ರೀಧರಂಗರ್ಪಿಸಿ ಮುಕ್ತಿಯುವತಿಯಾ ಸಾಧಿಸೀ ॥ ಅಚ್ಯುತಾನಂತ ॥ ೧ ॥ ಹರಿಕಥಾಶ್ರವಣದೀ ಮೆರೆದಯೇಳ್ದಿನದೊಳು । ಪರೀಕ್ಷಿತರಾಯನು ಪರಗತಿ ಗೈದಿದ ॥ ಅಚ್ಯುತಾನಂತ ॥ ೨ ॥ ಅರ್ಥಿಸಿ ಶ್ರೀಹರಿ ಕೀರ್ತನೆಯಿಂದಲಿ । ಪ್ರವರ್ತಿಸಿ ನಾರದಾ ಸಾರ್ಥಕನಾದನೂ ॥ ಅಚ್ಯುತಾನಂತ ॥ ೩ ॥ ಹರಿ

ನಾಮಸ್ಮರಣೆಯ ಮರೆಯದೆ ಪ್ರಹ್ಲಾದ । ನಿರತ ಗೈಯುತಲೀ ಹರಿಯ ನೊಲಿಸಿದನೂ ॥ ಅಚ್ಯುತಾನಂತ ॥ ೪ ॥ ಶ್ರೀಪಾದವಗಲದೇ ದೇವನಾ ಚರಣದ । ಸೇವೆಯುಗೈಯುತ್ತ ಪಾವನೆಯಾದಳೂ ॥ ಅಚ್ಯುತಾನಂತ ॥ ೫ ॥ ಶ್ರೀಜನಾರ್ದನನಾ ಪೂಜಿಸೆ ಪೃಥುರಾಯಾ । ಮೂಜಗದೊಳ್ಗಹು ಪೂಜಿತ ನಾದನು ॥ ಅಚ್ಯುತಾನಂತ ॥ ೬ ॥ ವಂದಿಸೀ ವಂದಿಸೀ ಬಂದನಕ್ರೂರನು । ಭಕ್ತಿಯಿಂ ಜಲದೊಳು ಮುಕುಂದನ ಕಂಡನೂ । ಅಚ್ಯುತಾನಂತ ॥ ೭ ॥ ರಾಮನ ದಾಸ್ಯ ತ್ವಪ್ಪ್ರೇಮದೀ ರಚಿಸೀ ನಿ । ಸ್ಸೀಮ ಹನುಮಂತ ನಿಷ್ಕಾಮ ತಾನಾದನೂ ॥ ಅಚ್ಯುತಾನಂತ ॥ ೮ ॥ ರಕ್ಕಸಾರಿಯನು ರಥಕ್ಕೆ ಸಾರಥಿಯ ಗೈ । ವೃತ್ತ ಅರ್ಜುನನು ತಾನುತ್ತಮನೆನಿಸಿದ ॥ ಅಚ್ಯುತಾನಂತ ॥ ೯ ॥ ಭಾವದೀ ಬಲಿಯು ಆತ್ಮನಿವೇದನಗೈದು । ಭೂವಳಯದಿ ಭಕ್ತಕೋವಿದ ನಾದನೂ ॥ ಅಚ್ಯುತಾನಂತ ॥ ೧೦ ॥ ಚ್ಯುತರಹಿತಚ್ಯುತ ಮಿತರಹಿತಾ ನಂತ । ಸ್ರತಿರಹಿತ ಗೋವಿಂದ ಹಿತದಿಂದೊ ಸದಾನಂದ ॥ ಅಚ್ಯುತಾನಂತ ॥ ॥ ೧೧ ॥ ನಾಮತ್ರಯನಿದ ನೇಮದಿ ಜಪಿಸಿದ । ರಾಮಹಾಪಾಪ ನಿರ್ಧೂನಮ ಪ್ರಾಯಶ್ಚಿತ್ತಾ ॥ ಅಚ್ಯುತಾನಂತ ॥ ೧೨ ॥ ಒಂದೊಂದು ವಿಧ ಭಕ್ತಿಯಿಂದ ಪೂಜಿಸುತಲಾ । ಸಂಪದಿ ಮುಕ್ತಿಗೇ ಸಂದರು ಭಕ್ತರೂ ॥ ಅಚ್ಯುತಾನಂತ ॥ ॥ ೧೩ ॥ ಒಂಭತ್ತು ಭಕ್ತಿಯಿಂ ಬದಪನುದಿನದಲಿ । ನಂಬಿ ಭಜಿಸಿದರೆ ಏನೆಂಬೆ ನವರ ಭಾಗ್ಯಾ ॥ ೧೪ ॥ ಧರಯೊಳು ಮೂಲಿಕಪುರದಿ ನೆಲಸಿದ । ಶರಣರ ರಕ್ಷಕ ಗುರು ವೆಂಕಟೇಶನೂ ॥ ಅಚ್ಯುತಾನಂತ ಗೋವಿಂದ ನಾರಾಯಣಾ । ಅಚ್ಯುತಾನಂತ ಗೋವಿಂದ ನಾರಾಯಣಾ । ೧೫ ॥ ಶ್ರೀ ॥

## ॥ ಆಚಮನಸ್ಯ ನಾರಾಯಣಪದ್ಯಗಳು ॥

॥ ೪೩ ॥ ರಾಗ, ಕಾಂಬೋಧಿ [ಧಾಟಿ:- ಹರಿನಾರಾಯಣ ಹರಿ ನಮೋ] ತ್ರಿಪುಡೆತಾಳ

ಶ್ರೀಶ ಕ್ಷೀರಾರ್ಣವನಿಲಯ ಮಹ । ಶೇಷಶಯ್ಯ ಸುರೇಶಘೇಯ । ಕ್ಲೇಶ ನಾಶನ ಕರುಣನಿಧಿ ಶ್ರೀ । ಕೇಶವಾಯ ನಮೋಽಸ್ತುಮೊ ॥ ಹರಿನಾರಾಯಣ ಹರಿ ನಾರಾಯಣ ಹರಿನಮೋ ನಾರಾಯಣ ॥ ೧ ॥ ಕಾಯಕ್ಲೇಶವಿದೂರ ಮುಕ್ತಿ ಪ್ರ । ದಾಯಕಾನತಪ್ರಿಯ ಸುರಮುನಿಧ್ಯೇಯ ಗುಣಗಣನಿಲಯ ಶ್ರೀನಾ । ರಾಯಣಾಯ ನಮೋಽಸ್ತುಮೊ ॥ ಹರಿನಾರಾಯಣ ॥ ೨ ॥ ಮೋದಭರಿತಾನಂದ ಸುಖಮಯ । ಬೋಧಿತಾಮುಚರಿತ ಕರುಣಾಂಭೋಧಿ ಕಾರಣ ವಿಶ್ವರೂಪ ಶ್ರೀ । ಮಾಧವಾಯ ನಮೋಽಸ್ತುಮೊ ॥ ಹರಿನಾರಾಯಣ ॥ ೩ ॥ ದೇವದೇವೋತ್ತಮ

ಸಕಲ ನಿಗ । ಮಾವಳೀಪ್ರತಿಪಾದ್ಯ ಸುಜನಸಂ । ಜೀವ ಸರ್ವಗ ಸರ್ವಗತ ಶ್ರೀ । ಗೋವಿಂದಾಯ ನಮೋನ್ನಮೋ ॥ ಹರಿ ನಾರಾಯಣ ॥ ೪ ॥ ಜಿಷ್ಣು ಮುಖ್ಯಾಮರಕುಲಾಘ ಸು । ಪೋಷ್ಣ ಪಂಕಜನೇತ್ರ ಸ । ರ್ವಪ್ರವನೀ ಪದ ವೈಕುಂಠ ಶ್ರೀ । ವಿಷ್ಣುದೇವ ನಮೋನ್ನಮೋ ॥ ಹರಿ ನಾರಾಯಣ ॥ ೫ ॥ ಅಬ ಮೂರುತಿ ಅಮೃತಬಲ ಕ್ರ । ವ್ಯಾಪಕಾಲ ಸಂಹರಣ ಸುಜನರೋ । ಲ್ಲಾದ ನಿರುಪಮ ನಿತ್ಯ ಶ್ರೀಮಧು । ಸೂದನಾಯ ನಮೋನ್ನಮೋ ॥ ಹರಿ ನಾರಾಯಣ ॥ ೬ ॥ ವಕ್ರ ಸ್ಥಾಪನಾಚಾರ್ಯ ಸುರಕುಲ । ಚಕ್ರವರ್ತಿ ಚರಾಚರಾಸ್ಥಿತ । ಶುಕ್ರನೇತ್ರಪನಾಶ ಶ್ರೀತ್ರಿ । ವಿಕ್ರಮಾಯ ನಮೋನ್ನಮೋ ॥ ಹರಿ ನಾರಾಯಣ ॥ ೭ ॥ ಭೂಮಿಯಾಚಕ ಭುವನನಾಯಕ । ಕಾಮಿತಾಂಗ ಸದ್ಭಕ್ತಜನ ಸು । ಪ್ರೇಮ ಪಾವನ ಪೂರ್ಣನಾಮ ಶ್ರೀ । ವಾಮನಾಯ ನಮೋನ್ನಮೋ ॥ ಹರಿ ನಾರಾಯಣ ॥ ೮ ॥ ಭೂಧರಣಧರ ಭವ್ಯಸುತಗುಣ । ಶೋದರಾಶ್ರಿತಕಲ್ಪಶಾಖಿ । ಮೋದಲೀಲಾ ಚಿತ್ರ ಚರಿತಃ । ಶ್ರೀಧರಾಯ ನಮೋನ್ನಮೋ ॥ ಹರಿ ನಾರಾಯಣ ॥ ೯ ॥ ಝಷ ಮುಖ್ಯಾದ್ಯವತಾರ ಮಹಿತ । ದೃಷ್ಟಿನಾಶನ ಕಥನ ಸತತ ಹ । ರುಷವರ್ಧನ ಲೋಕಪಾಲ ಶ್ರೀ । ಹೃಷಿಕೇಶಾಯ ನಮೋನ್ನಮೋ ॥ ಹರಿ ನಾರಾಯಣ ॥ ೧೦ ॥ ಪದ್ಮರವಿ ಶತಕೋಟಿ ಭಾಸುರ । ಪದ್ಮಸಂಭವಜನಕ ಸುಖಕರ । ಪದ್ಮಧರ ಪುರುಷಾರ್ಥದಾತ ಶ್ರೀ । ಪದ್ಮನಾಭ ನಮೋನ್ನಮೋ ॥ ಹರಿ ನಾರಾಯಣ ॥ ॥ ೧೧ ॥ ಕಾಮಿತಪ್ರಿಯ ಶೂರಕುಲಜ ಯ । ಶೋದನಂದಕುಮಾರ ಗೋಕುಲ । ಮೋದಭರಿತಾನಂದ ಶ್ರೀದಾ । ಮೋದರಾಯ ನಮೋನ್ನಮೋ ॥ ಹರಿ ನಾರಾಯಣ ॥ ೧೨ ॥ ಅಂಕುಶಧ್ವಜ ವಜ್ರಮುಕುರರೇ । ಖಾಂಕಿತಾಮಲ ಚರಿತ ಕಮಲಕ । ಲಂಕ ಸುರಗಂಗಾಜನಕ ಶ್ರೀ । ಸಂಕರುಷಣ ನಮೋನ್ನಮೋ ॥ ಹರಿ ನಾರಾಯಣ ॥ ೧೩ ॥ ವಾಸವಾದಿ ಸಮಸ್ತ ಸುರಕುಲ । ವಾಸಪ್ರದ ಮುನಿಜನ ಹೃತ್ಕಮಲನಿ । ವಾಸ ನಿತ್ಯಾನಂದಮಯ ಶ್ರೀ । ವಾಸುದೇವ ನಮೋನ್ನಮೋ ॥ ಹರಿ ನಾರಾಯಣ ॥ ೧೪ ॥ ಚೈದ್ಯಮರ್ದನನಂತ ವೇದಾ । ವೇದ್ಯನನುಪಮ ಭಕ್ತಜನಸಂ । ಪಾದ್ಯ ಸುಲಭ ಶ್ರೀಶಿವಕರ ಶ್ರೀ । ಪ್ರದ್ಯುಮ್ನಾಯ ನಮೋನ್ನಮೋ ॥ ಹರಿ ನಾರಾಯಣ ॥ ೧೫ ॥ ಮನವಚನ ಕಾಯೈಕ ತ್ರಿಕರಣಾ । ರ್ಪಣ ಭಕತಜನ ವಾಂಛಿತಪ್ರದ । ಸನಕ ನಾರದಮೌನಿನುತ ಶ್ರೀ । ಅನಿರುದ್ಧಾಯ ನಮೋನ್ನಮೋ ॥ ಹರಿ ನಾರಾಯಣ

॥ ೧೬ ॥ ಚಿತ್ತಜಾಪಿತ ಚೇತನಾತ್ಮಕ । ಕೀರ್ತನಪ್ರಿಯ ಕರುಣಸಾಗರ । ಪಾರ್ಥಸಾರಥಿ ಕೀರ್ತಿ ಶ್ರೀಪುರು । ಷೋತ್ತಮಾಯ ನಮೋನ್ನಮೊ ॥ ಹರಿ ನಾರಾಯಣ ॥ ೧೭ ॥ ಅಕ್ಷಯಾತ್ಮಕ ಅಖಿಳ ಲೋಕಾ । ಧ್ಯಕ್ಷ ಕುಜನಶಿಕ್ಷ ಸಜ್ಜನ । ರಕ್ಷ ಕರುಣಕಟಾಕ್ಷ ಶ್ರೀ ಅ । ಧೋಕ್ಷಜಾಯ ನಮೋನ್ನಮೋ ॥ ಹರಿ ನಾರಾಯಣ ॥ ೧೮ ॥ ಘೋರ ಕಶಿಪುಸಂಹಾರ ಜಗದಾ । ಧಾರ ಪಾರಾವಾರ ನಮುಗಂ । ಭೀರ ವರ ಪ್ರಹಲ್ಲಾದರಕ್ಷಕ । ನಾರಸಿಂಹ ನಮೋನ್ನಮೊ ॥ ಹರಿ ನಾರಾಯಣ ॥ ೧೯ ॥ ಕುಚ್ಚಿತಾಸುರಜನ ವಿದಾರಣ । ನಿಶ್ಚಲಂತಃಕರಣ ರಕ್ಷಣ । ಸಚ್ಚರಿತ ಸುಮನೋದ್ಧರಣ ಶ್ರೀ । ಅಚ್ಯುತಾಯ ನಮೋನ್ನಮೊ ॥ ಹರಿ ನಾರಾಯಣ ॥ ೨೦ ॥ ಪರ್ಣನೇಕೋದೇವ ದಾನವ । ಮರ್ದನಾನತ ಜನಸುರಕ್ಷ ಗೋ । ವರ್ಧನೋದ್ಧರಣಖಿತಖಿಲ ಜ । ನಾರ್ದನಾಯ ನಮೋನ್ನಮೊ ॥ ಹರಿ ನಾರಾಯಣ ॥ ೨೧ ॥ ದೇವದೇವಾಧೀಶ ಸುಜನಸಂ । ಜೀವ ಜೀವಾಧಾರ ತ್ರೈಭುವ । ನಾವಳೀಸಂಸ್ತುತ್ಯ ನಿತ್ಯ । ಶ್ರೀ ಉಪೇಂದ್ರಾಯ ನಮೋನ್ನಮೊ ॥ ಹರಿ ನಾರಾಯಣ ॥ ೨೨ ॥ ಬಾಹುಬಲ ತದ್ಭಕ್ತಜನ ಹೃ । ದ್ಗೇಹವಾಸ ವಿರಿಂಚಿವಂದಿತ । ಮೋಹನಾಂಗ ಸುಶರೀರ ಸುಲಲಿತ । ಶ್ರೀಹರಿಭ್ಯ ನಮೋನ್ನಮೊ ॥ ಹರಿ ನಾರಾಯಣ ॥ ೨೩ ॥ ವೃಷ್ಣಿಕುಲಸಂಭೂತ ಮಾನಿತ । ವೈಷ್ಣವಾಗ್ರಣಿ ವಿದುರಸನ್ನುತ । ಜಿಷ್ಣುಸಖ್ಯ ಸನಾಥನಾ ಶ್ರೀ । ಕೃಷ್ಣದೇವ ನಮೋನ್ನಮೋ ॥ ಹರಿ ನಾರಾಯಣ ॥ ೨೪ ॥ ಶಂಖಚಕ್ರಾಂಕಿತ ಮಕರತಾ । ಟಂಕಧರ ಮೂಲಿಕನಿವಾಸ ನಿ । ಶ್ಶಂಕ ನಿರ್ಮಲ ನಿತ್ಯ ಶ್ರೀಗುರು । ವೆಂಕಟೇಶ ನಮೋನ್ನಮೊ ॥ ಹರಿ ನಾರಾಯಣ ಹರಿ ನಮೋ ನಾರಾಯಣೇಣಂ ॥ ೨೫ ॥ ಶ್ರೀ೪ ॥

## ಪ್ರಹ್ಲಾದಚರಿತ್ರೆ

॥ ೪೪ ॥ ರಾಗ, ಕಾಂಬೋಧಿ [ಧಾಟಿ:- ಶ್ರೀಶ ಕ್ಷೀರಾರ್ಣವನಿಲಯ] ತ್ರಿಪುಟತಾಳ

ನಾರಸಿಂಹ ನಮೋನ್ನಮೋ ಜಯ । ನಾರಸಿಂಹ ನಮೋನ್ನಮೋ ಜಯ । ನಾರಸಿಂಹ ನಮೋನ್ನಮೋ ಜಯ । ನಾರಸಿಂಹ ನಮೋನ್ನಮೋ ॥ ॥ ಪಲ್ಲ ॥ ವೀರ ನರಹರಿ ನಮೊ ಎನಲು ಮಹ । ಘೋರ ಅಪಮೃತ್ಯುಗಳ ನೆಲ್ಲ ಸಂ । ಹಾರಗೈಯ್ಯುತ ಪೊರೆವ ಕರುಣಾ । ವಾರಿನಿಧಿ ವಾಂಛಿತಪ್ರದಾಯಕಾ ॥ ನಾರಸಿಂಹ ॥ ೧ ॥ ಹಿರಣ್ಯಕಶ್ಯಪುನುದರದಿಂದವ । ತರಿಸಿದುದೊ ಮೂಜಗದೊಳಗೆ ಶ್ರೀ । ಹರಿ ಸರ್ವೋತ್ತಮನೆಂಬ ಶ್ರುತಿನಿ । ರ್ಧರವೆನಲು ಪ್ರಹಲ್ಲಾದನುದಿಸಿದ ॥ ನಾರಸಿಂಹ ॥ ೨ ॥ ಹುಟ್ಟುತಲೆ ಹರಿಭಕ್ತಿಯಾ ವಡ ।

ನಿಟ್ಟು ಬಂದುದೊ ಎನಲು ಶ್ರೀಪರ । ಮೇಷ್ಠಿಪಿತಸಂಘ್ರಿಗಳ ಹೃದಯದೊ । ಳಿಟ್ಟು ನಾಮಸ್ಮರಣೆಗೈಯ್ಯುವ ॥ ನಾರಸಿಂಹ ॥ ೩ ॥ ತೊದಲನುಡಿಯಲಿ ಕೃಷ್ಣ ಕೇಶವ । ಮಧುವಿದಾರಣ ಮಾಧವಾಚ್ಯುತ । ತ್ರಿದಶಪತಿನುತ ವಿಷ್ಣು ವಿಭುವೆಂ । ದಧಿಕ ಭಕ್ತಿಲಿ ಹರಿಯ ಸ್ಮರಿಸುವ ॥ ನಾರಸಿಂಹ ॥ ೪ ॥ ಬೆಳ ಬೆಳವುತಿರೆ ಹಗಲಿರುಳು ಶ್ರೀ । ನಳಿನನಾಭನ ದಿವ್ಯನಾಮಾ । ವಳಿಯ ಸ್ಮರಿಸುವ ಬಾಲಕನ ಕಂ । ಡಳುಕಿದನು ಖಳ ಚಂಚಲಿಸುತಲಿ ॥ ನಾರಸಿಂಹ ॥ ॥ ೫ ॥ ಬುದ್ಧಿಗೆಟ್ಟಿತು ಬಾಲಕಗೆ ನಿ । ರ್ಬುದ್ಧಿಯಾಯಿತು ನಮ್ಮ ವೈರಿಯ । ಹೊದ್ದಿ ನೆನವುತ್ತಿರುವನೀತನ । ತಿದ್ದಿಸುವದು ಕುಲಪುರ್ವನೆಂದನು ॥ ನಾರಸಿಂಹ ॥ ೬ ॥ ಕರಸಿ ಚಂಡಾಮರ್ಕರ ರೋಷದ । ಲಿರಿಸಿ ನರನವರತ ದಾನವ । ಪರಿಯ ವಿದ್ಯವ ಪೇಳುತಿರೆ ಶ್ರೀ । ಹರಿ ಸರ್ವೋತ್ತಮನೆಂದು ಬರೆದನು ॥ ನಾರಸಿಂಹ ॥ ೭ ॥ ಓನ್ನಮೋಸ್ತು ಎನುತ ಕೈಬೆರ । ಳನ್ನು ತಾ ಪಿಡಿವುತ್ತ ಬರೆಸಲು । ಓನ್ನಮೋ ನಾರಾಯಣಾ ಹರಿ । ಎನ್ನುತ್ತಾ ತಾತ್ಪರ್ಯಬಟ್ಟರು ॥ ನಾರಸಿಂಹ ॥ ೮ ॥ ಇದು ವಿಚಿತ್ರ ಈ ಶಿಶುವ ಬುದ್ಧಿನ । ಪದನ ನಮಗಾಸಾಧ್ಯವೆನ್ನುತ । ತ್ರಿದಶರಿಪುಗೊಪ್ಪಿಸಲು ಪುತ್ರನ । ಮುದದಿ ಕರೆದೊಡಂಬಡಿಸಿ ನುಡಿದನು ॥ ನಾರಸಿಂಹ ॥ ೯ ॥ ಪೇಡ ಮಗನೇ ದನುಜ ವಂಶದಿ । ಧಾಡಕನ ಹೆಸರೇಕೆ ನಿನಗೆ ಈ । ಖೋಡಿಯಾಯಿತ್ಯಾತು ನೀ ಕುಲ । ಗೇಡಿಯಾದೆಯೊ ಎನುತ ನುಡಿದನು ॥ ನಾರಸಿಂಹ ॥ ೧೦ ॥ ಬೊಪ್ಪ ನೀ ಕಡು ಮರುಳು ಮೂಜಗ । ದಪ್ಪ ನಾರಾಯಣನ ಬಟ್ಟರೆ । ನಿಷ್ಫಲವು ಈ ಜನ್ಮ ಸಾರ್ಥಕ । ವಪ್ಪುದಾತನ ಸ್ಮರಿಸಿ ಪ್ರಾರ್ಥಿಸು ॥ ನಾರಸಿಂಹ ॥ ೧೧ ॥ ಎನಗೆ ಬುದ್ಧಿಯ ಪೇಳ್ವೆ ನೀನೆಲೊ । ಮುನಿದೆನಾದರೆ ಕೊಲುವೆನೆನ್ನಲು । ಹನನಗೈಯ್ಯುವ ಪೊರೆವ ಸ್ವಾತಂತ್ರ್ಯವು ನಾರಾಯಣನೊಬ್ಬನೆಂದನು ॥ ॥ ನಾರಸಿಂಹ ॥ ೧೨ ॥ ನುಡಿಯ ಕೇಳುತ ಅಂತಕನ ಪೋಲು । ಘುಡುಘುಡಿಸಿ ಕೋಪಿಸುತ ಪುತ್ರನ । ಬಡಿಸಿದನು ಬಲು ಬಗೆಯ ಕೊಲೆಗಳ । ಧಡಿಗ ದಾನವ ರೋಷ ಧರಿಸುತ ॥ ನಾರಸಿಂಹ ॥ ೧೩ ॥ ಪ್ರಾಣವಗಲುವ ಫಲವು ಕೊಲೆಗಳ । ಮಾಣದೆಸಗಲು ಸಾಯದಿರೆ ಖಳ । ಕಾಣುತಲಿ ಕೌತುಕ ಬಡುತ ತನ್ನಯ । ಸೂನುವಿನ ಕರೆದಾಗ ನುಡಿದನು ॥ ನಾರಸಿಂಹ ॥ ೧೪ ॥ ನಿಲ್ಲೆಲವೊ ಎಲೆ ಖೂಳ ನಿನ್ನನು । ಕೊಲ್ಲಲೀಸದ ವಿಷ್ಣು ಎಂಬವ । ನೆಲ್ಲಿರುವ ತೋರೆನುತ ಖಡ್ಗವ । ಕೊಳ್ಳುತಲೆ ಝಳಪಿಸುತ ಹಿಡಿದನು ॥ ನಾರಸಿಂಹ ॥

॥ ೧೫ ॥ ನೀನು ನಾನು ಚರಾಚರವಿ ಅಣು । ರೇಣುತೃಣಕಾಷ್ಠದಲಿ ಚೇತನ । ಶ್ರೀನಿವಾಸನದಲ್ಲದುಂಟೆ ನೀ । ನೇನ ಮರುಳಾಗಿಹೆಯೊ ಎಂದನು ॥ ನಾರಸಿಂಹ ॥ ೧೬ ॥ ಎಂಬ ನುಡಿಗಾರ್ಭಟಿಸಿ ತೋರೀ । ಸ್ತಂಭವಲಿ ತೋರದಿರ ಪ್ರಾಣವ । ಗೊಂಬೆನೀಕ್ಷಣಕೆನುತ ಖಡ್ಗವ । ಡಿಂಬಕನ ಕೊರಳಿಂಗೆ ಚಾಚಿದ ॥ ನಾರಸಿಂಹ ॥ ೧೭ ॥ ತೋರೊ ಬೇಗದಿ ತೋರೆನುತ ಕಾ । ಹೇರಿ ಖಳನಾರ್ಭಟಿಸೆ ಕಾಣುತ । ಬಾರೊ ನರಹರಿ ಬಾರೆನುತ ಬಾ । ಯಾರಿ ಬಾಲಕ ಚೀರಿ ಕರೆದನು ॥ ನಾರಸಿಂಹ ॥ ೧೮ ॥ ಛಟಛಟರೆನ್ನುತ ಕೋಟ ಶಿಡಿಲಾ । ರ್ಭಟಿಗಳೊಂದೇ ಬಾರಿ ಸ್ತಂಭವು । ಛಿಟಿಛಿಟಲು ಛಿಟಿಛಿಟಿಲೆನುತ ಉತ್ಕಟದ ಸೀಳಿತು ವಜ್ರಸ್ತಂಭವು । ನಾರಸಿಂಹ । ೧೯ । ವಸಿದಪ್ಪುತರಭಸವೆನ್ನುತ । ದಾನವನು ತಪ್ಪಿಸಲು ಸಾಹಿರ । ಭಾನುತೇಜೋಲವಿಯುಜ್ವಲ । ವಾನಿಸಿತು ಖಳನಿವಿರು ನೋಡುತ ॥ ನಾರಸಿಂಹ ॥ ೨೦ ॥ ತೆರದ ಬ್ಯಾದೆರೆ ಭೀಕರಾಕೃತಿ । ನೆರದು ಸೋಕುವ ಶಿಖಿಗಳುಜ್ವಲ । ಅರಳುಗಂಗಳ ನಾಸಿಕದ ಸ್ತ್ಯ । ಉರಿಯ ಮೃಗರಾಜೇಂದ್ರ ವದನದ ॥ ನಾರಸಿಂಹ ॥ ೨೧ ॥ ಕಿಡಿಯಿಡುವ ದಾಡೆಗಳ ಝುಡಿತೆಯ । ಮಿಡುಕುವವದನದ ದಂತಪಂಕ್ತಿಯ । ತೊಡಕು ಕಿವಿಗಳ ಕುಣಿವ ಹುಬ್ಬಿನ । ಕಡೆಯು ಪೆರೆನೊಸಲಿನ ಸುತಿಲಕದ ॥ ॥ ನಾರಸಿಂಹ ॥ ೨೨ ॥ ಕೊಪ್ರೇಣಸೇನಾವಸನವುದಿಗೆ ಆ । ಜಾನು ಅಷ್ಟಭುಜಗಳು ಕುಲಿಶನ । ವ್ಮಾನ ಬೆರಳುಗುರುಗಳ ರುಚಿರ ನ । ಖೇನ ಭಾಸ್ಕರಕಿರಣಲಹರಿಯು ॥ ನಾರಸಿಂಹ ॥ ೨೩ ॥ ಘೋರ ಕೋಪಜ್ವಾಲೆ ಪೂಂಕೃತ । ವೀರಿ ಖಳನನು ಪಿಡಿದು ತೊಡೆಯ ಮೇ । ಲೇರಿಸುತ ಪೊಸ್ತಿಲಲಿ ಕುಳಿತು ವಿ । ದಾರಿಸುತ ಪಿಡಿದುರವ ಬಗಿದನು ॥ ನಾರಸಿಂಹ ॥ ೨೪ ॥ ಎರಡು ಕರದಿಂ ಪಿಡಿಯುತುದರವ । ಎರುಡು ಕರದಿಂ ಬಗಿದು ಕರುಳನು । ಎರಡು ಕರದಿಂ ಧರಿಸಿ ದನುಜನ । ಎರಡು ಕರದಿಂ ಸದೆದು ಬಸುಟನು ॥ ನಾರಸಿಂಹ ॥ ೨೫ ॥ ಕರುಳಮಾಲೆಯ ಸೆಳೆದು ಕೊರಳಿಗೆ । ಧರಿಸಿ ತಿಳಿರಕುತವನು ವೊಗವೊಗ । ಮರವನೆಪ ರೋಷಾಗ್ನಿ ತ್ರೈಜಗ । ಧರಿತವಾಗಲು ಸುರರು ನೆರದರು ॥ ನಾರಸಿಂಹ ॥ ೨೬ ॥ ಶಿರಿಯನಿಪಿರಲಿ ನಿಲಿಸಿ ವಿಧಿಭವ । ರಿರದೆ ಸ್ತುತಿಸಿದರಾಗ ಜಯಜಯ । ನರಮೃಗೇಂದ್ರ ಸ್ವರೂಪ ನರಹರಿ । ಕರುಣನಿಧಿಯೈ ಕಾವುದೆಂದರು ॥ ನಾರಸಿಂಹ ॥ ೨೭ ॥ ಮರುಳ ದನುಜನ ಮರ್ದಿಸಿದೆ ಹಿತ । ಕರವದಾಯಿತು ದೇವ ನಿನ್ನೀ । ಉರಿವ ರೋಷಜ್ವಾಲೆಯಲಿ

ಜಗ । ಉರಿವೃತ್ತಿದೆ ಸಲಹೆಂದ ಪ್ರಾರ್ಥಿಸನು ॥ ನಾರಸಿಂಹ ॥ ೨೮ ॥ ಎಂದು ಸ್ತುತಿಸಿ ಪ್ರಹ್ಲಾದ ದೇವನ । ಹೊಂದಿರಲು ನರಹರಿಯು ಚರಣಕೆ । ವಂದಿಸುತ ಪ್ರಾರ್ಥಿಸುತ ಭಕ್ತನ । ಚಂದದಿಂ ಮನ್ನಿಸುತಲಿಂದನು ॥ ನಾರಸಿಂಹ ॥ ॥ ೨೯ ॥ ಇತ್ತ ಬಾರೆನ್ನಯ ಮಗನೆ ಕೇಳ್ । ಭಕ್ತರನು ಬಾಧಿಸಲು ಸೈರಿಸೆ । ಸುತ್ತಮನೆ ನಿನಗೊಲಿಸುಗದಿ ಪ್ರೈ । ಕೃತ್ರಿಮನ ಮರ್ದಿಸಿದೆ ಸುಖಿಸು ॥ ॥ ನಾರಸಿಂಹ ॥ ೩೦ ॥ ಎನಲು ಪರಿಗೊಂಬಿಸುತಲಿಂದ ನಿ । ನೆನಗದೆಂದಿದು ರಕ್ಷಿಸಿದೆ ಈ । ವನಜಭವ ಮುಖ್ಯರಿಗಭಯವನಿ । ಕ್ಷ್ಮಾಪಿ ಪಾಲಿಪುದೆನು ತೆರಗಿದನು ॥ ನಾರಸಿಂಹ । ೩೧ ॥ ತರದಿಂ ರೋಷವನು ಲಕ್ಷ್ಮಿಯ । ಕರದು ತೊಡೆಯಲಿ ಕುಳ್ಳಿರಿಸಿ ನಿಜ । ಶರಣಗಭಯವನಿತ್ತು ವರಗಳ । ಕರುಣಿಸುತ ಅಜಭವರ ನುಡಿಸಿದ ॥ ನಾರಸಿಂಹ । ೩೨ ॥ ಅಂಜದಿರಿ ಸುರವರರು ದಾನವ । ಭಂಜಗೊಲಿಸುಗ ಕೋಪಿಸಿದೆ ಘನ । ಭಂಜಕನು ಭಕ್ತರಿಗೆ ಎನುತಲಿ । ಕಂಜಭವ ಮುಖ್ಯರನು ಸಲಹಿದ ॥ ನಾರಸಿಂಹ ॥ ೩೩ ॥ ಸುರವರರಿಗಭಯವನು ಕೊಡುತಾ । ಧರಿಸಿ ಪ್ರಹಲ್ಲಾದನನ ಮನ್ನಿಸಿ । ಕರುಣಿ ಅಂತರ್ಧಾನನಕೈದಿದ । ಪರಮಪುರುಷನು ಪುಣ್ಯನಾಮನು ॥ ನಾರಸಿಂಹ । ೩೪ ॥ ಮಂಗಲಂ ಪ್ರಹಲ್ಲಾದವರದಗೆ । ಮಂಗಲಂ ಶ್ರೀನಾರಸಿಂಹಗೆ । ಮಂಗಲಂ ಭಕ್ತರನು ಸಲಹುವ । ತುಂಗಭುಜಬಲ ಲಕ್ಷ್ಮೀನೃಹರಿಗೆ ॥ ನಾರಸಿಂಹ ॥ ೩೫ ॥ ಧರೆಯೊಳುತ್ತಮವೆನಿಪ ಮೂಲಿಕೆ । ಪುರದ ಶ್ರೀಗುರು ವೆಂಕಟೇಶನ । ಕರುಣಾನಿಧಿ ಶ್ರೀನಾರಸಿಂಹನ । ಮರೆಯದನುದಿನ ಸ್ಮರಿಸಿ ಸುಜನರು ॥ ನಾರಸಿಂಹ ನಮೋನ್ನಮೋ ಜಯ । ನಾರಸಿಂಹ ನಮೋನ್ನಮೋ ॥ ೩೬ ॥ ಶ್ರೀ ॥

॥ ೪೫ ॥ ರಾಗ ಬೃಂದಾವನ ಸಾರಂಗ, ಏಕತಾಳ.

ಗೋವಿಂದಾ ಹರಿ ಗೋವಿಂದಾ ಹರಿ ಗೋವಿಂದಾ ಹರಿ ಗೋವಿಂದಾ ॥ ॥ ಪಲ್ಲ ॥ ಪ್ರಳಯೋದಕದಲಿ ಪಚ್ಚ ಪನಾಸ ನಟ । ಪೆಲೆಯ ಮೇಲೊರಗಿದ ಗೋವಿಂದಾ । ಜಲುಧಿಕೆ ನಾಭಿಕಮಲದಿಂದುದಿಸಿದ । ಜಲಜಾಸನಪಿತ ಗೋವಿಂದಾ ॥ ಗೋವಿಂದಾ ಹರಿ ॥ ೧ ॥ ಸೃಷ್ಟಿರಚನೆ ಸುರಜ್ಯೇಷ್ಠನೆಂದೆಂಬ ನಾಮ । ನಿಟ್ಟು ಸಲಹಿದನು ಗೋವಿಂದಾ ॥ ಪುಟ್ಟದಿ ಜಗಗಳ ಸುಟ್ಟು ಕಳೆವ ಗುಣ । ಕೊಟ್ಟನು ರುದ್ರಗೆ ಗೋವಿಂದಾ ॥ ಹರಿ ಗೋವಿಂದಾ ॥ ೨ ॥ ಅಗಣಿತ ಅವತಾರಗಳಿಂ ಭಕ್ತರ । ನಗಲದೆ ಸಲಹಿದ ಗೋವಿಂದಾ ॥ ಸುಗುಣ

ಗುಣಗಳಿಂ । ಜಗದಧಿಪತಿ ನಮ್ಮ ರುಗುಮಿಣಿಧವ ಶ್ರೀಗೋವಿಂದಾ ॥ ಗೋವಿಂದಾ ಹರಿ ॥ ೩ ॥ ಸತ್ಯವ್ರತಿಪಗೆ ಸೈಮಿತ್ಯ ಪ್ರಳಯದಲಿ । ಪ್ರತ್ಯಕ್ಷವಾದನು ಗೋವಿಂದಾ ॥ ಮತ್ತೆ ತಮನ ಮಡುಹುತ ವೇದಗಳಜ । ಗಿತ್ತು ಸಲಹಿದನು ಗೋವಿಂದಾ ॥ ಗೋವಿಂದಾ ಹರಿ ॥ ೪ ॥ ಬೃಂದಾರಕರಿಂಗಂ ದಮೃತ ಉಣಿಸ । ಲೆಂದು ಕರುಣದಿಂ ಗೋವಿಂದಾ ॥ ಮಂದರಗಿರಿಧರ ನೆಂದೆನಿಸಿದನಾ । ನಂದದಿ ಕೂರುಮ ಗೋವಿಂದಾ ॥ ಗೋವಿಂದಾ ಹರಿ ॥ ॥ ೫ ॥ ಯಾಗಮುಖದಿ ಹವಿರ್ಭಾಗವ ಸುರರಿಂ । ಗಾರೋಗಣೆಗೈಸಲು ಗೋವಿಂದಾ ॥ ಬೇಗದಿ ಕ್ರೋಢರೂಪಾಗಿ ಹಿರಣ್ಯನ । ನೀಗಿ ಧರೆಯ ತಂದ ಗೋವಿಂದಾ ॥ ಹರಿ ಗೋವಿಂದಾ ॥ ೬ ॥ ಶಿಶು ಪ್ರಹಲ್ಲಾದನ ಸಸಿನದಿ ಸಲ್ಲಹಲಿಂ । ದಸಮ ನ್ರಹರಿಯಾದೆ ಗೋವಿಂದಾ ॥ ಮಿಸುನಿಕಶ್ಯಪುವಿನ ಬಸುರ ಸೀಳಿ ನು । ರ್ದಿಸಿ ಪೆಸರೊಡೆದನು ಗೋವಿಂದಾ ॥ ಗೋವಿಂದಾ ಹರಿ ॥ ೭ ॥ ಬಲಿಯ ಮನೆಯ ಬಾಗಿಲ ಕ್ಕೈದನುದಿನ । ಸಲಹಲೋಸುಗ ವಾಗಿ ಗೋವಿಂದಾ ॥ ಚಲುವ ವಾಮನನಾಗಿ ಇಳೆಯ ಈರಡಿಗೈ । ದಳೆದ ತ್ರಿವಿಕ್ರಮ ಗೋವಿಂದಾ ॥ ಗೋವಿಂದಾ ಹರಿ ॥ ೮ ॥ ಭೂಮಿಯ ದ್ವಿಜರಿಗೆ ಪ್ರೇಮದಿ ಕೊಡಲು ನಿ । ಸ್ಸೀಮ ಪರಶುಧರ ಗೋವಿಂದಾ ॥ ಶಾಮಸಕ್ಷತ್ರಿ ನಿರ್ನಾಮ ಗೈದ ಭೃಗು । ರಾಮಾವತಾರನು ಗೋವಿಂದಾ ॥ ಗೋವಿಂದಾ ಹರಿ ॥ ೯ ॥ ಮಗೆತೊಕ್ಕ ತರಂಗ ಮೆರೆವ ಲಂಕಾಪುರ । ಸ್ಥಿರವಾಗೀಯಲು ಗೋವಿಂದಾ ॥ ಧುರದೊಳು ದಶಕಂಧರ ಘಟಕರ್ಣರ । ತರಿದ ಶ್ರೀರಘುವರ ಗೋವಿಂದಾ ॥ ಹರಿ ಗೋವಿಂದಾ ॥ ೧೦ ॥ ದುರುಳ ಕಂಸ ಕೌರವನ ತರಿದು ಪಾಂ । ಡವರ ಸಲಹಲೆಂದು ಗೋವಿಂದಾ ॥ ಮೆರೆವ ದೇವಕಿಯಾ ತರಳನೆನಿಸಿ ಭೂ । ಭರನಿಳುಹಿದ ಕೃಷ್ಣ ಗೋವಿಂದಾ ॥ ಗೋವಿಂದ ಹರಿ ॥ ೧೧ ॥ ಯುದ್ಧದಿ ದಿತಿಜರ ಗೆಮ್ದು ಬಯಸಲೆಂದು । ಬದ್ಧಪತಿವ್ರತೆ ಗೋವಿಂದಾ ॥ ಮುದ್ದಿಸಿ ಸತಿಯರ ಮುದ್ದುರೂಪದಿ ಗೆದ್ದ । ಬುದ್ಧವತಾರನು ಗೋವಿಂದಾ ॥ ಗೋವಿಂದಾ ಹರಿ ॥ ೧೨ ॥ ಕಲಿಮಲವೆಲ್ಲವ ತೊಳೆದು ಶ್ರುತಿಗಳನು । ನೆಲೆಗೊಳ್ಳಿಸಲೆಂದು ಗೋವಿಂದಾ ॥ ಛಲದಿಂ ಮ್ಲೇಂಛರ ಕುಲವ ಸಂಹರಿಸಿದ । ಕಲಿಕ್ಯವತಾರನು ಗೋವಿಂದಾ ॥ ಗೋವಿಂದಾ ಹರಿ ॥ ೧೩ ॥ ಹತ್ತವತಾರದಿ ದೈತ್ಯರ ಮರ್ದಿಸಿ । ಭಕ್ತರ ಸಲಹಿದ ಗೋವಿಂದಾ ॥ ಭಕ್ತಿ ಮುಕ್ತಿಗಳನಿತ್ತು ಸಲವ ನಮ್ಮ । ಕರ್ತೃ ಗೋಪಾಲ ಶ್ರೀಗೋವಿಂದಾ ॥

ಗೋವಿಂದಾ ಹರಿ ॥ ೧೪ ॥ ಏಕೋ ದೇವ ನ ದ್ವಿತೀಯನೆಂಬ ಶೃತಿ । ಲೋಕವಿ ಮೆರಸಿದ ಗೋವಿಂದಾ ॥ ಶ್ರೀಕರ ಮೂಲಿಕಪುರ ವೆಂಕಟ ಕರುಣಾಕರ ಶ್ರೀಹರಿ ಗೋವಿಂದಾ ॥ ಗೋವಿಂದಾ ಹರಿ ॥ ೧೫ ॥ ಶ್ರೀ ॥

॥ ೪೬ ॥ ರಾಗ, ಕಲ್ಯಾಣ [ಧಾಟಿ:- ಎಂದಿಗೆ ದೊರಕುವನು । ಶ್ರೀಗುರು] ಅಷ್ಟತಾಳ

ಮಾತೊಂದೊಲಿಸಬಾರದೆ । ನಾರಾಯಣ। ಪ್ರೀತಿಯೆನ್ನಲಿ ತೋರದೆ ॥ ಭೀತಿಮಾನಸನಾಗಿ ಭಯವಿ ಕಂಗೆಡುತಲಿ । ಕಾತುರದಿಂದಲಿ ಕರದು ಕೂಡಿದಡೆನ್ನ ॥ ಪಲ್ಲ ॥ ವಿಧವಿಧ ಕಂಟಕವೂ । ಬಾಧಿಸಲಿನ । ಗೊದಗಿತು ಸಂಕಟವೂ ॥ ಅದುಭುತಮಾಯೆಗೆ ಬೆದರಿ ಬೆಂಡಾಗೀಗ । ಹೃದಯತಾಪದಿ ನಿನ್ನ । ಕೊದಗಿ ಕೊಂದಳು ಎನ್ನ ॥ ೧ ॥ ದಾತರ್‍ಯಾರಿಲ್ಲವೆಂದು । ಯಾರಿಲ್ಲದ । ನಾಥನಾಗಿಹೆನಿಂತೆಂದೂ ॥ ಭೀತರಕ್ಷಕ ಭಕ್ತಭಯನಿವಾರಣ ಜಗ । ನ್ನಾಥನೆ ಗತಿಯೆಂದು । ಸೋತು ಕರದಡೆನ್ನ ॥ ೨ ॥ ಮೋಕ್ಷಾರ್ಥವನು ತೋರಿಸೂ । ನೀ ಬಂದೆನ್ನ । ಅಕ್ಷಿಗೆ ಗೋಚರಿಸೋ ॥ ಸಾಕ್ಷಾತ ಶ್ರೀಗುರು ಲಕ್ಷ್ಮೀ ವೆಂಕಟ ನೀನೆ । ರಕ್ಷಿಸಬೇಕೆಂದು ಲಕ್ಷ ಕರದಡೆನ್ನ ॥ ೩ ॥ ಶ್ರೀ ॥

॥ ೪೭ ॥ ರಾಗ, ಬೇಗಡೆ [ಧಾಟಿ:— ಬಂದೆನ್ನ ಕಾಯೊ ಶ್ರೀಹರಿಯೇ] ಅಷ್ಟತಾಳ

ಈರೇಳು ಜಗದೊಳು ನೀನೇ । ರಾಮ ನೀನೇ । ರಂಗ ನೀನೇ । ಕೃಷ್ಣ ನೀನೇ ॥ ಪಲ್ಲ ॥ ಜಗದೊಳು ನೀನೇ । ಕಲಿ । ಯುಗದೊಳೂ ನೀನೇ । ಶೇಷಾದ್ರಿವರ ಗಿರಿವಾಸ ನೀನೇ ॥ ರಂಗ ನೀನೇ ॥ ಈರೇಳು ಜಗದೊಳು ನೀನೇ ॥ ಅನುಪಲ್ಲ ॥ ಅಜನಲ್ಲಿ ನೀನೇ । ದ್ವಿಜನಲ್ಲಿ ನೀನೇ । ಸುಜನರಿಗೊಲಿವ ಭುಜಗಶಯನ ನೀನೇ ॥ ರಂಗ ನೀನೇ ॥ ಈರೇಳು ಜಗದೊಳು ನೀನೇ ॥ ೧ ॥ ಅಂತರ್ಬಹಿರ್ದೇಶೋ। ಭಯದಲ್ಲಿ ನೀನೇ। ಸಂತರು ಭಜಿಸುವ ಮುನಿವಂದ್ಯ ನೀನೇ ॥ ರಂಗ ನೀನೇ ॥ ಈರೇಳು ಜಗದೊಳು ॥ ೨ ॥ ವೃಕ್ಷದೊಳಿರುವ। ಪಕ್ಷಿಗೆ ಸಾಕ್ಷಿ ನೀನೇ। ಪಕ್ಷಿವಾಹನ ಮೋಕ್ಷಕೊಡುವವನು ನೀನೇ ॥ ರಾಮಾ ನೀನೇ ॥ ಈರೇಳು ಜಗದೊಳು ನೀನೇ ॥ ೩ ॥ ವಿದ್ಯೆಹೇಳುವ ನೀನೆ । ಬುದ್ಧಿಕಲಿಸುವ ನೀನೇ । ಉದ್ಧಾರಮಾಡುವ ಸದ್ಗುರು ನೀನೇ ॥ ರಾಮಾ ನೀನೇ ॥ ಈರೇಳು ಜಗದೊಳು ॥ ೪ ॥ ಉಣಿಸುವೆ ದಣಿಸುವೆ । ಎಣಿಸುವೆ ನೀನೇ । ಗುಣಪೂರ್ಣ ಗುಣರಹಿತಾನಂದನು ನೀನೇ ॥ ರಂಗ ನೀನೇ ॥ ಈರೇಳು ಜಗದೊಳು ನೀನೇ ॥ ೫ ॥ ಒಡವೆ ವಸ್ತುವು ನೀನೇ । ಕಡಗಕಂಕಣ

ನೀನೇ । ಎನ್ನೊಡಲ ತುಂಬುವ ಮಹಾತ್ಮನು ನೀನೇ ॥ ರಾಮ ನೀನೇ ॥ ಈರೇಳು ಜಗದೊಳು ನೀನೇ ॥ ೬ ॥ ಪಂಕಜನಯನ । ಪರಮಪುರುಷ ನೀನೇ। ಅಂಕಿತವುಳ್ಳ ವೆಂಕಟರಮಣ ನೀನೇ ॥ ರಾಮ ನೀನೇ ॥ ರಂಗ ನೀನೇ ॥ ಈರೇಳು ಜಗದೊಳು ನೀನೇ ॥ ೭ ॥

॥ ೪೮ ॥ ರಾಗ, ಕಲ್ಯಾಣಿ [ಧಾಟಿ:- ಏನನುಸುರುವೆನೂ । ಸದ್ಗುರು] ಅಷ್ಟತಾಳ

ಹರಿ ಕೃಷ್ಣ ಎನಬಾರದೇ । ಬಾಯೊಳು ಮುಳ್ಳು । ಮುರಿಸಿಕೊಳ್ಳಲು ತೀರದೇ ॥ ಪಲ್ಲ ॥ ಬರಿದೆ ದೊರಕುವುದೆ ಇಹಪರ ಸುಖಗಳು । ಮರುಳು ಗಳಿರ ಕಾಯ ಸ್ಥಿರವಲ್ಲ ಸಾರಿದೆ ॥ ಹರಿ ಕೃಷ್ಣ ಎನಬಾರದೇ ॥ ಅನು ॥ ತರಳ ಪ್ರಹ್ಲಾವ ತಾನೂ । ತಾತಗೆ ಅಂಜಿ । ಮರುಗಿ ಕರೆಯಲಾತನೂ ॥ ಭರದಿ ಖಂಬದಿ ಬಂದು ದುರುಳನ ಸೀಳಲು । ಭರಿತ ಭಂಡಾರವ ಹರಿಗೆ ಕೊಟ್ಟೀರ್ದನೆ ॥ ಹರಿ ಕೃಷ್ಣ ಎನಬಾರದೇ ॥ ೧ ॥ ತರಳ ಪ್ರಾಯದ ಧ್ರುವನೂ । ವನದಿ ಪುರ । ಹರನ ಧ್ಯಾನಿಸಲಾತನೂ ॥ ತ್ವರಿತದಿಂದಲಿ ಆತನಿರುವ ತಾವಿಗೆ ಬರಲು । ಭರಿತ ಸಂಪದವಿಯು ಹರಿಗೆ ಕೊಟ್ಟೀರ್ದನೆ ॥ ಹರಿ ಕೃಷ್ಣ ಎನಬಾರದೇ ॥ ೨ ॥ ಶೀರೆಯ ಸೆಳೆಯಲಂದೂ । ದ್ರೌಪದಿ ಭಯ । ವೇರಿ ಸ್ತುತಿಸಲಂದೂ ॥ ನಾರಿಮಣಿಗೆ ಅಕ್ಷಯದ ಶಾಲೆಯಾಗಲು । ವಾರಿಜಾಂಬಕಗೆ ಮುಂಗಡವ ಕೊಟ್ಟೀರ್ದಳೆ ॥ ಹರಿ ಕೃಷ್ಣ ಎನಬಾರದೇ ॥ ೩ ॥ ಕಡು ದಾರಿದ್ರದೊಳಿರುವಾ । ಸುದಾಮಗೆ । ಕೊಡಲತಿ ಸಂಪದವಾ ॥ ಕಡಲೊಡೆಯನು ಆತನಲ್ಲಿ ಸಾಲವಗೊಂಡು । ಕೊಡುವೆನೆಂದೆನುತ ಪತ್ರವ ಬರ ಕೊಟ್ಟನೇ ॥ ಹರಿ ಕೃಷ್ಣ ಎನಬಾರದೇ ॥ ೪ ॥ ಬಂದ ದುರಿತವೆಲ್ಲವಾ । ಭಂಗಿಸಿ ಪಾಂಡು । ನಂದನರಿಗೆ ರಾಜ್ಯವಾ ॥ ಚಂದದಿಂದಲಿ ಕೊಟ್ಟು ನರ ನಶ್ವ ಹೊಡಿವಾಗ । ಇಂದಿರಾಪತಿಗೆ ಸಂಬಳವ ಕೊಟ್ಟೀರ್ದರೆ ॥ ಹರಿ ಕೃಷ್ಣ ಎನಬಾರದೆ ॥ ೫ ॥ ಬಲಿ ಚಂದ್ರಹಾಸ ತಾನೂ । ರುಕ್ಮಾಂಗದ । ಚಲುವ ನಕ್ರೂರ ತಾನೂ ॥ ಕಲಿ ಹನುಮ ಭೀಷ್ಮಕ ಮೊದಲಾದ ಭಕತರ । ಒಲಿದು ಸಂಭವಿಸಿದ ಯಾತರ ಮಹಿಮೆಗೆ ॥ ಹರಿ ಕೃಷ್ಣ ಎನಬಾರದೆ ॥ ೬ ॥ ಹರಿ ಕೊಡಲಿಲ್ಲೆನುತಾ । ಮೂಢಾತ್ಮರು । ಬರಿದೆ ದೂರುವರಿ ವ್ಯರ್ಥಾ ॥ ಶರಣೆಂದು ನಾಮವ ಸ್ಮರಿಸಲು ಇಷ್ಟಾರ್ಥ । ಕರುಣಿಸದೀರ್ಪನೆ ಗುರು ವೆಂಕಟೇಶನು ॥ ಹರಿ ಕೃಷ್ಣ ಎನಬಾರದೇ ॥ ೭ ॥

## ॥ ಮಂಗಲಪದ ॥

॥ ೪೯ ॥ ರಾಗ, ಪುನ್ನಾಗವರಾಳಿ [ಧಾಟಿ:- ಘೋರ ನಿಗಮವ ಗೆದ್ದ] ಏಕತಾಳ

ವೆಂಕಟೆರಮಣಗೆ। ಶ್ರೀನಾರಸಿಂಹಗೆ। ಬಿಂದುಮಾಧವನಿಗೆ ಮಂಗಲಂ ॥ ಹರಿ ವೆಂಕಟರಮಣಗೆ ॥ ಪ ॥ ತಮನ ಕೊಲ್ಲುತ ವೇದಾ। ಗಮವ ತಂದಜಗಿತ್ತಾ। ವಿಮಲ ಶ್ರೀಝಷವಿಧ ಮಂಗಲಂ ॥ ಹರಿ ವೆಂಕಟರಮಣಗೆ ॥ ॥ ೧ ॥ ಬೃಂದಾರಕರಿಗೆ ತಾ। ನಂದು ಸುಧೆಯನಿತ್ತಾ। ನಂದ ಕಚ್ಛಪರೂಪ ಮಂಗಲಂ ॥ ಹರಿ ವೆಂಕಟರಮಣಗೆ ॥ ೨ ॥ ಅಸಮ ಹೇಮಾಕ್ಷನ। ದಶನ ದಿಂದಿರಿವುತ। ರಸೆಯ ತಂದಿತ್ತ ಕ್ರೋಡ ಮಂಗಲಂ ॥ ಹರಿ ವೆಂಕಟರಮಣಗೆ ॥ ೩ ॥ ಶೀಳಿ ದೈತ್ಯನ ಕೊಂದ। ಬಾಲನಿಗೊಲಿದ ಕ। ರಾಳ ನೃಸಿಂಹನಿಗೆ ಮಂಗಲಂ ॥ ಹರಿ ವೆಂಕಟರಮಣಗೆ ॥ ೪ ॥ ಪ್ರಕಟ ಬಲಿಯೊಳ್ಬೇಡಿ। ದ್ಯುಕುತ ದಿವ್ಯಶ್ರೀಪದ। ನಖದಿ ಗಂಗೆಯ ಪೆತ್ತವಗೆ ಮಂಗಲಂ ॥ ಹರಿ ವೆಂಕಟರಮಣಗೆ ॥ ೫ ॥ ವಿಗಡ ಕ್ಷತ್ರಿಯರ। ಜಗದಿ ಸಾಧಿಸಿ ಕೊಂದ। ಭೃಗು ಭಾರ್ಗವರಾಮಾ ಮಂಗಲಂ ॥ ಹರಿ ವೆಂಕಟರಮಣಗೆ ॥ ೬ ॥ ಆ ದಶವದನ ಮು। ಖ್ಯಾದಿ ದೈತ್ಯರ ಕೊಂದ। ಕೋದಂಡಧರ ರಾಮಾ ಮಂಗಲಂ ॥ ಹರಿ ವೆಂಕಟರಮಣಗೆ ॥ ೭ ॥ ಭೋಗಿಶಯನ ಮಹಾ। ಸಾಗರಾಲಯವಾಸ। ಗೋಗೋಪಾಲಕಕೃಷ್ಣ ಮಂಗಲಂ ॥ ಹರಿ ವೆಂಕಟರಮಣಗೆ ॥ ೮ ॥ ನಿಪುಣ ಮೋಹನಾಕಾರ। ಸುಫಲಪ್ರದಶರೀರ। ತ್ರಿಪುರಸಂಹರ ಬೌದ್ಧ ಮಂಗಲಂ ॥ ಹರಿ ವೆಂಕಟರಮಣಗೆ ॥ ೯ ॥ ಸುಮನಸಾಸ್ವಯಧೀಶ। ಅಮಿತ ಮ್ಲೇಂಛ ವಿನಾಶ। ವಿಮಲ ಶ್ರೀರೂಪ ಕಲ್ಕ್ಯ ಮಂಗಲಂ ॥ ಹರಿ ವೆಂಕಟರಮಣಗೆ ॥ ॥ ೧೦ ॥ ವರ ಮೂಲಿಕಪುರೇಶ। ಪರಮ ಶ್ರೀವೆಂಕಟೇಶ। ಕರುಣಿ ರಮಾಪತೆ ಮಂಗಲಂ ॥ ಹರಿ ವೆಂಕಟರಮಣಗೆ। ಶ್ರೀನಾರಸಿಂಹಗೆ। ಬಿಂದುಮಾಧವನಿಗೆ ಮಂಗಲಂ ॥ ೧೧ ॥ ಶ್ರೀಃ ॥

॥ ಶ್ರೀವೆಂಕಣ್ಣಕವಿಕೃತ ಪದಗಳು ಸಂಪೂರ್ಣಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಶ್ರೀ ವೆಂಕಣ್ಣ ಕವಿಗಳ ಮೋಹದ ಶಿಷ್ಯರಾದ
# ಕವಿವರ್ಯ ವಾಸುದೇವಪ್ರಭುಕೃತ ಪದಗಳು.

॥ ೫೦ ॥ ರಾಗ, ತೋಡಿ [ಧಾಟಿ:- ಕಾಮಿನೀ ಕರದು ತಾರೇ] ಏಕತಾಳ

ಶ್ರೀಲೋಲ ಪಾಲಿಸೆನ್ನಾ । ದಯದಿ ಗೋ ಗೋ।ಪಾಲ ಹೊಂದಿದೆ ನಾ ನಿನ್ನಾ ॥ ಪಲ್ಲ ॥ ಶೀಲ ಸುಗುಣ ಸುವಿ। ಶಾಲ ಸತ್ಕೀರ್ತಿ ಸುರ। ಜಾಲವಂದಿತ ಕರುಣಾಲವಾಲ ಪ್ರಸನ್ನಾ । ಹೊಂದಿದೆ ಚರಣಾ ॥ ಶ್ರೀಲೋಲ ಪಾಲಿಸೆನ್ನಾ ॥ ಅನುಪಲ್ಲ ॥ ಅಧಿಕ ಪಯಸಂಚಾರಣಾ । ಭಾರವತುಲ । ಕುಧರಧರ ಭೂಪೋಷಣಾ ॥ ಮದಮುಖಾಸುರ ತನು ಹೃದಯವಿದಾರಣ । ಬುಧವಿಧ ನೃಪತತಿಕದನಕರ್ಕಶ ಘನ ॥ ವದನದಶಾರಿಯೆ ಯದುವಂಶೋದ್ಭವ । ವಿದಿತ ದಿಗಂಬರಪ್ರದ ಮ್ಲೇಂಛಾನ್ವಯ । ಉದಧಿದವಾನಲ ಸದಮಲ ವಿಗ್ರಹ । ಮಧುದ್ವಿಷ ಸದ್ಗುಣನಿಧಿ ಸರ್ವೋತ್ತಮ ॥ ಶ್ರೀಲೋಲ ಪಾಲಿಸೆನ್ನಾ ॥ ೧ ॥ ಎಸೆವ ಗೋಕುಲದಿ ಪುಟ್ಟೀ । ಪೂತನಿಸ್ತನ। ವಿಷಸೇವಿಸಿದೆಯ ಮೆಟ್ಟೀ ॥ ಅಸುವನೀಗಿಸಿ ಭಂಡಿ । ಮುಸುಡಿಗೊದದು ಕೊಂದು । ಅಸಮ ವಾತಾಸುರನ ನಸುವಾ ತೊಲಗಿಸುತ ॥ ಎಸದಳ ಸಿಗಿದು ತುಂಡೆಸಗುತ ಬಕನನು । ವೃಷ ಧೇನುಕಾದ್ಯರ ಬಸುರ ಬಗಿದು ಬಲು । ಶಿಶುತನದೋರಲು ಬಿಸಜಾಕ್ಷಿಯರಲಿ । ಗುಸುಕಿ ಪಾಲ್ಬೆಣ್ಣೆಯ ಮೊಸರುಂಡಾಡಿದ ॥ ಶ್ರೀಲೋಲ ಪಾಲಿಸೆನ್ನಾ ॥ ॥ ೨ ॥ ಗೆಳೆಯರೊಡನೆ ಕೂಡುತ್ತಾ । ವೃಂದಾವನದಿ । ಕೊಳಲೂದಿ ಪಶು ಕಾಯುತ್ತಾ ॥ ತಲೆಗೆ ಹೀಲಿಯು ಸುತ್ತಿ ಮೆಲುವ ಕೂಳಿಯ ಬುತ್ತಿ । ಬಳಗ ಗೋವಳರೆಂದು ವಲಿವವರ ರಕ್ಷಿಸೆ ॥ ಬಳಿಕ ಕಾಳಿಂದಿಯ ತಳುಕಿ ಧುಮುಕಿ ಫಣಿ। ಗಳಡಿ ಕುಣಿದು ಮನಸಲಿಸಿ ಅಕ್ರೂರಗೆ । ಜಲದೊಳು ವಿಶ್ವವ ಕಳೆದು ತೋರಿಸಲು । ಗೆಲವಿಲಿ ಮಥುರೆಯ ವಳಿಯಕ್ಕೈದಿದ ॥ ಶ್ರೀಲೋಲ ಪಾಲಿಸೆನ್ನಾ ॥ ೩ ॥ ದಾರಿಯೋಳ್ ರಜಕನನ್ನು । ಕಂಠವ ನಖದಿಂ । ಚೀರೆ ಮುಂದೆ ಚಿಪ್ಪಿಗನು ॥ ಭೋರನೆರಡಂಗಿಯ ಚಾರುಚರಣಕ್ಕಿಟ್ಟು । ಆರಾಧಿಸಲು ದಯದೋರಿ ಸಾರೂಪ್ಯವಿತ್ತು ॥ ಸಾರಿ ಮುಂದಕೆ ಮಾಲೆಗಾರಗೊಲಿದು ಮುರು । ಟೇರಿದ ಕುಬುಜೆಯುದ್ಧಾರವ ಗೈವುತ । ಭಾರಿ ಧನುವ ಮುರಿತೂರಿ ಗಜವ ಚಾ। ಣೂರಮುಷ್ಟಿಕರೆಡೆ ಘೋರುಗಳದ ಹರಿ॥ ಶ್ರೀಲೋಲ ಪಾಲಿಸೆನ್ನಾ॥ ೪ ॥ ಮಾಣದೆ ಕಂಸನ ಕೊಂದು । ಆ ಪಟ್ಟ ಉಗ್ರ।ಸೇನಗೀವುತಲಂದೂ ॥ ತ್ರಾಣಿ

ಮುರನರಕ ದಾನವ ಹಂಸಡಿಂಬಿಕ। ಚಾಣ ಚೈದ್ಯಾದಿ ಖಳರ ಗೋಣವ ಮುರಿ
ದಿತ್ತು ॥ ಕ್ಷೋಣಿಯ ಭಾರವು ಮಾಣಿಸಿ ನರನಿಗೆ । ಪ್ರಾಣಸಖಾಯುವು
ಕಾಣಿಸಿ ಸಾರಥಿ । ನೀನೆಯಾಗುತ ಕುರುಸೇನೆಯ ಸವರಿಸಿ । ಏನರಿಗನು
ದಿನ ಮಾನಿಪ ಸ್ವಾಮಿ॥ ಶ್ರೀಲೋಲ ಪಾಲಿಸೆನ್ನಾ॥ ೫ ॥ ಧ್ರುವ ರುಕ್ಮಾಂಗದ
ಸಂಗಡಾ। ಧರ್ಮಾಂಗದ ಭೂ। ಏಜ ಸುದಾಮ ಪ್ರಹಲ್ಲಾದಾ ॥ ಪವನಜಾ
ವಿೂಳಕ್ರೂರವನಿಪ ಹರಿಶ್ಚಂದ್ರ । ನವದಳಾಂಬರೀಷ ಜವನಾತ್ಮಭವ ಶೇಷ ॥
ತವಕಿ ಬಲಿಯು ಉದ್ಧವ ದ್ರುಪದಜೆ ಮುನ । ಕವಲಿಲ್ಲದೆ ಇತ್ತ ತವದಾಶ್ರಿತ
ರನು । ಜವದಿ ಸಲಹಿಕೊಂಡವ ನೀನಲ್ಲವೆ । ಭುವನದೊಡೆಯ ಅಜಭವಕಾ
ಧಾರನೇ ॥ ಶ್ರೀಲೋಲ ಪಾಲಿಸೆನ್ನಾ ॥ ೬ ॥ ವರಕಲಿಯುಗದ ಜನ ।
ನುದ್ಧರಿಸಲು । ಕರೆದು ಮಾರುತ ಸುತನಾ ॥ ತೆರಳು ದಕ್ಷಿಣ ಹಿಮಕರ
ನಾಮ ಪುರಕವ । ತರಿಸಿಕೊಂಡಿರು ಹಿಂತೆ ಬರುವೆ ತಾನೆಂದಾಜ್ಞೆಯ ॥
ಶಿರದಿ ಧರಿಸಿ ಬಂದಿರುತ ಮಧ್ಯಗೃಹ । ವರಬುಧನರಿತಾ ನರನಾಗಿ ಜನಿಸಿ ।
ಗುರು ಮಧ್ವಾಚಾರ್ಯರೆಂದರಿಸುತಾಶ್ರಮವ ಈ। ಪರಿ ಯಸಗಿದೆ ಸತ್ಕರುಣಾಂ
ಭೋನಿಧಿ ॥ ಶ್ರೀಲೋಲ ಪಾಲಿಸೆನ್ನಾ ॥ ೭ ॥ ಕಡಲಾ ದ್ವಾರಕಿಯಿಂದಲೀ ।
ಗೋಪೀ ಚಂದನದೊ । ಳೊಡಗೂಡಿ ಹರುಷದಲೀ ॥ ಪಡಗನೇರುತ ಬಂದು
ಉಡುಪೀ ರಜತಪೀಠ । ವಡರ ಊರಿಸಿದ ಕುಲದೊಡೆಯ ಮಧ್ವಾಚಾರ್ಯರು ॥
ಕಡು ಭಕ್ತಿಯೊಳೆರಡಡಿಗೆರಗುತ ಕೈ । ಪಿಡಿದು ರತ್ನಾಸನಗೊಡುತ ಸ್ಥಾಪನೆ
ಗೈ । ದೊಡನೆ ನಿನ್ನರ್ಚನೆಗಿಡುತ ನಡಸಲಿಷ್ಟ । ಏಡುತಾಶ್ರಮಗಳ ವಡಿಸಿದ
ಮಹಿಮನೆ ॥ ಶ್ರೀಲೋಲ ಪಾಲಿಸೆನ್ನಾ ॥ ೮ ॥ ಕಡೆಗಿಟ್ಟದ್ವೈತ ಮತ ।
ಮೋಹಕ ಶಾಸ್ತ್ರ । ಕೆಡಹೀ ಶ್ರೀಮಧ್ವಮತ ॥ ಹಿಡಿಸಿ ಏಕೋ ವಿಷ್ಣು
ಒಡೆಯ ನಿಶ್ಚಯವೆಂದು । ಹೊಡಿಸಿ ಶಾಸ್ತ್ರಡಂಗುರ ಬಿಡದಷ್ಟಯತಿ
ಗಳಿಗೆ ॥ ಕೊಡುತ ಕಮಂಡಲ ದಂಡಾಶ್ರಮ ಸಹಿ। ತೊಡನೆ ಶ್ರೀಹರಿ ನಿನ್ನಡಿ
ಗಳ ಪೂಜೆಯ । ನಡೆಸಿ ನೈವೇದ್ಯವ ಷಡುರಸಾನ್ನದಿ ಬುಧ । ಪಡೆಗಳ
ಸಾಸಿರ ಕಡೆಗೆಸಗುಣಿಸುವೆ ॥ ಶ್ರೀಲೋಲ ಪಾಲಿಸೆನ್ನಾ ॥ ೯ ॥ ವರ ಅಷ್ಟ
ಮಠಾಧಿಪರು । ಭೂಸುರರಿಂಗೆ । ಗುರುಗಳಾಗಿ ಮೆರೆವರೂ ॥ ಎರಡು
ವತ್ಸರಕ್ಕೊರ್ವ ಹರಿ ನಿನ್ನ ಪೂಜಿಸು । ತ್ತಿರುತ ರಥದಿ ಮಕರ ಮಹೋ
ತ್ಸವಂಗಳ ॥ ವಿರಚಿಸಿ ನಡೆಸುವ ಪರಿ ವೈಕುಂಠದ । ಸಿರಿ ಸಮ ವೈಭವ
ಉರಗರಾಜನಿಂ । ಗರಿದು ಸ್ತುತಿಸುವಡೆ ಸುರನರಭುಜಗರ । ಪೊರವೆ ಎನ್ನೋ

ರ್ವನ ಕರುಣದಿಂ ಪಾಲಿಸೋ ॥ ಶ್ರೀಲೋಲ ಪಾಲಿಸೆನ್ನಾ ॥ ೧೦ ॥ ಪರಮ ದ್ವಾರಕಿಯು ಇದು । ರಜತಪೀಠ । ಪುರದಿ ಸುಸ್ಥಿರದಿ ನಿಂದೂ ॥ ಶರಣಜನ ರಿಷ್ಟಾರ್ಥ ಕರುಣಿಸಿ ಸಲಹುವ । ಗುರು ಸಾರ್ವಭೌಮ ಜಗದ್ಗುರು ಮಧ್ವಾಚಾರ್ಯರ ॥ ಕರದಿ ಪ್ರತಿಷ್ಠೆಯ ವಿರಚಿಸಿಕೊಂಡಿಹ । ಗಿರಿ ಗೋವರ್ಧನಧರ ವಿಶ್ವಂಭರ । ಹರಿ ಸರ್ವೋತ್ತಮ ವರದ ರಮಾಧವ । ನಿರತ ಸಲಹೊ ಶುಭಕರನೆ ಶ್ರೀಕೃಷ್ಣನೆ ॥ ಶ್ರೀಲೋಲ ಪಾಲಿಸೆನ್ನಾ । ದಯದಿ ಗೋಗೋ । ಪಾಲ ಹೊಂದಿದೆ ನಾ ನಿನ್ನಾ ॥ ೧೧ ॥ ಶ್ರೀ ॥

॥ ೫೧ ॥ ರಾಗ, ಭೈರವಿ [ಧಾಟಿ:- ಸಂದಿಶ್ಚೆಯು ಪ್ರಾಯವು] ತ್ರಿಪುಟತಾಳ

ವೆಂಕಟೇಶಾ । ಜಯ ನಮೋ । ವೆಂಕಟೇಶಾ ॥ ಪಲ್ಲ ॥ ವೆಂಕಟೇಶನೆ ಎನಗೊದಗಿದೀ ಸಂಕಟವು ಪರಿಹರಿಸು ಬೇಗದಿ ॥ ವೆಂಕಟೇಶ ॥ ಅನುಪಲ್ಲ ॥ ಘೋರತರ ಸಂಸಾರ ಶರಧಿಯ । ಪಾರಗಾಣೆನು ಮೊದಲೆ ಅದರೊಳು । ಕ್ರೂರಋಣ ದುರಿತದ ಲತೆಗಳು ಶ । ರೀರಕದು ವೇಷ್ಟಿಸುತಲುರುಳ್ವೆನು ॥ ಭಾರಿ ಮುಗುಬ್ಬಸವ ಅದನಿ । ನ್ನ್ಯಾರಿಗೊರಪಡೆ ಕ್ಯಾವರ್ಕೈ ಹೊಣೆ। ಗಾರ ನೀನಲ್ಲವೆ ಸಲಹೊ ಎ । ನ್ನಾರ ಭಾರವು ನಿನ್ನದೈಸಲೆ ॥ ವೆಂಕಟೇಶಾ ॥ ೧ ॥ ಮೊದಲು ಜನ್ಮಾಂತರದಿ ನಾ ಮಾ । ಡಿದ ಋಣವ ಸಾಧಿಸಲು ಜನನಿಯ । ಉದರದಲಿ ಮಲಮೂತ್ರ ಮಾಂಸವು । ರುಧಿರ ಕ್ರಿಮಿ ಕದಡೀರ್ಪುದದರೊಳು॥ಮುದಡಿ ಕೈಕಾಲ್ಸುಡಿಸಿ ಪೊಲಸಿನೊಳ್ । ಹುದುಗಿ ತ್ರೈಶತ ದಿವಸ ಪರಿಯಂ।ತರದಿ ನನುಭವಿಸಿದ ವ್ಯಥೆಯ ಆ । ಪದನಗಳು ನಿನಗದುವೆ ಗೋಚರ ॥ ವೆಂಕಟೇಶಾ ॥ ೨ ॥ ಪೊಡವಿಯೊಳಗುದ್ಭವಿಸಿದಾಕ್ಷಣ । ಬಿಡದೆ ಕ್ಷುಧೆ ಪೀಡ್ಸುತಲಳಲ್ಪರೆ । ಪಡಲ ಬೇನೆ ಈ ಮಗುವಿಗೆನ್ನು । ತ್ತಡಿಗಡಿಗೆ ಮೂಗೊತ್ತಿ ಕೈಕಾಲ್ ॥ ಪಿಡಿದು ಮದ್ದನೆ ಕುಡಿಸುವರು ಮೈ।ಯಡಗಿರುವೆ ಸುಶಿಕಡಿಯೆ ಮರುಗಿದರ್ । ಹಿಡಿವಳ್ಳಿ ತ್ಯಾ ಮೊಲೆಯ ಬ್ಯಾಗೆ ಆ । ಕಡು ಭವಣೆ ನಿನಗರಿಕೆಯ್ಯೆ ॥ ಜಯ ವೆಂಕಟೇಶಾ ॥ ೩ ॥ ತರಹರಿಸಿ ತರಳತ್ವವನು ಬರೆ । ಮರುಳರಾದಿ ದಿನಕಳಿದೆ ಸ್ಮರ । ವಿರಹ ಬಾಧಿಸೆ ಪ್ರಾಯದಿಂ ಮತಿ । ಮರದು ನಿನ್ನನು ಸ್ಮರಿಸದಾದೆನು ॥ ಪಿರಿದನದರಿಂದೀಗ ಕ್ಲೇಶದಿ । ಕರಗುವೆನು ಮನವಿರವ ನೀನದ । ನರಿವೆ ಸಚರಾಚರಭರಿತ ಪರಿ । ಹರಿಸುತೆನ್ನನ ವರತ ಪಾಲಿಸೋ ॥ ವೆಂಕಟೇಶಾ ॥ ೪ ॥ ಮರವೆ ನಿನ್ನನು ಸುಖದ ವೇಳ್ಯದಿ । ಸ್ಮರಿಪೆ ಆಸತ್ತಿನೊಳು ಜಡಮಃ । ಬರಡ ದುಷ್ಟಾಧಮನು ಅತಿಮದ ।

ಭರಿತ ನಾನೆಲೊ ದೇವ ವಿಶ್ವಂ ॥ ಭರನೆ ಎಣಿಸದಿರೆನ್ನ ಶತಸಾ। ವಿರ ಅನಂತಪರಾಧ ಕ್ಷಮಿಸುತ । ಕರುಣಿಸನ್ನಿಷ್ಟಾರ್ಥ ಭಕ್ತರ । ಪೊರೆವ ಬಿರಿದುಂಟಾಗಿ ರಕ್ಷಿಸು ॥ ವೆಂಕಟೇಶಾ ॥ ೫ ॥ ಬಿಸಜನಾಭನೆ ನಿನ್ನ ನಾ ಧ್ಯಾ । ನಿಸದ ಮೊದಲಿನ ತಪ್ಪ ನೋಳ್ಪರೆ । ಬಸುರೊಳಗೆ ಶಿಶು ಪದಿ ಮ್ಮೈಯ್ಯನು । ಮಸಗಿದೊಡೆ ತ್ಯಾ ಯಾರೊಡನೆ ಕೋಪಿಸುವಳೆಲೊ ಜಗದೀಶ ಮನ್ಮನಸಿನ ದಪೇಕ್ಷೆಯ ನೀಗ ಕರುಣಿಸು । ಪಶುಪತೀ ಬ್ರಹ್ಮಾಮರಾಳಿ ಪ್ರಸರಪಾಲಕ ನೀನಹುದೆಲ್ಲೈ ॥ ವೆಂಕಟೇಶಾ ಜಯ ॥ ೬ ॥ ಉನ್ನುವೆನಾ ಪೂರ್ವಾರ್ಜಿತವ ಎಂದೆನುತ ಭಾವಿಸಲೆಂತು ಎನ್ನಯ । ತನುಮನವು ಸಕಲೇಂದ್ರಿಯ ವಿಷಯಗ । ಳಿನಿತು ನಿನ್ನಾಧೀನವಲ್ಲವೆ ॥ ಎನಗದೆಲ್ಲಿ ಸ್ವತಂತ್ರ ಕರುಣಾ । ವನಧಿ ಪಾಲಿಸು ನೀ ಸಮರ್ಥನೆ । ಅಣುವೊದಲು ಚತುರಾಸ್ಯ ಪರಿಯಂ । ತೆಣಿಸಿ ಸೂತ್ರದಿ ಕುಣಿಸುವಾತನು ॥ ವೆಂಕಟೇಶಾ ॥ ೭ ॥ ಜನಿತದಾವಿ ಮಧ್ವಾಂತ ಪರಿಯಂ । ತೆಣಿಸಿದರೆ ಹುರುಳಿಲ್ಲ ಕಾನನ । ಕ್ಕಣುಗುರುದ ಸುಳಿವಂತೆ ಈ ಭವ । ವನು ಜಯಿಸಿ ಪಾವನನಹದೆ ತವ ॥ ಘನ ಪದಾಂಬುಜ ನೆನಸಿ ದೃಷ್ಟಿಯಿಂ । ತೆನಿತು ನೀ ಪ್ರೇರಿಸಿದ ಬುದ್ಧಿಯ । ನೆಣಿಸುವವ ನಾ ಸ್ಮರಿಸುವೆನು ಹೇ। ವನಜನಾಭ ನಮೋ ನಮೋ ಜಯ ॥ ವೆಂಕಟೇಶಾ ॥ ೮ ॥ ಒಲಿಯುಲಿಲ್ಲವೆ ದೇವ ನೀ ಮು । ನ್ನಿಲಿ ಪ್ರಹಲ್ಲಾದಂಬರೀಷಜ । ಮಿಳ ರುಕ್ಮಾಂಗದ ಧ್ರುವ ಗಜೇಂದ್ರಗೆ । ಬಲಿ ವಿಭೀಷಣಕ್ರೂರರುದ್ಧವ ॥ ಕಲಿ ವಿಜಯ ದ್ರುಪದಜೆ ಸುದಾಮ ಸು । ಫಲ ಭಕತ ಸಂಜಯಕೆ ಕರುಣಾ । ಜಲಧಿ ತವಗೆನ್ನಳಲು ಗೋಚರ । ಸಲಿಸುವಡೆ ವಿರಿದಿಲ್ಲ ನಿನಗದು ॥ ವೆಂಕಟೇಶಾ ॥ ೯ ॥ ಶ್ರುತಿಗಳನು ಅಜಗಿತ್ತೆ ಸುಧೆ ಸುರ । ಪತಿಗೆರದೆ ಭೂಮಿಯನುಳುಹಿ ಕೊ । ಗುತ ಕರದ ಅರ್ಭಕನ ಸಲಹುತ। ಸತತ ಬಲಿದ್ವಾರವನು ಕ್ಯಾವುತ ॥ ಪಿತನಸುಜ್ಞೆಯ ಸಲಿಸಿ ಭಾಸ್ಕರ । ಸುತಗೊಲಿದು ಗೋಕುಲವ ರಕ್ಷಿಸಿ । ವ್ರತೆಯರಿಂಗೆ ಕೈಗೊಟ್ಟು ಹಯವೇ । ರುತ ತ್ರಿಜಗ ಪಾಲಿಸಿದುದಿಲ್ಲವೆ ॥ ವೆಂಕಟೇಶಾ ॥ ೧೦ ॥ ನೀನೆ ಸರ್ವವ್ಯಾಪಕನು ಸರ್ವಜ್ಞ। ನೀನೆ ಸರ್ವಜಗತ್ ಪ್ರವರ್ತಕ । ನೀನೆ ಸರ್ವಾಧಾರವಿಗ್ರಹ । ನೀನೆ ಸರ್ವಾಶ್ರಿತರನುಗ್ರಹ ॥ ನೀನೆ ಸರ್ವೇಶ್ವರ ದಯಾನಿಧಿ । ನೀನಖಿಳ ಬ್ರಹ್ಮಾಂಡನಾಯಕ । ............... ........ .................. ॥ ವೆಂಕಟೇಶಾ ॥ ೧೧ ॥ ಜಯ ನಮೋ ಜಗದೀಶ ಜಗದಾ । ಶ್ರಯ ನಮೋ ಗೋವಿಂದ ಹರಿಕೀ । ರ್ತಯ ನಮೋ ಮತ್ಸರ್ವ

ಭಾಗ್ಯೋ। ಪಯು ನಮೋ ಜಯಪ್ರದ ಏಪರ್ಥನ ॥ ಪ್ರಿಯು ನಮೋ ಸದ್ಭಕ್ತ ಲೌಘ ನಿ। ಭರ್ಯು ನಮೋ·· ··········· ··········· · ·· ············

·········ನಮೋ ಸಮೊ ರಕ್ಷಿಸ್ಯೆ ಹರಿ ॥ ವೆಂಕಟೇಶಾ ॥ ೧೨ ॥ ಸತ್ವ ರಜತಮು ಗುಣಕೆ ಏಕೋ । ಏಸ್ನು ನೀನೇ ಧಿಟವೆನುತ ಶ್ರುತಿ । ಮೊತ್ತ ಉಸುರುತಲಿದೆ ಪರಾತ್ಪರ । ಪಸ್ತು ನಿಸ್ನಸು ದೃಢದಿ ಸಾ ಭಯ ॥ ಭಕ್ತಿಯಲಿ ಧ್ಯಾನಿಪಡೆ ನಾಸೇನ್ । ಶಕ್ತನೇ ನೀ ದಯಂದಿ ಎನ್ನಿ । ಸ್ವಾರ್ಥ ತಿಳಿದೀಕ್ಷಣ ಸಲಿಸು ಪಟ। ಭಕ್ತಸ್ಥಿರ ವೆಂಕಟ ರಮಾಪತೆ ॥ ವೆಂಕಟೇಶಾ ॥ ೧೩ ॥ಶ್ರೀ ॥

॥ ೫೨ ॥ ರಾಗ, ಗೌಳಪಂತು [ಧಾಟಿ:- ನಾತಿಸಲೆನ್ನಳವೆ ಕೀರ್ತನೆಯಾ] ಆದಿತಾಳ

ಕರುಣಿಸೊ ಭಾಗ್ಯಪ್ರದಾಯಕಾ ॥ ಶ್ರೀವೇಂಕಟನಾಯಕ ॥ ಕರುಣಿಸೊ ॥ ಪಲ್ಲ ॥ ಕರುಣಿಸು ವೇದಾಗಮ ವೇದ್ಯಾ । ಶರಣಾಗತ ಜನಕಸನಾಶ್ರಿತಸಾಧ್ಯಾ। ಸುರುಚಿರ ಪೀತಾಂಬರ ಶಂಖ ಸುದರ್ಶನ ಪದ್ಮಗದಾಧರ ಇಷ್ಟಾರ್ಥವ ನೀ ॥ ಕರುಣಿಸೊ ಭಾಗ್ಯಪ್ರದಾಯಕಾ ॥ ಅ. ಪ. ॥ ಅತುಲಿತ ಮಹಿಮಾರ್ಣವ ಸುಚರಿತ್ರಾ । ಅತಿ ಸೌಂದರ ಸಲಿಲಜದಳ ನೇತ್ರಾ । ಶಿತಕಂಠಾದಿ ವಿಬುಧನುತಿ ಪಾತ್ರಾ । ದಿತಿಜಾರಣ್ಯ ಪ್ರಭಂಜನ ಮಿತ್ರಾ ॥ ಸತತಾನಂದ ಮನೋಹರಾ । ಸದಯಾನಿಧಿವಿಗ್ರಹ। ಪತಿತಪಾವನ ಶ್ರೀವರಾ ॥ ಶ್ವೇತಾಸನವರ ಶಾಶ್ವತ ವೈಕುಂಠಪುರೀಶ್ವರಾ । ತ್ರೈಜಗದೋದ್ಧಾರಾ ॥ ವ್ಯತಿತಾಯುತ ನಾಥ ಕ್ಷಮ ಧಾಮಾ । ಚತುರಾಸ್ಯ ವಾಚೋಸ್ಪತಿ ಮುಖ್ಯ ನಿರ್ಜರ ಸಾರ್ವಭೌಮಾ। ದಾರಿದ್ರ ಧ್ವಂಸಾಮಿತ ಪುಣ್ಯ ಸತ್ಫಲ ಸಂಪೂರಣ ಕಾಮಾ। ಕಲುಶೌಘವಿರಾಮಾ ॥ ಹಿತಕರ ಸೃಷ್ಟಿ ಸ್ಥಿತಿ ಲಯ ಸುಗುಣಾನ್ವಿತ ಏಕೋ ವಿಸ್ನು ಸ್ವತೇವಾ । ಸೂನೃತಾಮೃತ ಭಾಶಿತ ಸಂಜೀವಾ । ದುಷ್ಕೃತವರ್ಜಿತ ಮಹಾನುಭಾವಾ। ಪ್ರೀತಯ ಪ್ರೀತಿಮಾಶ್ರಿತಜನ ವಾಂಛಿತ। ಶ್ರುತಿ ಸ್ಮೃತಿತತಿ ಸಂಸ್ತುತ ರತಿಪತಿ ಪಿತ ॥ ಕರುಣಿಸೊ ॥ ೧ ॥ ಮಕರಕುಂಡಲ ಧೃತಕೌಸ್ತುಭಮಾಲಾ। ಯುಕುತ ಲಲಾಟ ತ್ರಿನಾಮ ವಿಶಾಲಾ । ಶಕಟ ಪ್ರಲಂಭಾಸುರ ಭಯಕಾಲಾ । ಭಕಶುಂಡ ವಿದಾರಣ ಗುಣಶೀಲಾ ॥ ಪ್ರಕಟ ಗೋಕುಲೋದ್ಧರಕಾ । ಸಚರಾಚರ ಜೀವಾ। ನಿಖಿಳ ವಿಶ್ವಾಂಡ ಪ್ರೇರಕಾ । ನಿಯತಾಶ್ರಿತವರ ಸದ್ಭಕ್ತ ಪ್ರೇಮ ಸಂಸಾರಿಕಾ । ಆಮಯ ಪರಿಹಾರಕ । ಸಕಲಂತರ್ಯಾಮಿ ಶಾಶ್ವತ ಫಲದೀಕ್ಷಾ । ಅಕ್ರೂರ ಮುಖ್ಯಾನಕ ದುಂದುಭಿ

ಯುದ್ಧವ ಯದು ಸಂಚಯರಕ್ಷಾ । ಗಂಗಾಸುತ ವಿದುರಾಟಕ ವಾಂಛಿತ ಶೌರ್ಯಾನ್ವಿತ ಪಾಂಡವ ಪಕ್ಷಾ । ದುರ್ಯೋಧನ ಶಿಕ್ಷಾ । ರುಕುಮಾಂಗದ ಬಲಿಯಕುಟಿಲ ಧ್ರುವ ಧಾರ್ಮಿಕ ಪ್ರಹಲ್ಲಾದ ವಿನುತ ಶ್ರೀಶಾ । ನಾಟಕ ಧರ ಅಪರಿಮಿತ ವಿಲಾಸಾ । ಭಾವಿಕ ಸಜ್ಜನ ಮಾನಸ ವಾಸಾ ॥ ವಿಕಸಿತ ಕಮಲಾಂಬಕ ನಾರಾಯಣ । ಪ್ರಕೃತಿ ವಿಕೃತಿ ಗುಣ ಕಲಿತ ಜಗನ್ಮಯ ॥ ಕರುಣಿಸೊ ॥ ೨ ॥ ಉತ್ತಮ ಪಯ ಸಂಚಾರಣಧೀರಾ । ಗೋತ್ರಧರಾ ಮೃತ ಮಥನ ವಿಲಾಸಾ । ಸತ್ಯ ಕ್ಷಿತಿಚೋರಾಸುರದ್ವೇಷಾ । ಭಕ್ತೋದ್ಧಾರ ದ್ವಯಾಕೃತಿವೇಷಾ ॥ ಸತ್ವಾಧಿಕ ತ್ರಿವಿಕ್ರಮಾ । ಬಲಿಸಂಚಿತ ಫಲಪ್ರದ ಯುಕ್ತಾರಣ್ಯ ಶೋಭಾಶ್ರಮಾ । ಪ್ಲವಗಾಪ್ತಯ ಪಾಲಕ ನಿತ್ಯಾನಂದ ಕಲ್ಪ ದ್ರುಮಾ । ರಾಧಾಮಿತ ಪ್ರೇಮಾ । ರಕ್ತಾಂಗ ಪ್ರಸಿದ್ಧ ಸುಚಿರವ್ರಾತಾ । ಸಪ್ತಿಸಿತಾರೂಢ ಪ್ರತ್ಯಕ್ಷಾ । ಖಡ್ಗಾಯುಧಧರ ಪ್ರಖ್ಯಾತಾ । ವರ ಮಂಗಲ ಪುರ ವಟಭತ್ರಾಧಿಪ। ಶುಭಕರ ಶ್ರೀವೆಂಕಟನಾಥಾ । ಅನಶ್ರಿತ ಮಮ ದಾತಾ। ಸತ್ಯಾತ್ಮಕ ಪುರುಷೋತ್ತಮ ಭವಜಲ। ಉತ್ತಾರಣ ನಾಮ ವಿಶಾಲಾ । ಶ್ರುತಿ ಶಾಸ್ತ್ರ ಸುಗೀತಾಗಮ ಲೋಲಾ । ತಾಪತ್ರಯ ಹರ ಸದ್ಗುಣಶೀಲಾ ॥ ಸುತ್ರಾಮ ವಿನುತ ಚಿತ್ರ ವಿಚಿತ್ರ ಚರಿತ್ರ ಸುಪಾತ್ರ ಪವಿತ್ರ ರಮಾಪತೇ ॥ ಕರುಣಿಸೋ ॥ ೩ ॥ ಶ್ರೀ೪ ॥

॥ ೫೩ ॥ ರಾಗ, ಅಸಾವೇರಿ [ಧಾಟಿ:- ಪಾಲಿಸ ಮಹಾದೇವಿ] ತ್ರಿವುಡೆತಾಳ

ಪಾಹಿ ಶ್ರೀ ಮಹಾದೇವಾ । ಶ್ರೀಮಹಾದೇವ ನಿ। ಸ್ಸೀಮ ಭಕ್ತಸುಪ್ರೇಮಾ ॥ಪಾಹಿ ಶ್ರೀ ॥ಪಲ್ಲ॥ ಕಾಮಿತಾರ್ಥಪ್ರದಾತಾ। ನಿರ್ಜರ ಸಾರ್ವ। ಭೌಮ ಶಂಭು ಸನಾಥಾ । ಕೀರ್ತಿ ವಿಖ್ಯಾತಾ । ಸೋಮಾರ್ಕರುಚಿರಾಮಿತಾ ॥ ವಿಭ್ರಾಜಿತ ॥ ವ್ಯೋಮಕೇಶ ಸನಾಮ ಘನರಣ । ಭೀಮ ಮುಖ ನಿರ್ಧೂಮ ದಕ್ಷ ವಿ । ರಾಮ ಸದ್ಗುಣಧಾಮ ನಿಗಮ । ಸ್ತೋಮನುತ ಸುತ್ರಾಮ ಪೂಜಿತ ॥ ಪಾಹಿ ಶ್ರೀ ॥ ೧ ॥ ಸ್ಥೂಲಗಜ್ಜವಿಭೀಕರಾಳ ಪಂಚವಕ್ತ್ರ ವಿಶಾಲ ಶೋಭ ವಿಶೇಷಾ । ನಿತ್ಯಾನಂದ । ನೀಲಕಂಠ ಮಹೇಶಾ । ಕೌಶಿಕ ಮಾನಿ । ಜಾಲ ಬ್ರಹ್ಮಾಂಡಧೀಶಾ ॥ ರಜತಾದ್ರಿವಾಸಾ ॥ ಕಾಲಕಾಲ ತ್ರಿಶೂಲ ಖಡ್ಗಕಪಾಲ ಗೋನಸಮಾಲಧೃತ ಋಷಿ । ಗಾಲವಾರ್ಚಿತ ಶೈಲ ಜಾಧವ । ಲೀಲ ತ್ರಿಜಗತ್ಪಾಲ ಗುಣನಿಧೆ ॥ ಪಾಹಿ ಶ್ರೀ ॥ ೨ ॥ ಪಟನಿನಾದ ವಿಲೋಲ ನಟನಾನಂದ ಸುಶೀಲ ಘಟಿತ ರೌದ್ರಾಕಾರಾ । ಅಘೋರ

ಸಂ । ಕಟ ಕ್ಲೇಶೌಘ ಕುಠಾರ । ಮಹೋಗ್ರ ಉತ್ಕಟ ನಿಃತಪಮಿತಹಾರಾ ॥ ತ್ರಿಭುವನೋದ್ಧಾರಾ ॥ ಪಟುತರರಾಜಿತ ನಿಟಿಲ ನಯನ ಸು । ಭಟ ಮಥನ ದ್ವಿಜ ಪಟಲವಿಕ್ರಮು । ಕುಟಿಲ ಶೂನ್ಯಪ್ರ ಕಟಕಲುಷ ಭಯ।ಕಟಕಮಥನ ಧೂರ್ಜಟಿ ಜಟಾಧರ ॥ ಪಾಹಿ ಶ್ರೀ ॥ ೩ ॥ ಭೃಂಗೀಶಪ್ರಿಯ ಸಾಧುಸಂಗ ಸುಸ್ಥಾವರ ಜಂಗಮಾಶ್ರಿತ ಪಾದಾ । ಭವದೂರ ಭ। ಸ್ಮಾಂಗ ವಿಶ್ವವಿನೋದಾ। ಪ್ರಮಥಾದಿ ಭೂ। ತಂಗಣ ತಮ ಪ್ರಸಾದಾ ॥ ವೇದಾಂತ ವೇದ್ಯಾ ॥ ತುಂಗ ಶೌರ್ಯ ಮತಂಗ ವಸನ ಕು । ರಂಗಧರ ಧೃತ ಮಂಗಳಾಬ್ಧಿ ಅ । ಭಂಗ ವೃಷಭ ತುರಂಗವಮಿತ ಕೃ। ಪಾಂಗ ದಿವ್ಯ ಸುಲಿಂಗ ಶಾಶ್ವತ ॥ ಪಾಹಿ ಶ್ರೀ ॥ ೪ ॥ ಸತತ ಗೋಕರ್ಣ ಪತ್ತಣವಾಸ ಮನ್ಮನೋಹಿತ ಮಹಾಬಲೇಶ ದೇವಾ । ಸರ್ವ್ವಸ್ವ । ಮತಮುದ್ಧಾರ ಸಂಜೀವಾ । ಅಖಿಲೇಶಾ ಅಪ್ರತಿಮ ಮಹಾನುಭಾವಾ ॥ ದೇವಾದಿದೇವಾ ॥ ಶ್ರುತಿ ಸ್ಮೃತ್ಯಾಗಮ ತತಿವಿನುತ ಸುಲ । ಲಿತ ಕಥನ ಮತಿಯುತ ರಮಾಪತಿ । ಯತುಳ ಪ್ರಿಯ ಸುಂಗತ ಕೃಪಾರ್ಣವ । ಪತಿತ ಜನವಾಂಛಿತ ಸದಾಶಿವ ॥ ಪಾಹಿ ಶ್ರೀ ಮಹಾದೇವಾ ॥ ॥ ೫ ॥ ಶ್ರೀ೪ ॥

॥ ೫೪ ॥ ರಾಗ. ಕಾಬೋಧಿ [ಪಾಲಿಸೊ ಮಹಾದೇವಾ । ] ತ್ರಿವುಡೆತಾಳ

ಪಾಲಿಸೆ ಮಹಾದೇವೀ । ಲೋಕ ಸಂಜೀವೀ । ಪಾಲಿಸೆ ಮಹಾದೇವೀ॥ ॥ ಪಲ್ಲ ॥ ಪಾಲಿಸೆನ್ನನು ಪರಮಗುಣನಿಧಿ। ಮೂಲರೂಪಿಣಿ ಶ್ರೀಲತಾಂಗಿಯೆ॥ ॥ ಪಾಲಿಸೆ ಮಹಾದೇವೀ ॥ ಅನು ॥ ಇಂದುಧರನ ಪ್ರೀತೆ । ಲೋಕ ಪ್ರಖ್ಯಾತೆ। ಸ್ಕಂದ ಗಣಪ ಮಾತೇ ॥ ಸುಂದರೀ । ದೈತ್ಯಾದಿ ಸಮರ ಧುರಂಧರೀ । ಕೌಸ್ತುಭ ಸುಕಂಬುಕಂಧರೀ ॥ ವಂದಿತಾಂಘ್ರಿ ಪ್ರಕಾಶ ರವಿಶಶಿ । ಕುಂದರದನೆ ಮುಕುಂದ ಸೋದರಿ । ಇಂದ್ರ ಮುಖ್ಯಾಮರ ಕದಂಬ ಸುವಂದ್ಯೆ ನಿರತಾನಂದದಿಂದಲಿ ॥ ಪಾಲಿಸೆ ಮಹಾದೇವೀ ॥ ೧ ॥ ಶಂಕರ ಮನಮೋಹಿನೀ । ಸಲೆ ಸರ್ಪವೇಣೀ । ಪಂಕಜದಳಲೋಚನೀ ॥ ಶಂಕರೀ । ಸುಜನಾದಿ ದುರಿತ ಭಯಂಕರೀ । ನವಕುಸುಮಮಾಲಾಲಂಕರೀ ॥ ಪಂಕಜಾಸನವಿನುತೆ ವಿಮಲೆ ಶಶಾಂಕವದನೆ ಸುಶೀಲೆ ವರದಾ । ಲಂಕೃತದಿ ತವ ಚರಣ ಭಜಕರಾತಂಕವನು ಪರಿಹರಿಸೆ ಕರುಣದಿ ॥ ಪಾಲಿಸೆ ಮಹಾದೇವೀ ॥ ೨ ॥ ದುರುಳ ಮಹಿಷ ಮುಖ್ಯರೂ । ಬಾಧಿಸೆ ಸುರರು । ಮರೆಹೊಕ್ಕು ಸುತಿಸಿದರೂ ॥ ಧರಿಸಿದೇ । ಕೀರ್ತಿಯನು ದಿತಿಜರನೊರಸಿದೇ । ಸುಮನಸರ ಭಯವಪಹರಿಸಿದೇ ॥ ನಿರತ

ಧ್ಯಾನಿಪ ಶರಣರನು ಉ। ದ್ಧರಿಪ ಬಿರಿದನು ತಾಳ್ದಿ ತ್ರಿಜಗಗಿ। ಹರ ಮಹಾ ಮಂಗೇಶ ಮೋಹನ। ದರಸಿ ಶಾಂತಾದುರ್ಗೆ ಶಾಂಭವಿ ॥ ಪಾಲಿಸೆ ಮಹಾ ದೇವೀ ॥ ೩ ॥ ಶ್ರೀ ॥

॥ ೫೫ ॥ ರಾಗ, ಕಲ್ಯಾಣಿ [ಧಾಟ:- ನೋಡು । ಸುನದಿ ಕೊಂಡಾಡು] ಆದಿತಾಳ

ದೇವೀ ಸುಜನಸಂಜೀವಿ। ಪರಮ ಕೃಪಾವನಧಿಯು ನೀನೇ ॥ ಪಾವನಾಂಗಿ ಸುರಾವಳಿವಿನುತೆ। ಶ್ರೀವರಹಿ ವೈಷ್ಣವಿ ಕಾತ್ಯಾಯನಿ। ಕೇವಲ ತವ ಪದ ಸೇವಕ ನಾ ಧಿಟ ॥ ದೇವಿ ॥ ಪಲ್ಲ ॥ ಶಾಂಭವೀ। ನಾರದಾದಿ ಮುನಿ ನಿಕುರುಂಬ ಪೋಷೆ ಜನನೀ। ದೇವೀ। ಕಂಬುಕಂಠೆ ಕಲ್ಯಾಣಿಯೆ ಶುಂಭ ನಿಶುಂಭ ದೈತ್ಯಮಥನೀ ॥ ಅಂಬಿಕೇ। ನಿಜಭಕ್ತಸಮೂಹ ಕುಟುಂಬಿಕೇ ॥ ನಿನ್ನಂಘ್ರಿ ಯುಗಳ ನರೆ॥ ನಂಬಿ ಬಂದೆ ಎನ। ಗಿಂಬುದೋರಿ ದುರ್ಗಾಂಬಿಕೇ ಸುಖವಾರಂಭದಿ ಪಾಲಿಸೆ ॥ ದೇವಿ ॥ ೧ ॥ ಸೌಂದರೀ। ತ್ರಿಜಗನ್ಮಯೆ ಸನಕಸನಂದನಾದಿ ವಿನುತೇ। ದೇವೀ। ಮಂದಯಾನೆ ಸ್ಥಾವರಜಂಗಮ ಜನವಂದ್ಯೆ ಚಾರುಚರಿತೇ ॥ ಚಂದಿರಾ। ನನೆ ಮುನಿಜನ ಮಾನಸಮಂದಿರಾ। ವಾಸಿನಿ ಹೈಮಾವತಿ ॥ ಕುಂದರದಾಂಗಿ ಪೂರ್ಣೇಂದುವದನೆ ಆ। ನಂದಭರಿತೆ ಗುಣಸಿಂಧು ಮಹೇಶ್ವರಿ ॥ ದೇವಿ ॥ ೨ ॥ ಅತಿಹಿತೇ। ಸೂನೃತೆ ಸುಲಲಿತೆ ಪ್ರತಿರಹಿತೆ ನಿನ್ನ ಪದವಾ। ಕಂಡೆನು। ಅತುಲಸೌಖ್ಯ ಶಾಶ್ವತ ಸುಫಲಪ್ರದ ಸತತ ಪಾಲಿಸವ್ವಾ ॥ ಮತಿಯುತೇ। ಸನುಮತ ಶಂಖ ಸುದರ್ಶನ ಧೃತ ಯುತೇ॥ ಶ್ರೀವಿಷ್ಣುಶಕ್ತಿ ದೇ॥ವತೆ ನಮೋ ನಮಃ ಶ್ರಿತಜನವಾಂಛಿತೆ। ಶ್ರುತಿ ಸ್ಮೃತಿತತಿಸಂಸ್ತುತೆ ಸರ್ವಾತ್ಮಕಿ ॥ ದೇವಿ ॥ ೩ ॥ ಕಾಮಿತಾಮಿತ। ಫಲ ದಾಯಕಿ ಅಮಮಾನಿ ಆದಿಮಾಯೇ। ನಿನ್ನಯ। ನಾಮ ದಿವ್ಯ ಸಂಜೀವನ ಮಣಿ ನಿಸ್ಸೀಮೆ ಎನ್ನ ತಾಯೇ॥ ಪ್ರೇಮದೀ। ರಕ್ಷಿಸು ಅನವರತ ಸುಕ್ಷೇಮದೀ॥ ದಯದೋರೀಕ್ಷಣ ॥ ಸುರಸಾರ್ವಭೌಮೆ ಗುಣಧಾಮೆ ತವಾಂಘ್ರಿಯ। ತಾಮರಸಗಳಿಗೆ ನಾ ಮಣಿವೆನು ಧಿಟ ॥ ದೇವೀ ॥ ೪ ॥ ಕಂಡೆನೂ। ಶೂಲಾಗ್ರದಿ ಮಹಿಷನ ಮುಂಡಕೂರಿ ನವರೀ। ದುದರಿಂ। ಮುಂಡಕೂರವೆನ್ನುವ ನಗರದಿ ಸ್ಥಿರಗೊಂಡು ನಿಂತೆ ಗೌರೀ ॥ ಚಂಡಿಕೇ। ಶ್ರೀಪತಿಯ ಭಗಿನಿ ಚಾಮುಂಡಿಕೇ ॥ ಎನಗಿಷ್ಟಾರ್ಥವ ಕೊಡು ॥ ಖಂಡಲಾದಿ ಸುರತಂಡವಿನುತೆ ಅಖಿ। ಳಾಂಡ ಕೋಟಿ ಬ್ರಹ್ಮಾಂಡನಾಯಕಿ ॥ ದೇವಿ ॥ ೫ ॥ ಶ್ರೀ ॥

॥ ೫೬ ॥ ರಾಗ, ಯ.ಮುಕಾಲಕಾಂಬೋಧಿ [ಧಾಟಿ:- ಶಾರಿದವೆಲೊ ನಿನ್ನಾ] ತ್ರಿವುಡೆತಾಳ

ವೆಂಕಟರಮಣ ದೇವರ ದೇವ ನಿನಗಿದು । ಸಂಕಟ ಬಂದೊದಗಿದು ದ್ಯಾತಕೇ ॥ ಪುಂಗೊಟ್ಟನೊಳು ಆಲದೆಲೆಯ ಮೇಲೊರಗಿಪ್ಪ । ದುಂಗುಟ ಬಾಯೊಳಗಿಟ್ಟು ಬಾಲಕನಾದಾ ॥ ವೆಂಕಟರಮಣ ॥ ಪಲ್ಲ ॥ ವೋದಭರಿತ ಮಹದಾದಿಲೋಕಂಗಳ । ಭೇದಿ ಸುವರ್ನ್ಮಾನದಿ ಬಹಿರೋದಕಾ ॥ ಶೀದೂತೀ ವಿಠಲ ಪ್ರವೋದದಿ ವಟಪತ್ರ। ಆದರಿಸಿದ ಶಯನಾ ಕಮಲದಳನಯನಾ ॥ ಆದಿಯೊಳಜನ ಪುಟ್ಟಿಸಿದ ಲೀಲೆ। ನೀನು। ಸಾಧಿಸಿ ತಮನ ಕುಟ್ಟಿದ ಮೇಲೇ। ಆ । ವೇದಗಳಜಗೆ ಕೊಟ್ಟಾಗಲೇ ॥ ಮೇಏನಿಗೆನುತಲಿ ಮಧುಕೈಟಭರ ಸೀಳೆ । ಭೂದೇವಿಯನು ರಚಿಸಿ ಈರೇಳು ಲೋಕವ ॥ ಭೇದವಿಲ್ಲದೆ ಧರಿಸಿ ಗಿರಿಯನು । ಆದಿ ವರಹನಾಗಿ ದೈತ್ಯನ । ಕಾದಿ ಗಲಿದು ವಿನೋದದಿಂದಲಿ । ಮೇಏನಿಯ ತಂದಿರುವ ಸಾಹಸಿ ॥ ವೆಂಕಟರಮಣ ॥ ೧ ॥ ಹಿರಣ್ಯಕಶ್ಯಪ ನಣುಗನು ಕರೆಯಲು ನಿನ್ನ । ಕರುಣದಿ ಕಲ್ಲಕಂಭದೊಳುದಿಸೇ ॥ ಶರಣಾಗತವಾತ್ಸಲ್ಯವ ತೋರಿಸಲು ಸುರ। ನರೋರಗರು ಕಂಗೆಡಲದುಭುತವ್ರೋ ॥ ದುರುಳ ದೈತ್ಯನನುದರವ ಸೀಳೀ। ಆ । ಕರುಳಮಾಲೆಯ ಕಂಧರದಿ ತಾಳೀ । ಅಜ। ಗರಳಕಂಧರ ಸುರರ್ಬೆದರೆ ಕೇಳೀ॥ ಪ್ರಳಯುಏಂದಹುದೆನುತ್ತಿಳಿದು ಬ್ಯಾಬಿಡಲಾಗ । ತರಳಗಭಯುಏತ್ತೆಲ್ಲರನು ಸಂತೃಸುತ ॥ ಧರಣಿ ಈರಡಿ ಮಾಡಿ ನಲಿಯುತ । ಧರಣಿಪಾಲರ ಸದದು ಮುರಿಯುತ । ಧರಣಿಪಾಗ್ರಣಿ ಎನಿಸಿ ನೀನೇ । ತರುಣಿ ಸಹಿತಾರಣ್ಯದೊಳಗಿಧ ॥ ವೆಂಕಟರಮಣ ॥ ೨ ॥ ಗೊಲ್ಲನಾತ್ಮಜನೆಂದೆನಿಸಿ ಗೋಕುಲದೊಳ । ಗುಲ್ಲಾಸದಲಿ ಬಾಲಚಾರಿತ್ರವಾ ॥ ಪಲ್ಲವಿಸುತ ಗೋಪಸತಿಯರ ಮನೆಮನೆ । ಯಲ್ಲೀರ್ವ ಪಾಲ್ಬೆಣ್ಣೆವೊಸರನೆ ತೆಗೆದುಂಡು ॥ ಕಳ್ಳನೆನಿಸಿಕೊಂಬುದ್ಯಾತಕೋ । ವೇಶ್ಯ। ವೇಶ್ಯಕ್ಕವರು ದೂರಲ್ಯಾತಕೋ । ಆ । ಹಳ್ಳಿಹೆಂಗಳ ಕೂಡಲ್ಯಾತಕೋ ॥ ಬಲ್ಲಿದ ತ್ರಿಪುರದ ಸತಿಯರ ಗೆಲಿದು ನೀ । ವೆಲ್ಲನೆ ತುರಗವಾಹನನಾಗಿ ಮೆರದೆಯೋ ॥ ಎಲ್ಲಿಗೆಲ್ಲಿಗೆ ಕರೆಯೆ ಭಕ್ತರು । ನಿಲ್ಲದಲ್ಲಿಗೆ ಓಡುತ್ತೈದುತ । ಎಲ್ಲ ಸಂಕಟಗಳ ಪರಿಹರಿಸಿ। ಸಲ್ಲಲಿತ ವರಗಳನು ಕೊಡುತಿಹ ॥ ವೆಂಕಟರಮಣ ॥ ೩ ॥ ಅಂಬರೀಷನು ದ್ವಾದಶಿಯನು ಸಾಧಿಸಲಾಗ । ಡಂಭ ದುರ್ವಾಸ ಶಾಪವ ಕೊಡಲೂ ॥ ಹಂಬಲಿಸುತ ಮುಂದೊಂದು ಕಾರಣಕ್ಕಾಗಿ । ಬೆಂಬಿಡದಟ್ಟಿದ ಮುನಿಯ ಚಕ್ರದೊಳಂದು ॥ ಜಂಭಾರಿಸುತ ರಣರಂಗಾಗ್ರ। ಗಜ್ಯಾ । ಗಂಬ

ರಕ್ಷಕನಣುಗನುರಗಾಸ್ತ್ರ । ಬರೆ। ಸಂಭ್ರಮದಿಂದ ಪಾರ್ಥನ ತೇರಾ ॥ ಕುಂಭಿನೀಗೊತ್ತಿದ ಪಾದಾರವಿಂದವ । ನಂಬಿದ ಭಕತರಿಗಂಬುದೋರಿ ಕಾವಾ ॥ ಅಂಬುಧೀಶಯನಂಬುಜಾಕ್ಷನೆ । ಅಂಬುಜೋದ್ಭವನಸುರಶಿಕ್ಷನೆ । ಎಂಬ ಮಾನವರಿಂಗೆ ತಾನಹೆನೆಂಬ ಬಿರಿದನು ತೋರಿಸಲಹುವ॥ ವೆಂಕಟರಮಣ ॥ ॥ ೪ ॥ ವೈಕುಂಠಪತಿಯೆ ಶ್ರೀಪತಿಯೆಂದು ನಾ ಮುನ್ನಾ । ಬಿಂಕಟದಲಿ ಮನದೊಳಗೊಮ್ಮೆ ನೆನೆದರೆ । ಕಂಕಟಕಮಟಾವಿ ಜಲಚರ ಪಶುಪಕ್ಷಿ । ಕಿಂಕಿಟ ಕಿಟಲೆಂಬ ಕೀಟಕ್ರಿಮಿಗಳೊಳು ॥ ಧಿಂಕಿಟ್ಟು ಲಾಲಿಸಿ ಬಳಲುವೆನೆ । ಇಂಥ। ಮಂಕಟ ಜಲುಮದಿ ತೊಳಲುವೆನೆ। ಮಹ । ಸಂಕಟದೊಳಗೆ ನಾಪಳಲುವೆನೆ ॥ ನಿನ್ನ । ಸಂಕಟದೊಳಗಿಂದು ಮರ್ತ್ಯರೂಪದಿ ಬಂದು । ವೆಂಕಟರಮಣನೆಂದಾನು ಸ್ಮರಿಸಲೆನ್ನ ॥ ಸಂಕಟವನಿದ ನಿನ್ನದಲ್ಲ್ಲ । ವೆಂಕಟಾ ಬಿರಿದಂಕ ನರಹರಿ । ವೆಂಕಟಾದ್ರಿ ಶ್ರೀ ತಿರುಮಲೇಶನೆ । ನೀಂ ಕಟಾಕ್ಷವನಿತ್ತು ಸಲಹೊ ॥ ವೆಂಕಟರಮಣ ದೇವರ ದೇವ ॥ ೫ ॥ ಶ್ರೀ ॥

॥ ೫೭ ॥ ರಾಗ, ಕಲ್ಯಾಣಿ [ಧಾಟಿ:- ಆರು ಹಿತವರು ನಿನಗೆ] ಝಂಪೆತಾಳ

ಯಾಕೆ ನೀನಿಲ್ಲಿ ಪವಡಿಸಿದೆ ಜಗದೀಶಾ । ಶ್ರೀಕಾಂತ ಗೋವಿಂದ ರಾಜ ಪಟ್ಟಣದೊಳಗೇ ॥ ಯಾಕೆ ನೀನಿಲ್ಲಿ ಪವಡಿಸಿದೆ ಜಗದೀಶಾ ॥ ಪಲ್ಲ ॥ ಚಲುವ ಕ್ಷೀರಾರ್ಣವದೊಳನುಗಾಲ ತೆರೆಯು ಘುಳು । ಘುಳಿಸಿ ಭೋರ್ಗುಡಿಪ ಘೋಷವನು ಕೇಳ್ದು ॥ ಬಲು ಕರ್ಕಶತೆಗನನ್ನುತಲಿ ಇದೇಕಾಂತ। ನಿಳೆಯವಿದೆ ಎಂದು ಬಂದಿಲ್ಲಿ ಮಲಗಿದೆಯಾ ॥ ಯಾಕೆ ನೀನಿಲ್ಲಿ ॥ ೧ ॥ ಬೆರಸಿ ನರಕಾಸುರನ ತರುಣನು ರಣಾಗ್ರದೊಳು । ನರಗೆಸೆದ ವರಪದಾಡೆಗೆ ಎದೆಯನೂ ॥ ಭರದೊಳೊಡ್ಡುತಲಿ ಫಲುಗುಣನನುಳುಹಿಸಿ ನಿ । ಷ್ಠುರಕೆ ನೋವೆಂದು ಈ ಪರಿಯೊಳ್ಮಲಗಿದೆಯಾ ॥ ಯಾಕೆ ನೀನಿಲ್ಲಿ ॥ ೨ ॥ ಅನುಗಾಲ ಬಲಿಯ ಬಾಗಿಲ ಕ್ಯಾದುಯವನ ಪಡಿ । ಯನು ಸಾಲದೆನುತ ನೀ ಕನಲಿ ಮಲಗಿದೆಯಾ॥ ಮನದಿ ಮಾನವೆ ಅರ್ಜುನನ ಸಾರಥಿಕೆಯದುಂ । ಬಳಿಯು ಸಲೆ ವಡಿಸಿಪೋದುದು ಎಂದೆನುತಲೀ ॥ ಯಾಕೆ ನೀನಿಲ್ಲಿ ॥ ೩ ॥ ಮುಪ್ಪಡರಿದಬಲೆ ಕುಬುಜೆಯ ನೀ ಸೊಂಕಲು ಜಗದೊ । ಳಿಪ್ಪ ಜನರೆಲ್ಲ ಕೈತಟ್ಟಿ ನಗುತಾ ॥ ಡಪ್ಪಳೆಯನಿಕ್ಕಲಾ ನಾಚಿಕೆಯದೋರಿ ನ। ಮ್ಮಪ್ಪ ನೀನಿಲ್ಲಿ ಮಲಗಿಪ್ಪುದಹುದಹುದೇ ॥ ಯಾಕೆ ನೀನಿಲ್ಲಿ ॥ ೪ ॥ ಜಲದೊಳಾಡುತ ಗಿರಿಯ ನೆಗಹಿ ಬೆನ್ನುಳುಕಿ ಭೂ । ಲಲನೆಯನು ಪೊತ್ತು ತಂದಾಲಸ್ಯವೋ ॥ ಬಲು

ಭಟನ ಸೀಳಿ ಇಳೆಯಳೆದು ಪದನಖದಿ ನೀ । ಠಳಿಯಲೋಸುಗವೆ ಬೆಳ ಬೆಳದು ಮಲಗಿದೆಯಾ ॥ ಯಾಕೆ ನೀನಿಲ್ಲಿ ॥ ೫ ॥ ಝುಡಿಮ ಕ್ಷತ್ರಿಯರ ಘೋರಡವಿ ತಿರುಗುತ ದಣಿದು । ಕುಡಿದ ವಿಷಭ್ರಮಣಿ ಏರಿದ ಭಾವವೋ॥ ಬಿಡದೆ ಸ್ತ್ರೀಯರ ವ್ರತವಗೆಡಿಸಿ ಮ್ಲೇಂಛರನು ಸದೆ । ಬಡಿಬಡಿದು ಬೇಸರದೊ ಳೊರಗಿ ಮಲಗಿದೆಯಾ ॥ ಯಾಕೆ ನೀನಿಲ್ಲಿ ॥ ೬ ॥ ಸುಗುಣನಿಧಿ ಭಕತರೇ ನೆಂದಡಪರಾಧವನು । ಬಗೆಗೊಳದೆ ಪಾಲಿಸುವೆನೆಂದಾಡಿದೇ ॥ ಜಗದೀಶ ಮಲಗಿ ಬಹು ಯುಗವ್ಯಾತು ಬೇಗೇಳು । ಅಗಲದಿರು ಎನ್ನ ರಕ್ಷಿಸೊ ರಮಾ ರಮಣಾ ॥ ಯಾಕೆ ನೀನಿಲ್ಲಿ ಪವಡಿಸಿದೆ ಜಗದೀಶಾ ॥ ೭ ॥ ಶ್ರೀಃ ॥

॥ ೫೮ ॥ ರಾಗ, ಕೇತಾರಗೌಳ [ಧಾಟಿ:- ಸಾರಿದೆನೆಲೋ ನಿನ್ನಾ] ತ್ರಿವುಡೆತಾಳ

ಕರುಣಿಸೆನ್ನನು ವೆಂಕಟೇಶ ಎನ್ನೊಡೆಯಾ । ಹರಿಯೇ ದಮ್ಮಯ್ಯಾ ತೋರೆನಗೆ ನಿನ್ನಡಿಯಾ ॥ ಕರುಣಿಸೆನ್ನನು ॥ ಪಲ್ಲ ॥ ತಿರುಮಲೇಶನೆ ನಿನ್ನ ಚರಣ ದರುಶನಕೆ ಈ । ಧರಣಿಯ ಜನರಿಗೆ ತರಿಸಿ ಸಾಹಿತ್ಯವಾ ॥ ಕರುಣಿಸಿ ಪರಶಿಯನೂ । ಶೇಷಾದ್ರಿಗೆ । ಬರಸುವೆಯುವರಾ ನೀನೂ । ಪ್ರತ್ಯಕ್ಷ ಗೋ । ಚರಿವೆ ಶ್ರೀಮೂರ್ತಿಯನೂ। ವೈಕುಂಠದ ॥ ಶಿರಿಯಿತ್ತು ಪೊರವುದಿಲ್ಲವೇ ನೀ ಸರ್ವರನೂ ॥ ಹರ ಸುರಪ ಸರಸಿಜಭವಾದ್ಯರ । ನರ ಸಚರಾಚರ ಜೀವ ರಾಶಿಯ । ಭರದಿ ರಕ್ಷಿಪ ದೇವ ಆವರೊಳು । ಬರಡನಾ ಪರದೇಶಿ ಯೊಬ್ಬನ ॥ ಕರುಣಿಸೆನ್ನನು ॥ ೧ ॥ ಮೊದಲು ನಾನಂತ ಸಹಸ್ರಯೋನಿ ಯೊಳು ನಾ । ನುದಿಸಿ ಕ್ರೋಳಲಿ ಬಳಲುತ ನವದೆನು ದೇವ ॥ ವಿಧದಿ ಈ ನರಜನ್ಮದೀ । ಬಂದೆನು ಈಗ । ಇದರೊಳಾದರು ದಯದೀ । ನಿನ್ನಯ ದಿವ್ಯ। ಪದವ ತೋರಿಸೊ ಮುದದೀ ॥ ರಕ್ಷಿಸು ಎನ್ನ ಸದಮಲಾನಂದ ಮೂರು ತಿಯೇ ದಯಾಬ್ಧಿ ॥ ಇವರು ಎನಗಿಲ್ಲೆನುತಳೌಕದಿ । ಮುದದಿ ನಡವುತ ಸಂ ಗ್ರಹಿಸಿದೆನು । ಮಧುದ್ವಿಷನೆ ಎನ್ನವಗುಣ ನಿವಾರಿಸು । ತ್ರಧಿಕ ಶೇಷಾಚಲವ ಕಾಣಿಸೋ ॥ ಕರುಣಿಸೆನ್ನನು ॥ ೨ ॥ ಸತತ ನಿನ್ನನು ನಾ ಧ್ಯಾನಿಸಲಿಲ್ಲ ಒಮ್ಮೆಗೆ । ನುತಿಸಿದ ಫಲದಿ ಅನಂತ ಜನ್ಮದ ಪಾಪ ॥ ಹತವಾಗಿ ಪೋಪುದೆಂ ದು । ನಿಶ್ಚಯ ಮಹಾ । ಶ್ರುತಿಯುಸುರುವುದು ಎಂದೂ । ಶ್ರೀ ವೆಂಕಟಾ । ಪತಿಯೆ ನೀ ಸಲಹೊ ಇಂದೂ ॥ ನಾಲಿಗೆಯೊಳು । ನುತಿಪೆ ದಮ್ಮಯ್ಯಾ ಪಾಲಿ ಸೋ ದೇವ ಬಂದೂ॥ ಪಥಕೆ ಸಾಹಿತ್ಯಗಳ ಕೊಡುತಿರು। ಪತಿಯೆ ನಿನ್ನಂಘ್ರಿಗಳ

ಕಾಣಿಸಿ । ವ್ಯಥೆಯ ಬಿಡಿಸು ರಮಾರಮಣನೆನ । ಗತಿ ಹಿತವ ಪಾಲಿಸು ದಯಾನಿಧೇ ॥ ಕರುಣಿಸೆನ್ನನು ವೆಂಕಟೇಶ ಎನ್ನೊಡೆಯಾ ॥ ೩ ॥ ಶ್ರೀ ॥

॥ ೫೯ ॥ ರಾಗ, ಪೀಲು [ಧಾಟಿ:- ] ಏಕತಾಳ

ಬಾರೋ ಬೇಗ ಬಾರೋ ರಾಮಾ । ಬಾರೋ ನೀ ಮೊಗದೋರೋ ರಾಮಾ ॥ ಬಾರೋ ಬೇಗ ಬಾರೋ ರಾಮಾ ॥ ಪಲ್ಲ ॥ ಅಗಣಿತ ಮಹಿಮಾ । ರಘುಕುಲೋದ್ಧಾಮಾ । ನಿಗಮಾಗಮ ಪೂಜಿತ ಶ್ರೀರಾಮಾ ॥ ಬಾರೋ ಬೇಗ ಬಾರೋ ॥ ೧ ॥ ಕುಜನ ಕುಠಾರೀ । ಸುಜನೋದ್ಧಾರೀ । ಭಜಕನಿಕರ ದುರಿತಾರೀ ರಾಮಾ ॥ ಬಾರೋ ಬೇಗ ಬಾರೋ ॥ ೨ ॥ ಪಂಕಜನಯನ ಶ್ರೀ ವೆಂಕಟರಮಣಾ । ಸಂಕಟಹರ ಶ್ರೀ ರಮಾಪತಿ ಚರಣಾ ॥ ಬಾರೋ ಬೇಗ ಬಾರೋ ರಾಮಾ ॥ ೩ ॥ ಶ್ರೀ ॥

॥ ೬೦ ॥ ರಾಗ, ಕಾಂಬೋಧಿ [ಧಾಟಿ:- ನಾರಸಿಂಹ ನಮೋ ನಮೋ] ತ್ರಿವುಡೆತಾಳ

ವೆಂಕಟೇಶ ನಮೋ ನಮೋ । ಜಯ । ವೆಂಕಟೇಶ ನಮೋ ನಮೋ ॥ ಜಯ ವೆಂಕಟೇಶ ನಮೋ ನಮೋ । ಜಯ । ವೆಂಕಟೇಶ ನಮೋ ನಮೋ ॥ ॥ ಪಲ್ಲ ॥ ಶ್ರೀಶ ವೈಕುಂಠಾದಿ ವಾಸ ಪ । ರೇಶ ಜಗದಾಧಾರ ರತ್ನಪ । ಭೂಷಲಂಕೃತ ದಿವ್ಯನಾಮ ಶ್ರೀ । ವಾಸುದೇವ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧ ॥ ಪಂಕಜೋದ್ಭವ ಮುಖ್ಯಮರಸುತ । ಶಂಖ ಚಕ್ರ ಗದಾಧರನೆ ಮಹಾ । ಶಂಕರಪ್ರಿಯ ಮೂಲನಾಮ ಶ್ರೀ । ಸಂಕರುಷಣ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೨ ॥ ಉದ್ಧವಕ್ರೂರಾದಿ ಶರಣ ಸ । ಮುದ್ರ ಯಾದವ ಕುಲ ತಿಲಕ ಸ । ಮೃದ್ಧಿ ಧೇನು ಸುಮೂಲ ನಾಮ ಶ್ರೀ । ಸಂಕರುಷಣ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೩ ॥ ಸನಕ ಭೃಗು ಶುಕ ಶೌನಕಾದ್ಯರು । ಅನಿಮಿಷರು ಋಷಿಜನ ಸಮೂಹವು । ನೆನದು ನರ್ತಿಪ ಮೂಲನಾಮ ಶ್ರೀ । ಅನಿರುದ್ಧಾಯ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೪ ॥ ಪ್ರಳಯೋದಕ ಮಧ್ಯದಲಿ ಮಹ ವಟ । ದೆಲೆಯು ರಚಿಸಿ ಮೇಲೊರಗಿ ನಾಭೀ । ವಳಿಯದಿಂದಜನನು ಪಡದ ಮಹ । ಚಲುವ ದೇವ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೫ ॥ ಸೃಷ್ಟಿಸ್ಥಿತಿಲಯ ಕಾರಣದಿ ಪರ । ಮೇಷ್ಠಿ ಭವರಂ ಸೃಜಿಸಿ ನಡಸುವ । ಶ್ರೇಷ್ಠ ಏಕೋ ದೇವ

ವೆನಿಸಿದ। ಕೃಷ್ಣನಡಿಗೆ ನಮೋ ನಮೋ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೬ ॥ ಶ್ರುತಿ ತತಿಯ ಕದ್ದೋಡಿ ಜಲದೊಳ। ಗತಿ ಜವದಿ ಪೊಕ್ಕಿರುವ ತಮನನು । ಮಥಿಸಿ ವೇದಜಗಿತ್ತ ಮತ್ಸ್ಯಾ। ಕೃತಿಯ ದೇವ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೭ ॥ ಮಥಿಸಿ ಕ್ಷೀರಾರ್ಣವನು ಸುಧೆಸುರ । ತತಿಗೆರೆಯಲೋಸುಗದಿ ಮಂದರ। ಜತನದಿಂ ಪೊತ್ತಿರುವ ಕೂರ್ಮಾ। ಕೃತಿಯ ರೂಪ ನಮೋ ನಮೋ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೮ ॥ ಮೂಢತನದಿಂದವನಿಯನು ಕೊಂ। ಡೋಡಿದವನಸುವನು ವಿಭಾಡಿಸಿ । ಹಾಡೆಯಲಿ ರೂಢಿಯನು ಸಲಹಿದ । ಕ್ರೋಡರೂಪ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೯ ॥ ದುರುಳನುದರದ ಕರುಳ ಕೊರಳೊಳು । ಧರಿಸಿ ತರಳನ ಕರದಭಯ ಕರ। ತಳದಿ ತೋರಿದ ಕರುಣನಿಧಿ ಶ್ರೀ । ನರ ಮೃಗಾಯ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧೦ ॥ ಭೂಮಿ ಎರಡೆಜ್ಜೆಯೊಳಳದು ನಿ । ಸ್ಸೀಮ ಬಲಿಯನು ವಿತಳ ಕಳುಹಿ ಸು । ತ್ರಾಮನನು ಸಲಹಿದ ದಯಾಬ್ಧಿ ಶ್ರೀ। ವಾಮನಾಯ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧೧ ॥ ಪಡೆದವನ ನುಡಿ ಕೇಳಿ ಮಾತೆಯ । ಕಡಿದು ಬೇರುಳುಹಿಸುತ ಕ್ಷತ್ರಿಯ । ಘಡೆ ಬಡಿದು ಬೀಸಿದನು ಧೇನುವ । ಕೊಡಲಿ ರಾಮ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧೨ ॥ ತ್ರಿಶಿರ ಖರದೂಷಣ ದಶಮುಖಾ । ದ್ಯಸುರ ನಾಶ ಸುರೌಘವಂದಿತ । ಶ್ರೀಶ ಕೋದಂಡಧರ ಕೋಸಲ । ಧೀಶ ರಾಮ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧೩ ॥ ನಂದಗೋಪ ಯಶೋದೆ ಗೋಪೀ । ವೃಂದಪಾಲಕ ಸಕಲ ಸದ್ಗುಣ । ಸಾಂದ್ರ ಗೋಕುಲವಾಸ ಶ್ರೀ ಗೋ। ವಿಂದ ಕೃಷ್ಣ ನಮೋ ನಮೋ ॥ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧೪ ॥ ತ್ರಿದಶರನು ಬಾಧಿಪ ನಿರಂತರ । ಮುದದಿ ತ್ರಿಪುರದೊಳಿರುವ ದುರುಳರ । ಸುದತಿಯರಿಗೊಲಿದಿಹ ದಿಗಂಬರ । ಚದುರ ಬೌದ್ಧ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧೫ ॥ ತೇಜಿಯನು ನಡಸುತ ವಿನೋದದಿ । ತೇಜಿಸುವ ಖಡ್ಗವನು ಝಳಪಿಸಿ । ಮೂಜಗದ ಮ್ಲೇಂಛರ ತರಿದ ಮಹಾ। ರಾಜ ಕಲ್ಕ್ಯ ನಮೋ ನಮೋ ॥ ಹರಿ ನಾರಾಯಣ ಹರಿ

ನಮೋ ನಾರಾಯಣ ॥ ೧೬ ॥ ಕಿಂಕರ ಜನೋದ್ಧಾರ ಈ ವೇಳ। ಲಂಕೆಯೊಳು ರತ್ನಾಸನದಿ ಮಹಾ। ಲಂಕರದೊಳೊಪ್ಪುವ ರಮಾಪತಿ । ವೆಂಕಟೇಶ ನಮೋ ನಮೋ ॥ ಹರಿ ನಾರಾಯಣ ಹರಿ ನಮೋ ನಾರಾಯಣ ॥ ೧೭ ॥ ಶ್ರೀ ॥

॥ ೬೧ ॥ ರಾಗ. ಬೃಂದಾವನ ಸಾರಂಗ [ಧಾಟಿ:- ಗೋವಿಂದಾ ಹರಿ] ಏಕತಾಳ

**ನರಸಿಂಹಂ ಭಜ ನರಸಿಂಹಂ ಭಜ । ನರಸಿಂಹಂ ಭಜ ನರಸಿಂಹಂ** ॥ ಪಲ್ಲ ॥ ಶ್ರೀಕೇಶವ ನಾರಾಯಣ ಮಾಧವ । ಲೀಲಾರ್ಚಿತ ಝುಷ ನರಸಿಂಹ ॥ ಲೋಕಪ್ರೇರಕ ಗೋವಿಂದ ವಿಷ್ಣು ಕರು । ಣಾಕರ ಕಶ್ಯಪ ನರಸಿಂಹ ॥ **ನರಸಿಂಹಂ** ॥ ೧ ॥ ಮಧುಸೂದನ ತ್ರಿವಿಕ್ರಮ ವಾಮನ । ಸದಯ ಶ್ರೀಧರ ಮೃಗ ನರಸಿಂಹ ॥ ನಿಧಿ ಹೃಷೀಕೇಶ ಶ್ರೀಪದುಮನಾಭ ಮಹಾ । ಕದನಭಯಂಕರ ನರಸಿಂಹ ॥ **ನರಸಿಂಹಂ** ॥ ೨ ॥ ದಾಮೋದರ ಸಂಕರುಷಣ ವಾಸು । ದೇವ ಗಂಗೆಯ ಪಿತ್ರ ನರಸಿಂಹ ॥ ಕೋಮಲ ಪ್ರದ್ಯುಮ್ನನಿರುದ್ಧ ಸುಗುಣೋ । ದ್ದಾಮ ಭಾರ್ಗವಋಷಿ ನರಸಿಂಹ ॥ ॥ **ನರಸಿಂಹಂ** ॥ ೩ ॥ ಪುರುಷೋತ್ತಮ ಅಧೋಕ್ಷಜ ದಶಕಂ । ಧರ ಹತ ರಾಘವ ನರಸಿಂಹ ॥ ವರದಾಚ್ಯುತ ಪರಮಾತ್ಮ ಜನಾರ್ದನ । ಕರುಣಿ ಉಪೇಂದ್ರ ಶ್ರೀ ನರಸಿಂಹ ॥ **ನರಸಿಂಹಂ** ॥ ೪ ॥ ಶ್ರೀಕರ ಹರಿ ಕೃಷ್ಣಾಯ ನಮೋ ವರ । ಗೋಕುಲಪಾಲ ಶ್ರೀ ನರಸಿಂಹ ॥ ಭೀಕರ ತ್ರಿಪುರ ಸೀಮಂತಿನಿ ಸಂಚಯ । ದಾ ಕಡುವ್ರತಜಿತ ನರಸಿಂಹ ॥ **ನರಸಿಂಹಂ** ॥ ೫ ॥ ವಿನತಾರೂಢ ಕಲಿಕೆಯಮಿತಾಮಿತ । ಸನಕಸನಕವಿನುತ ನರಸಿಂಹ ॥ ಅನುಪಮ ಸಚರಾಚರಭರಿತಾಶ್ರಿತ । ಜನರಕ್ಷಾಮಣಿ ನರಸಿಂಹ ॥ **ನರಸಿಂಹಂ** ॥ ॥ ೬ ॥ ಪನ್ನಗರಾಜಗಸಾಧ್ಯ ದಯಾನಿಧಿ । ನಿನ್ನ ಪೊಗಳುವೆನು ನರಸಿಂಹ ॥ ಎನ್ನೊಳವಲ್ಲ ನೀ ಮುನ್ನ ಸದ್ಭಕ್ತರ । ಮನ್ನಿಸಿ ಕಾಯ್ದೆ ಶ್ರೀ ನರಸಿಂಹ ॥ **ನರಸಿಂಹಂ** ॥ ೭ ॥ ತರಳ ಪ್ರಹ್ಲಾದಗೆ ಪರಿಪರಿಯಾತನೆ । ವರ ಪಿತನೀಯಲು ನರಸಿಂಹ ॥ ಪರಿಯೆ ಬೇಗ ಬಾ ಬಾ ಎನುತಲಿ ಬ್ಯಾ । ರೆರದು ಕೂಗುತಿರೆ ನರಸಿಂಹ ॥ ನರಸಿಂಹಂ ॥ ೮ ॥ ನಿಖಿಲ ಕಣ್ದೆರೆ ಸುರಕಟಕ ಬೆದರೆ ಅಜ । ಘಟ ಬೊಡೆದಂದದಿ ನರಸಿಂಹ ॥ ಛಿಟಛಿಟಛಿಟ ಉತ್ಕಟ ಸ್ತಂಭದೊಳಾ । ಛಟಿ ಶಬ್ದೆಸಗಿದ ನರಸಿಂಹ ॥ ನರಸಿಂಹಂ ॥ ೯ ॥ ಶತಕೋಟಿ ಸಿಡಿಲು ಹೊಡೆದಂದದಿ ಅ । ದ್ಭುತ ಘರ್ಜನೆಯಲಿ ನರಸಿಂಹ ॥ ಅತಿಬಲ

ವಜ್ರಸ್ತಂಭ ಹೊಡೆದು ಪೊರ । ಡುತ ವ್ಯೈದೋರಿದೆ ನರಸಿಂಹ ॥ ನರಸಿಂಹಂ ॥ ೧೦ ॥ ಝುಡಿದು ಹಿರಣ್ಯಕಶಿಪುವಿನ ಕಟಯುನು । ಹಿಡಿದೆಳದ್ಯೊಏದ ನರಸಿಂಹ ॥ ಬಿಡದೆ ತ್ರಿಸಂಧ್ಯಾಕಾಲ ಹೊಸ್ತಿಲೊಳು । ತೊಡೆವಡೆಗೊಕಿದ ನರಸಿಂಹ ॥ ನರಸಿಂಹಂ ॥ ೧೧ ॥ ತೆರೆದ ಬಾಯ ಕಣ್ಬುರುಹಿ ನಖಾಗ್ರದಿ । ಕೊರದುದರ ಬಗದೆ ನರಸಿಂಹ ॥ ಕರುಳನು ಕೊರಳೊಳು ಧರಿಸಿ ಶೋಣಿತ ಸುರಿ । ಸುರಿದು ಚಲ್ಲ್ಯಾಡಿದೆ ನರಸಿಂಹ ॥ ನರಸಿಂಹಂ ॥ ೧೨ ॥ ತೆರದ ನಯನದುರಿಯುಲಿ ಆ ದೈತ್ಯನ । ಹರಣವಸುಳುಹಿದ ನರಸಿಂಹ ॥ ಸುರರೊಳು ಹಿರಣ್ಯಕಶಿಪುವಿನ ಪುಣ್ಯಕೆ । ಸರಿಸಾಟ ಯಾರ್ರೈ ನರಸಿಂಹ ॥ ನರಸಿಂಹಂ ॥ ೧೩ ॥ ಅಂಜದಿರೆಸುತಪ್ಪುತಲಾ ಬಾಲಗೆ ಕರ। ಕಂಜವು ದೋರಿದ ನರಸಿಂಹ ॥ ರಂಜಿತ ಸಿರಿಸಾಮ್ರಾಜ್ಯದೈಶ್ವರ್ಯದ । ಪುಂಜಪದವಿ ಇತ್ತ ನರಸಿಂಹ ॥ ನರಸಿಂಹಂ ॥ ೧೪ ॥ ಶರಣರ ವಾಂಛಿತ ಬಿಡದು ನಿನಗೆ ಸರಿ । ಸರಿ ಕರುಣಾಂಬುಧಿ ನರಸಿಂಹ ॥ ವರ ಮೂಲಿಕಪುರವಾಸ ರಮಾಪತಿ । ಇಂಸೆಮ್ಮೊಳು ಕೃಪೆ ನರಸಿಂಹ ॥ ನರಸಿಂಹಂ ॥ ೧೫ ॥ ಶ್ರೀಃ ॥

॥ ೬೨ ॥ ರಾಗ, ಬೃಂದಾವನಸಾರಂಗ [ಧಾಟಿ- ನರಸಿಂಹಂ ಭಜ] ಏಕತಾಳ

ಕೃಷ್ಣ ಹರೇ ಜಯ ಕೃಷ್ಣ ಹರೇ ಜಯ । ಕೃಷ್ಣ ಹರೇ ಜಯ ಕೃಷ್ಣ ಹರೇ ॥ಪಲ್ಲ॥ ಶ್ರೀವರ ಸುಜನರ ಕಾವ ದಯಾಪರ । ದೇವ ಗುಣಾಂಬುಧಿ ಕೃಷ್ಣ ಹರೇ ॥ ಸ್ಥಾವರಜಂಗಮ ಜೀವರಿಗಿಪ್ಪವ। ನೀವುತ ರಕ್ಷಿಪ ಕೃಷ್ಣ ಹರೇ ॥ ಕೃಷ್ಣ ಹರೇ ॥ ೧ ॥ ಮಿಡುಕದೆ ನಿಗಮಗಳಡಗಿಸಿದವನನು । ಬಡಿದು ಕೆಡಹಿದ ಶ್ರೀಕೃಷ್ಣ ಹರೇ ॥ ಬಿಡದೆ ವೇದಜನಿಗೆ ಕೊಡಲು ಮೀನಾಗುತ । ಕಡಲೊಳಗಾಡಿದ ಕೃಷ್ಣ ಹರೇ ॥ ಕೃಷ್ಣ ಹರೇ ॥ ೨ ॥ ಸಿಂಧು ಮಥಿಸಿ ಮಹಾಮಂದರ ಮುಳುಗಿರ । ಲಂದು ಬೆನ್ನಾಂತ ಶ್ರೀಕೃಷ್ಣ ಹರೇ ॥ ಚಂದದಿ ಸುಧೆ ಸುರವೃಂದಕೆ ಉಣಿಸಿದ । ನಂದ ಕಚ್ಛಪರೂಪ ಕೃಷ್ಣ ಹರೇ ॥ ॥ ಕೃಷ್ಣ ಹರೇ ॥ ೩ ॥ ರಸೆಯ ಕದ್ದೋಡಿದ ಅಸುರನ ಬಸುರನು। ದಶನದಿ ಸೀಳಿದ ಕೃಷ್ಣ ಹರೇ ॥ ಶಶಿಧರ ಸುತಿಸಲು ವಸುಮತಿಯನ್ನುಳು । ಹಿಸಿದ ಕ್ರೋಡಾಕೃತಿ ಕೃಷ್ಣ ಹರೇ ॥ ಕೃಷ್ಣ ಹರೇ ॥ ೪ ॥ ಮೃಡನಡುಗಲು ಭೋರ್ಗುಡಿಸಿ ಬ್ರಹ್ಮಾಂಡದ । ಅಡಿ ಮಗುಚುವಂದದಿ ಕೃಷ್ಣ ಹರೇ ॥ ಝುಡಿದು ಘರ್ಜಿಸಿ ಖಳನೊಡಲ ಸೀಳಿ ರಕುತ । ಕುಡಿದು ಬಾಲನ ಕ್ಯಾದ

ಕೃಷ್ಣ ಹರೇ ॥ **ಕೃಷ್ಣ ಹರೇ** ॥೫॥ ಮತಿಯುತ ಬಲಿ ಸುರಪತಿಯ ಗದ್ದುಗೆ ಬಯ । ಸುತಲಿರೆ ತಿಳಿದು ಶ್ರೀ ಕೃಷ್ಣ ಹರೇ ॥ ಕ್ಷಿತಿಯನಳದು ತತ್ಕೃತುವ ಕೆಡಿಸುತವನ । ವಿತಳಕ್ಕಿಳುಹಿಸಿದ ಕೃಷ್ಣ ಹರೇ ॥ **ಕೃಷ್ಣ ಹರೇ** ॥ ೬ ॥ ಪಡದ ಮಾತೆಯ ಶಿರ ಹೊಡೆದು ಮತ್ತವಳಸು । ಬಿಡದೆ ರಕ್ಷಿಸಿದ ಶ್ರೀಕೃಷ್ಣ ಹರೇ ॥ ಝುಡಿದು ಕ್ಷತ್ರಿಯ ಪಡೆ ಬಡಿದು ಸಂಹರಿಸಿದ । ಕೊಡಲಿಭಾರ್ಗವ ರಾಮ ಕೃಷ್ಣ ಹರೇ ॥ **ಕೃಷ್ಣ ಹರೇ** ॥೭॥ ಜಲಧಿ ಬಂಧಿಸಿ ದಶಗಳನ ಬಳಗ ಸಹ । ಕಣನೊಳು ತರಿದ ಶ್ರೀ ಕೃಷ್ಣ ಹರೇ ॥ ತಳುವ ತ್ರಿಕುಟಾಚಲವನು ಶರಣನಿ । ಗೊಲಿದು ಪಾಲಿಸಿದ ಶ್ರೀಕೃಷ್ಣ ಹರೇ ॥ **ಕೃಷ್ಣ ಹರೇ** ॥ ೮ ॥ ನಿಲ್ಲದೆ ಗೊಲ್ಲರ ಪಳ್ಳಿಯೊಳಾಡುತ । ಕಲ್ಲಿಯ ಕೊಳುಂಡ ಕೃಷ್ಣ ಹರೇ ॥ ಬಿಲ್ಲಹಬ್ಬದ ನೆವದಲಿ ಮಾವ ಕಂಸನ । ಚಲ್ಲಬಡಿದ ಶ್ರೀಕೃಷ್ಣ ಹರೇ ॥ **ಕೃಷ್ಣ ಹರೇ** ॥೯॥ ಶಶಿಮುಖಿಯರ ತನ್ನೊಶಗೈಯ್ಯಲು ಉಟ್ಟ । ವಸನಬಿಟ್ಟೋಡಿದ ಕೃಷ್ಣ ಹರೇ ॥ ಕುಶಲದಿ ತ್ರಿಪುರದ ನಿಶಿಚರರನು ಕೊಂ । ದಸುವ ತೊಲಗಿಸಿದ ಕೃಷ್ಣ ಹರೇ ॥ **ಕೃಷ್ಣ ಹರೇ** ॥ ೧೦ ॥ ದಟ್ಟಚಲ್ಲಣ ಬಿಗಿದುಟ್ಟು ಪಗಡಿಯಳಿ।ಪಟ್ಟು ತೇಜಿಯಡರ್ದ ಕೃಷ್ಣ ಹರೇ ॥ ಈಟ ಕಠಾಂಗಳ್ತೊಟ್ಟು ಖಡ್ಗದ ತಲಿ । ಕುಟ್ಟಿ ಮ್ಲೇಂಛರ ಕೊಂದ ಕೃಷ್ಣ ಹರೇ ॥ **ಕೃಷ್ಣ ಹರೇ**॥ ೧೧ ॥ ಇಳೆಯ ಭಾರವ ಪರಿಹರಿಸಿ ಭಕತರಘ । ಕಳದು ರಕ್ಷಿಸಿದ ಕೃಷ್ಣ ಹರೇ ॥ ತಳುವದೆನ್ನನು ಕ್ಯಾದುಳಿಸೊ ನಿನ್ನ ಪದ । ನಳಿನಕ್ಕೆರಗುವೆನು ಕೃಷ್ಣ ಹರೇ ॥ **ಕೃಷ್ಣ ಹರೇ** ॥ ೧೨ ॥ ಅತಿಪಾತಕಿ ನಾನೆನುತ ಕೈಬಿಟ್ಟರೆ । ಗತಿಯ ಕಾಣೆನು ಬೇರೆ ಕೃಷ್ಣ ಹರೇ ॥ ಶತಸಾವಿರ ಅಪರಾಧ ಎನ್ನಯ ಕ್ಷಮಿ । ಸುತ ರಕ್ಷಿಸೊ ಜಯ ಕೃಷ್ಣ ಹರೇ ॥ **ಕೃಷ್ಣ ಹರೇ** ॥೧೩॥ ಮಡುವಿನೊಳಗೆ ಕರಿ ಮಿಡುಕಿ ಬಾಯಾರಿ ಕೂ । ಗಿಡಲೊದಗುತ ಬಂದೆ ಕೃಷ್ಣ ಹರೇ ॥ ಝುಡಿದು ನಕ್ರನ ಸೀಳಿ ಪಿಡಿದು ಆ ಗಜನನು । ಬಿಡಿಸಲಿಲ್ಲವೆ ಮುನ್ನ ಕೃಷ್ಣ ಹರೇ ॥ **ಕೃಷ್ಣ ಹರೇ** ॥ ೧೪ ॥ ಅಂಬುಜಸಖ ಕುವರನು ರಣದೊಳಗೆ ನಿನ । ಗಂಬ ಪೂಡಿರೆ ನೋಡಿ ಕೃಷ್ಣ ಹರೇ ॥ ಕುಂಭಿನಿಯೊತ್ತಿ ನರನ ಕ್ಯಾದವ ನೀ ದ । ಯಾಂಬುಧಿಯಲ್ಲವೆ ಕೃಷ್ಣ ಹರೇ ॥ **ಕೃಷ್ಣ ಹರೇ** ॥ ೧೫ ॥ ಬಿಡದೆ ಎನ್ನನು ಕರ ಪಿಡಿದು ರಕ್ಷಿಸು ಭವ । ಕಡಲನು ದಾಟಿಸೊ ಕೃಷ್ಣ ಹರೇ ॥ ಧಡವ ಕಾಣೆನು ಎನ್ನೊಡೆಯ ನೀನೆಂದು ನಿ । ನ್ನಡಿಗೆರಗುವೆ ಜಯ ಕೃಷ್ಣ ಹರೇ ॥ **ಕೃಷ್ಣ ಹರೇ** ॥ ೧೬ ॥ ಪತಿಗಳೈವರು ವರಸತಿಯ ಮುಂಶರಗ ದು । ರ್ಮತಿ

ಪಿಡಿದೆಳೆಯಲು ಕೃಷ್ಣ ಹರೇ ॥ ರತಿಪತಿಪಿತ ನೀ ಗತಿ ಎಂದಬಲೆ ಕೂ। ಗುತ ಕರೆಯಲು ಕ್ಕಾದೆ ಕೃಷ್ಣ ಹರೇ ॥ ಕೃಷ್ಣ ಹರೇ ॥ ೧೭ ॥ ಕಡು ತರಳನು ಘೋರಡವಿಯೊಳ್ತಪದಿ ನಿ। ಸ್ನಡಿಗಳ ಪಿಡಿಯಲು ಕೃಷ್ಣ ಹರೇ ॥ ಬಿಡದೆ ಧ್ರುವಗೆ ಪದ ಕೊಡುತ ರಕ್ಷಿಸಿದ ಎ। ನ್ನೊಡೆಯ ನೀನಲ್ಲವೆ ಕೃಷ್ಣ ಹರೇ ॥ ॥ ಕೃಷ್ಣ ಹರೇ ॥ ೧೮ ॥ ಕಡುಬಡತನ ಬಂದಡರಿ ಸುದಾಮ ನಿ। ಸ್ನಡಿಯ ಧ್ಯಾನಿಸುತಿರೆ ಕೃಷ್ಣ ಹರೇ ॥ ಪಿಡಿಯವಲನುಣುತ ತಡೆಯದೆ ಸಂಪದ। ಕೊಡುತ ರಕ್ಷಿಸಿದ ಕೃಷ್ಣ ಹರೇ ॥ ಕೃಷ್ಣ ಹರೇ ॥ ೧೯ ॥ ಮುನ್ನ ನಿನ್ನೆನದ ವರನ್ನು ರಕ್ಷಿಸಿವೆ ನೀ। ಎನ್ನ ಬಿಟ್ಟಿರುವೆಯ ಕೃಷ್ಣ ಹರೇ ॥ ಬನ್ನಬಟ್ಟೆನು ಬಲು ಇನ್ನಾದರೆನ್ನನು। ಮನ್ನಿಸಿ ಸಲಹೊ ಶ್ರೀಕೃಷ್ಣ ಹರೇ॥ ಕೃಷ್ಣ ಹರೇ ॥ ೨೦ ॥ ವರ ವಳಲಂಕಾಪುರದಿ ನಿರಂತರ। ಸ್ಥಿರವಾಗಿರುತಿಹ ಕೃಷ್ಣ ಹರೇ ॥ ಶರಣಾಗತರನು ಪೊರೆವ ಶ್ರೀವೇಂಕಟ। ಕರುಣಿ ರಮಾಪತಿ ಕೃಷ್ಣ ಹರೇ ॥ ಕೃಷ್ಣ ಹರೇ ॥ ೨೧ ॥ ಶ್ರೀ ॥

॥ ೬೩ ॥ ರಾಗ, ಕಾಂಬೋಧಿ [ಧಾಟಿ:- ಕೃಷ್ಣ ಹರೇ ಜಯ] ತ್ರಿವುಡೆತಾಳ

ರಾಮ ಹರೇ ಜಯ ರಾಮ ಹರೇ ಜಯ। ರಾಮ ಹರೇ ರಘು ರಾಮ ಹರೇ ॥ಪಲ್ಲ॥ ಶ್ರೀರಘುವಂಶೋದ್ಧಾರ ಭಕತ ಸಂ। ಸಾರಿಕ ಸದ್ಗುಣ ರಾಮ ಹರೇ ॥ ಚಾರು ಕೌಸಲ್ಯಕುಮಾರಕನೆನಿಸಿದ। ಭೂರಿ ನಾಟಕಧಾರೀ ರಾಮ ಹರೇ॥ ರಾಮ ಹರೇ ॥ ೧ ॥ ಅತಿಬಲ ತಾಟಕಿಮಥನ ಸುಬಾಹುಕ। ಹತ ತ್ರಿಶಿರಾಂತಕ ರಾಮ ಹರೇ ॥ ಹಿತಕೌಶಿಕ ಸತ್ಕ್ರತುಪೂರಣ ಶಾ। ಶ್ವತ ಮೂರುತಿ ರಘುರಾಮ ಹರೇ ॥ ರಾಮ ಹರೇ ॥ ೨ ॥ ಭಾಪುರೆ ಮನುಕುಲ ದೀಪ ಅಹಲ್ಯಾ। ಶಾಪವಿಮೋಚನ ರಾಮ ಹರೇ ॥ ಆ ಪರಮೇಶನ ಚಾಪವ ನೆಗಹಿದ। ಭೂಪ ಕೃಪಾನಿಧಿ ರಾಮ ಹರೇ ॥ ರಾಮ ಹರೇ ॥ ೩ ॥ ಕ್ಷಿತಿಜೆಗೊಲಿದು ಬರೆ ಪಥವಲಿ ಭಾರ್ಗವ। ವ್ರತಿಯ ಗೆಲಿದ ರಘುರಾಮ ಹರೇ ॥ ಪಿತನಾಜ್ಞೆಗೆ ಅದ್ಭುತದಾರಣ್ಯಕೆ। ಸತಿ ಸಹಿತೈದಿದ ರಾಮ ಹರೇ ॥ ರಾಮ ಹರೇ ॥ ೪ ॥ ದೋಷಿ ಶೂರ್ಪನಖಿ ನಾಶಿಕಹರ ಖರ। ದೂಷಣಾರಿ ರಘುರಾಮ ಹರೇ ॥ ವೇಶ ಪೊಂಮೃಗವಿನಾಶ ಜಟಾಯುವಿ। ಗಾ ಸುಫಲಪ್ರದ ರಾಮ ಹರೇ ॥ ರಾಮ ಹರೇ ॥ ೫ ॥ ಮೂಢ ಕಬಂಧನ ಗೂಡಿಸಿ ಸುರದಿ। ಬೇಡತಿಗೊಲಿದ ಶ್ರೀರಾಮ ಹರೇ ॥ ನೋಡಿ ವಾತಜನ ಕೈಗೂಡಿ ಸುಗ್ರೀವನ। ಜೋಡಿನವನ ಗೆದ್ದ ರಾಮ ಹರೇ ॥ ರಾಮ ಹರೇ ॥ ೬ ॥ ಬೆಟ್ಟಗಳನು ತಂ

ದೊಟ್ಟ ಶರಧಿಯೊಳು । ಕಟ್ಟಿಸಿ ಸೇತುವ ರಾಮು ಹರೇ ॥ ಧಿಟ್ಟ ಪ್ಲವಗಬಲ ವಟ್ಟಿಸಿ ಲಂಕಾ । ಪಟ್ಟಣ ಹೊಗಿಸಿದ ರಾಮು ಹರೇ ॥ ರಾಮು ಹರೇ ॥ ೭ ॥ ದೇವಾಂತಕ ನಗಹರ ಜೀವಾಂತಕ । ರಾವಣ ಮುಖ್ಯ ಶ್ರೀರಾಮು ಹರೇ ॥ ದೇವ ವಿಭೀಷಣಗಾ ವೈಭವನಿತ್ತ । ಆ ವಿಬುಧಾರ್ಚಿತ ರಾಮು ಹರೇ ॥ ರಾಮು ಹರೇ ॥ ೮ ॥ ಅನಲನ ಮುಖದಿಂ ಜನಕತನುಜೆಯುತ । ವಿನಯದಿಂ ಬರಿಸಿದ ರಾಮು ಹರೇ ॥ ಇನಸೋಮಾನ್ವಯುವನು ಕೈವಲ್ಯಾ । ಸನಕೇರಿದ ರಘುರಾಮು ಹರೇ ॥ ರಾಮು ಹರೇ ॥ ೯ ॥ ವಾನರತತಿ ರವಿಸೂನು ಶರಣ ವವ । ಮಾನಿ ಸಮೇತ ಶ್ರೀರಾಮು ಹರೇ ॥ ಜಾನಕಿಯನುಜರ ತಾನೆ ಕೈವಿಡಿದು ವಿಮಾನ ಕ್ಕಡರಿದ ರಾಮು ಹರೇ ॥ ರಾಮು ಹರೇ ॥ ೧೦ ॥ ಪ್ರೇಮದಿ ಬರುತಿರಲಾ ಮಾರ್ಗದಿ ಋಷಿ । ಸ್ತೋಮವ ಮನ್ನಿಸಿ ರಾಮು ಹರೇ ॥ ಆ ಮಹಾ ನಂದೀ ಗ್ರಾಮದಿ ಭರತನ । ತಾ ಮುದ್ದಾಡಿದ ರಾಮು ಹರೇ ॥ ರಾಮು ಹರೇ ॥೧೧॥ ಮೆರೆವ ಅಯೋಧ್ಯಾಪುರದೊಳು ಸರಿದು ಸ । ತ್ಕರಿಸಿ ಮಾತೆಯರಿಗೆ ರಾಮು ಹರೇ ॥ ಗುರುವಿಗೆರಗಿ ಪ್ರಜೆ ಪರಿವಾರಕೆ ಸಂ । ದರುಶಣವಿತ್ತ ಶ್ರೀರಾಮು ಹರೇ ॥ ರಾಮು ಹರೇ ॥ ೧೨ ॥ ರಾಜಿಪ ಕೀಶ ಮಹಾಜನಕ್ಕೆಲ್ಲ ಸು । ಭೋಜನ ವೆಸಗಿದ ರಾಮು ಹರೇ ॥ ರಾಜಮಾನ್ಯ ರಾಜಾಸನಕ್ಕೇರಿದ । ರಾಜ ಶ್ರೀಕರ ರಘುರಾಮು ಹರೇ ॥ ರಾಮು ಹರೇ ॥ ೧೩ ॥ ಮಾನಿಸಿ ಭಕತಗೆ ತಾನೆ ಶ್ರೀ ರಂಗ ವಿ । ಮಾನವ ಪಾಲಿಸಿ ರಾಮು ಹರೇ ॥ ವಾನರರನು ಪರಮಾನಂದದಿ ಗೀ । ರ್ವಾಣರ ಮಾಡಿದ ರಾಮು ಹರೇ ॥ ರಾಮು ಹರೇ ॥ ೧೪ ॥ ಲೋಕದ ವರ ವಳಲಂಕಾಪುರದೊಳು । ಖ್ಯಾತದಿ ನೆಲಸಿದ ರಾಮು ಹರೇ ॥ ಶ್ರೀಕರ ಮಾಪತಿ ವೆಂಕಟರಮಣ ಕೃ । ಪಾಕರ ಜಯ ಜಯ ರಾಮು ಹರೇ ॥ ರಾಮು ಹರೇ ॥ ೧೫ ॥ ಶ್ರೀಃ ॥

॥ ೭೪ ॥ ರಾಗ, ಸುರುಟ [ಧಾಟಿ:- ] ಚೌತಾಳ

ಶ್ರೀಹರೀ ಕೃಷ್ಣ ಮುರಾರೀ । ಕೇಶವ ಚಕ್ರಧಾರೀ ॥ ಶ್ರೀಹರಿ ಕೃಷ್ಣ ॥ ಪಲ್ಲ ॥ ಸುಂದರ ಸುಮನಸ । ಬೃಂದ ಮಾನಿ ಮಾನಸ । ನಂದ ಗೋವರ್ಧನೋದ್ಧಾರೀ ॥ ಶ್ರೀಹರಿ ಕೃಷ್ಣ ॥ ೧ ॥ ಹಂಸವಾಹನಸ್ತೋತ್ರ । ಕಂಸ ಮಥನ ನಿತ್ಯಾ । ಹಂಸಡಿಬಿಕಚಾಣೂರವೈರೀ ॥ ಶ್ರೀಹರಿ ಕೃಷ್ಣ ॥ ೨ ॥ ವಾತ ವತ್ಸಪ್ರಲಂಬ । ಖ್ಯಾತ ಬಕಧೇನುಕ । ಪೂತನಿ ಪ್ರಾಣಾಪಹಾರೀ ॥ ಶ್ರೀ ಹರಿ ಕೃಷ್ಣ ॥ ೩ ॥ ಕಂತುಪಿತ ಶ್ರೀ ಲಕ್ಷ್ಮೀ । ಕಾಂತ ಶ್ರೀಕೃಷ್ಣ ಮುದ । ಸಂತ

ಸುದರ್ಶನಧಾರೀ ॥ ಶ್ರೀಹರಿ ಕೃಷ್ಣ ॥ ೪ ॥ ಸಾರಸಭವಪಿತ । ಶ್ರೀರಮಾಧವ ಪಾರ್ಥ । ಸಾರಥಿ ದುರಿತ ಉತ್ತಾರೀ ॥ ಶ್ರೀಹರಿ ಕೃಷ್ಣ ಮುರಾರೀ ॥ ೫ ॥ ಶ್ರೀ

॥ ೬೫ ॥ ರಾಗ, ಅಸಾವೇರಿ [ಧಾಟಿ:– ಕರುಣಿಸೊ ಭಾಗ್ಯಪ್ರದಾಯಕಾ] ಏಕತಾಳ

ನುತಿಸಲೆನ್ನಳವೆ ಕೀರ್ತಿಯಾ । ಶ್ರೀರಾಮನ ಮೂರ್ತಿಯ । ನುತಿಸಲೆನ್ನಳವೆ ಕೀರ್ತಿಯಾ ॥ ಪಲ್ಲ ॥ ನುತಿಸಲೆನ್ನಳವಲ್ಲ ರಾಘವನಾ । ರತಿಪತಿ ಪಿತನಾನತ ವಾಂಛಿತನಾ । ಸಿತಕಂಠಾದಿ ಸುರೌಘಾರ್ಚಿತನಾ । ಶ್ರುತಿಸ್ಮೃತಿ ತತಿ ರಘುಪತಿಯ ಚಾರಿತ್ರವಾ ॥ ನುತಿಸ ॥ ಅ.ಪ. ॥ ಪರಮ ದಶರಥಾತ್ಮಜನೆಂದೆನಿಸೀ । ವರ ಗಾಧಿಜ ಮುನಿಯ ಸವನ ಸಲಿಸೀ । ದುರುಳ ಸುಬಾಹು ತಾಟಕಿಯ ಸಂಹರಿಸೀ । ಚರಣರಜದೊಳಹಲ್ಯೆಯನುದ್ಧರಿಸೀ ॥ ಹರನ ಬಿಲ್ಲೆತ್ತಿ ಝಾಡಿಸೀ । ಭೂಜಾತೆಯ ಸ । ತ್ಕರಿಸೀ ಭಾರ್ಗವನ ಸೋಲಿಸೀ । ತಾ ಪಿತನಾಜ್ಞೆಗೆ ಸಂ । ಚರಿಸುತಾರಣ್ಯವ ಶೋಧಿಸೀ । ದೈತ್ಯರನೊರಸೀ ॥ ಭರದಿ ಮೃಗವ ತರಿದು ಮುಂದೆ ಬರುತಾ । ಸೀತಾಸುದ್ದಿಯ। ನೊರೆದ ಜಟಾಯುವಿಗೆ ಮುಕ್ತಿಯ ಕೊಡುತಾ । ಪವಮಾನಗಿತ್ತು । ದರುಶನ ಭಾಸ್ಕರಜಗೊಪ್ಪಿಸಿಕೊಳುತಾ । ವಾಲಿಯ ಕೊಲುತಾ । ಮೆರೆವ ಪ್ಲವಗಬಲವೆರಸಿ ಕಲ್ಲೊಟ್ಟುತಾ ॥ ಶರನಿಧಿಯನುತೆ ಬಂಧಿಸಿ ನಡದೂ। ದಶ। ಗೊರಳನ ವಂಶವೆಲ್ಲವ ಬಡಿದೂ । ಆ । ಪುರಕಿಡುತಲಿ ಶರಣನಿಗೊಲಿದೂ ॥ ಭರಿತ ವಿಮಾನಕ್ಕಡರಿ ಸತಿ ಸಹಿತೈ।ತರುತ ಅಯೋಧ್ಯವಿಸ್ತರವೇರ್ದ ವಿಭವವ॥ ನುತಿಸ ॥೧॥ ಮನುಜರ ಕಲಿಯುಗದಲಿ ರಕ್ಷಿಸಲು । ಅನುಜ ಲಕ್ಷ್ಮಣ ಸೀತೆ ಸಮೇತದೊಳು । ಮಿನುಗೆ ಮೂರುತಿಯಾಕೃತಿಯ ಧರಿಸಲು । ವನಜಭವನು ಅರ್ಚಿಸಿ ಪೂರ್ವದೊಳು ॥ ಸನಕಸನಂದನಾದ್ಯರು। ದೈನ್ಯದಿ ಪ್ರತಿಮೆ।ಯನು ಬೇಡಿಕೊಳಲು ವಂದ್ಯರೂ । ಲೋಕೇಶ ಕೊಡಲು । ಮಣಿದು ಪೂಜಿಸುತಿರ್ದರೂ ॥ ಕೆಲವು ಯುಗಾಂತರ।ವನು ಪೋಗೆ ಬಾದರಾಯಣರಿಗಂದೂ । ತ್ರೈವಿಗ್ರಹವನು । ವಿನಯದಿಂದಿತ್ತರು ತಾವೈತಂದೂ । ಬದರಿಕಾಶ್ರಮಕೆ। ಅನಿಲ ಸರ್ವಜ್ಞಾಚಾರ್ಯರೈತಂದೂ ॥ ಅವರಿಂದಿರಿಲಿ ನಿಂದೂ ॥ ಸನುಮತದಿಂ ಕೇಳಲು ಪಾಲಿಸಿ । ಗುಣ। ವನಧಿಯ ಬೀಳ್ಕೊಡುತಿರಲಾಗಾ । ಆ। ಕ್ಷಣದಲಿ ಮರಳಿ ಪುರಕೆ ಬರುತಾ । ನ । ಮ್ಮನುಪಮ ಗುರುಗಳ ಕರದಾಗಾ । ಘನ ಋಷಿಕೇಶತೀರ್ಥಾರ್ಯರ ಮುಖದೊಳು।ಫಣಿಶಾಯಿಯನು ಪ್ರತಿಷ್ಠಿಸಿ

ದರ್ಥಿಯಾ ॥ ನುತಿಸ ॥ ೨ ॥ ಚಾರುಪ್ರತಿಷ್ಠೆಯ ಗೈಯ್ಯುವ ಮೊದಲೂ । ಆ ಋಷಿಕೇಶತೀರ್ಥಾರ್ಯರು ಬರಲು । ಆರಾಧಿಪ ವಿಗ್ರಹವಿದದರೊಳು । ಭೂರಿ ಪ್ರಕಾಶಿಸುವಸು ತಗ್ಗಿನೊಳು ॥ ಓರಂತೆಲ್ಲರು ನೋಡಿರೋ। ತಾಂಡವ ಕೃಷ್ಣ । ಕಾರಣಿಕನ ಪಾಡಿರೋ ॥ ಭೃಗುಋಷಿ ಪೂಜಿಸುವ ಉ। ದಾರ ವ್ಯಾಸರ ಕೊಂಡಾಡಿರೋ ॥ ನಿತ್ಯವಿ ಸ್ತುತಿಮಾಡಿರೋ ॥ ಘೋರನೆ ವಾದಿರಾಜರಿಗಿತ್ತಾ । ಹಯುವದನ ಪ್ರಭುಮೆ । ಸಾರಸೌಭಾಗ್ಯವಿದುವೆನುತ್ತಾ । ಆನಂದತೀರ್ಥಾಚಾ । ರ್ಯರ ಮೂರುತಿಯನಿತ್ತಾ । ಶಿವಿಂಯು ನೋಟಿತ್ತಾ ॥ ನೀರಜಭವ ತ್ರಿಪುರಾರಿ ಮುಖ್ಯಾಮರ । ವಾರ ಪೊಗಳಲಸದಳ ವಿಭವೂ । ರಘು । ವೀರಸ್ಥಿರದಿ ನಿಂತಾಗಮವೂ । ಇಕೊ । ದೋರುತಲಿಪೆ ಬಹು ಸಂಭ್ರಮವೂ ॥ ಮಾರಜನಕ ದುರಿತಾರಿ ವೈಷ್ಣವಕುಲೋ । ದ್ಧಾರಭಕತಸಂಸಾರಿಕನಾಟಕ ॥ ನುತಿಸ ॥ ೩ ॥ ಬಲಭಾಗದಿ ನಿಂದಿಹ ಲಕ್ಷ್ಮಣನಾ । ಲಲನೆ ಭೂಜಾತೆ ವಾಮದೊಳಿಹ ಹದನಾ । ತಿಳಿದು ನೋಡಿರೊ ಮಧ್ಯದಿ ರಘುವರನಾ । ಉಳಿದ ಪ್ರಭುಮೆ ತಗ್ಗಿನೊಳಿಹ ಹದನಾ ॥ ಬಲು ಸೌಂದರ್ಯವತೋರ್ಪುದೂ। ಕೆತ್ತಿಗೆ ಮಕುಟ। ತಲೆಗೆರಕವಾಗೀರ್ಪುದೂ। ಕರ್ನಕುಂಡಲ। ವಲುಗಿ ಶೋಭಿಸುತ್ತಿರ್ಪುದೂ॥ ಕಂಠಕ್ಕೊಪ್ಪುವಾ । ಚಲುವ ಪದಕಮಣಿ ಕೇಯೂರಾ। ಕೌಸ್ತುಭರತ್ನದಿ । ಪೊಳೆವ ಚಾಮೀಕರದಮಿತಹಾರಾ । ಕಂಠಿಯು ಎಳೆ। ತುಳಸಿಮಾಲೆ ಮೌತಿಕಹಾರಾ । ಕರದ ಶೃಂಗಾರಾ ॥ ಬಳೆ ಸರಪಣಿ ಬೆರಳುಂಗುರ ಸರಿಯೂ। ಥಳಥಳಿಸುವ ಕಟ ವಡ್ಯಾಣಾ। ನೇ। ವಳ ಸರಪಣಿ ಪೇಳಲದೇ ನಾ । ಘಲ । ಘಲಿಸುವ ಪದಗೆಜ್ಜೆವಿಧಾನಾ ॥ ಉಲಿವಂಬಿಡುವ ನೂಪುರ ಪಾಡುಗ ನಿ । ಟ್ಟಳಯ ಮೋಹಿಪ ಕೋಸಲದರಸನ ವಿಧ ॥ ನುತಿಸ ॥ ॥ ೪ ॥ ಭೂರಿ ದೈತ್ಯರ ವಧಿಸಲು ಗರ್ವದೊಳು । ಕ್ರೂರ ಕೋದಂಡನು ವಾಮಹಸ್ತದೊಳು । ಕೂರಲಗನು ಬಲಕರಾಗ್ರದೊಳು । ಧಾರಣಗೈದು ನಿಂತಿಹ ಠೀವಿಯೊಳು ॥ ದೋರುತ್ತಲಿದೆ ಆನಂದವೂ । ಹಿಂದೆ ಮುಂದಿಟ್ಟ । ಚಾರು ಹೆಜ್ಜೆಗಳ ಚಂದವೂ। ಪೊಗಳಲೆನ್ನಳವೆ। ಶ್ರೀರಮಾಧವನೈಶ್ವರ್ಯವೂ। ಮೆರೆವ ಪಶ್ಚಿಮ। ಪಾರಾವಾರ ತಟಕ್ಕೊಪ್ಪಿದ ವಿಧದೀ। ಶೋಭಿಪಫಲ। ಭಾರವೆಂದೆನಿಪ ಪಟ್ಟಣದೀ । ಶ್ರೀಋಷಿಕೇಶ ತೀರ್ಥಾ । ರ್ಯರ ಪಾರಂಪರೆಯ ಕರಪುಟದೀ ॥ ರತ್ನವಿಷ್ಟರದಿ। ರಾರಾಜಿಸಿ ನೆಲಸುತ ಬುಧವಂಶೋ। ದ್ಧಾರವಗೈಯ್ಯುವ ಯತಿಕುಲಲಲಾಮಾ ! ಸುವಿ। ಚಾರ ವಮಿತ ಸದ್ಗುಣಧಾಮಾ ।

ಕರು । ಣಾರಸಭರಿತ ಸುಜನಪ್ರೇಮಾ ॥ ಶ್ರೀರಘುವರಭೂಷಣ ತೀರ್ಥಾ ರ್ಯರು ನಿರ । ತಾರಾಧಿಸುವ ಉದಾರ ಶ್ರೀರಾಮನ ॥ ನುತಿಸಲೆನ್ನಳವೆ ಕೀರ್ತಿಕಾಯಾ ॥ ೫ ॥ ಶ್ರೀ ॥

॥ ೭೬ ॥ ರಾಗ, ಮಧ್ಯಮಾವತಿ [ಧಾಟಿ:- ಕಂಡು ಕೃತಾರ್ಥನಾದೆ] ತ್ರಿವುಡೆತಾಳ

ಕರುಣದಿ ಪಾಲಿಸೆನ್ನ । ಕೀರ್ತಿಸಂಪನ್ನಾ । ಕರುಣದಿ ಪಾಲಿಸೆನ್ನ ॥ ॥ ಪಲ್ಲ ॥ ಕರುಣನಿಧಿ ಕಮಲಾಕ್ಷ ಭಾಸ್ಕರ । ಕಿರಣ ಭಾಸುರ ಚರಣ ಯುಗ್ಮದ । ಶರಣರಘುಸ್ಮರಣ ಭವಭಯ । ಹರಣ ಶ್ರೀಮದ್ವೆಂಕಟೇಶನೆ ॥ ॥ ಕರುಣದಿ ॥ ಅನು ॥ ಧನ್ಯನಾದೆನು ಹರಿಯೇ । ನಿನ್ನಂಘ್ರಿಗಳನ್ನು ಕಂಡೆ ಹೇ ಧೊರೆಯೇ । ನೀನಲ್ಲದೆ । ಅನ್ಯದೈವವನರಿಯೆ ॥ ಭಾಗ್ಯದ ಶಿರಿಯೇ ॥ ಚಿನ್ಮಯನೆ ಸಚರಾಚರದ ಚೈತನ್ಯಮೂರುತಿ ನಿನ್ನ ಮರತೆನೆಂ । ದೆನ್ನ ಮನ್ನಿಸ ದಿರಲು ಮತ್ತಾರೆನ್ನ ಕ್ಯಾವವರನ್ನ ಕಾಣೆನು ॥ ಕರುಣದಿ ॥ ೧ ॥ ತರಳ ಪ್ರಹ ಲ್ಲಾದನಿಗೆ । ಪಿತನು ಬಾಧಿಸೆ । ಮರುಗಿ ಕೂಗಲಾ ಧ್ವನಿಗೆ । ಶೀಘ್ರದಿ ಬಂದು । ದ್ಧರಿಸಿದೆ ಬಾಲಕಗೇ॥ ವಾರಣೇಂದ್ರಗೇ ॥ ತ್ವರಿತದಿಂದೈತಂದು ಸಲ ಹಿದೆ । ಪೊರದೆ ಧ್ರುವಗೆ ಅಜಾಮಿಳಗೆ ತವ । ಚರಣದಾಶ್ರಿತರಿಂಗೆ ಕ್ಯಾದಾ ತೆರದ ಕೃಪೆಯಲಿ ರಕ್ಷಿಸೆನ್ನನು ॥ ಕರುಣದಿ ॥ ೨ ॥ ನಿತ್ಯತೃಪ್ತನೆಂದೆನಿಸಿ । ವಿದುರನು ನಿನ । ಗತಿಯಿಂದಲಿ ಮನ್ನಿಸೀ । ಕ್ಷೀರವನು ತಂ । ದಿತ್ತು ಪೂಜಿಸಿ ಪ್ರಾರ್ಥಿಸೀ ॥ ಚರಣಕರ್ಪಿಸೀ ॥ ಮತ್ತೆ ಸ್ತುತಿಸಲು ಕುಡಿದೆ ಲೋಕಕೆ ವಿಚಿತ್ರವನು ತೋರಿಸಿ ಸುದಾಮ ತಂ। ದಿತ್ತ ಪ್ರಥುಕ ತಂಡುಲವ ಸೇವಿಸು । ತಿತ್ತೆ ಪ್ರತಿ ದ್ವಾರಕಿಯ ಭಾಗ್ಯವ ॥ ಕರುಣದಿ ॥ ೩ ॥ ಕರದಿ ತ್ತಜಗೆ ಶ್ರುತಿಯಾ । ತಮಾಸುರನ । ಕಾದಿಕೊಂದಿತ್ತ ಧಾತ್ರಿಯಾ । ದೈತ್ಯನ ಕಾಯಾ । ಕಿರಿದು ತಂದೆ ನೀ ಕ್ಷಿತಿಯಾ ॥ ಕೀರ್ತಿ ಮೆರಸಿದೆಯಾ ॥ ಆ ಕುರುಹ ತಪ್ಪಿಸಿ ತೂಗಿ ಭೂತಳ । ಕ್ಕೆರಗಿಸಿದೆ ವರ ಕೈಯ್ಯ ಕೊಡಲಿಯ । ತೊರದೆ ಶರಧಿಯ ಕೌಸ್ತುಭಧೃತ । ತೊರದೆ ಸ್ತ್ರೀಯರ ಕಲ್ಕ್ಯಮೂರುತಿ ॥ ॥ ಕರುಣದಿ ॥ ೪ ॥ ಧಾರುಣಿಗಧಿಕವಾದ । ರಾಜಿಸುವ ಕು । ಮಾರಧಾರೆಯ ತಟದಾ । ನೇತ್ರಾವತಿ । ತೀರ ಪಶ್ಚಿಮ ಪಾರ್ಶ್ವದಾ ॥ ವಟಪುರದಿ ಮೆರೆದಾ ॥ ವೀರ ವೆಂಕಟರಮಣ ವಿಶ್ವಾ । ಧಾರ ತವ ಚರಣಾರವಿಂದವ । ಸೇರಿಸೆನು ದಯದೋರಿ ರಕ್ಷಿಸು । ಮಾರಜನಕನೆ ಶ್ರೀರಮಾಧವ ॥ ಕರುಣದಿ ಪಾಲಿ ಸೆನ್ನ ॥ ೫ ॥ ಶ್ರೀ ॥

॥ ೬೭ ॥ ರಾಗ [ದಾಟಿ:- ] ತಾಳ

ಸಮಯುವಿದಲ್ಲಾ ರನ್ನಾ । ತಾಳೊ ಮೋಹನ್ನಾ । ಸಮಯುವಿದಲ್ಲಾ ರನ್ನಾ ॥ ಪಲ್ಲ ॥ ಸಮಯುವಿದಲ್ಲ ವ್ಯರ್ಥ । ಭ್ರಮಿಸಬೇಡೆಲೊ ಕಾಂತ । ಸುಮಶರನುರುಬೆಗೆ । ಕ್ರಮವಿ ತೋರ್ಪೆ ನಾ ಬಗೆ ॥ ಸಮಯ ॥ ಅ. ಪ. ॥ ಸುಳಿದಾಡಬೇಡವಯ್ಯಾ । ಸ್ಮರಿಸಿನ್ನರೆ । ಘಳಿಗೆ ಸುಮ್ಮನೆ ನಿಲ್ಲಯ್ಯಾ ॥ ಕಾಪಿಪರು ಬಂಧು । ಬಳಗವೆನ್ನಯ ಕೇಳ್ವೆಯಾ । ತಾಳು ದಮ್ಮಯ್ಯಾ । ತಳುಪ ಮಾಡಿದರೆ ನಾ।ಸುಳಿವೆ ಕಾಮತಂತ್ರದಿ । ಗಲಬಲಿಸುತಾ ಕಳವಳಿವು ತೋಲಿವುದು।ಕೆಲಸವಿದಲ್ಲಿದು ಚಲುವ ನೀ ನಡಿನದೀ ॥ ೧ ॥ ನಡುಹಗಲಿನೊ ಳೇನಿದು । ಬೀದಿಯೊಳಿಂಥಾ । ದುಡುಕು ಮಾಳ್ಪುದು ಸಲ್ಲದು ॥ ಅಮರ್ದಪ್ಪಿ ಕುಚವ । ಪಿಡಿವದುಚಿತವಲ್ಲದು। ಆಗದಾಗದು । ಕಡೆಗೆ ಯನ್ನವರು ಕೇಳ್। ಬಿಡರು ಬಲ್ ಜೋಕೆ ನಿನ್ನ ॥ ಬಿಡು ಬಡಿವಾರ ನಡೆಯದು ತಡಿತಡಿ । ಗಡ ಬಡಿಸದಿರು ನೀ ನುಡಿಯ ನಿಧಾನಿಸು ॥ ಸಮಯ ॥ ೨ ॥ ಸುಗುಣ ಶ್ರೀ ವೆಂಕಟೇಶ್ವರಾ । ಬ್ರಹ್ಮಾದಿವಂದ್ಯ । ನಿಗಮಪೂಜಿತ ಶ್ರೀಧರಾ ॥ ಮಾನಾಭಿ ಮಾನ । ಮಿಗೆ ನಿನ್ನದೈ ಕೃಪಾಕರ । ಕಾಯೊ ದಾತಾರಾ । ನಗೆಗೇಡಾಗ ದಂದದೀ। ಬಗೆದೋರಿ ಕೂಡೆನ್ನ ಕೈ । ಮುಗಿವೆ ರಮಾಪತಿ । ಅಗಲದಾ ಬಗೆ ಯಲೀ। ಸೊಗಯಿಸು ಮೂಲಿಕೆ ನಗರಾಧಿಪ ಇದು ॥ ಸಮಯ ॥ ೩ ॥ ಶ್ರೀ

## ಮೂಲ್ಕಿ ರಘೋತ್ತಮನ ಪದಗಳು.

॥ ೬೮ ॥ ರಾಗ, ಶಂಕರಾಭರಣ [ಧಾಟಿ:- ನೋಡಿರೋ । ಶ್ರೀನಿವಾಸ] ಅಷ್ಟತಾಳ

ಭಾವಕೀ । ನೋಡಿವನ್ಯಾರೇ । ಭಾವಕೀ ॥ ಭಾವ ನೋಡ್ಯಾವಾತನಿವ ನೂ । ಸರ್ವದೇವವರೇಣ್ಯನಂತಿಹನು । ಆಹಾ । ಶೀವಿಲಾವಣ್ಯವ ಭಾವಿಸಿ ಪೊಗಳಲು । ಸಾವಿರಗ್ರೀವನುಳ್ಳಾವಾಗಸಾಧ್ಯವು ॥ ಭಾವಕೀ ॥ ಪಲ್ಲ ॥ ಸರಸಿಜಾಸನೆ ಈ ರಾಷ್ಟ್ರದಲಿ । ಬಂದು । ಸ್ಥಿರವಾಗಿ ನಿಂತ ಪ್ರೇಮದಲೀ । ಚೈತ್ರ । ವರ ಚತುರ್ಥಿಯ ಇರುಳಿನಲೀ । ದೀಕ್ಷೆ । ವಿರಚಿಸಿ ಯಜ್ಞಶಾಲೆ ಯಲಿ ॥ ಆಹಾ ॥ ಮೆರೆವ ಭೂಸುರರ ಸತ್ಕರಿಪ ವೇದದ ಘೋಷ । ಧರಣೆ ಗೈಸುವ ವಿದಾಶ್ಚರಿಯವೇನಿದ ಪೇಳೆ ॥ ಭಾವಕೀ ॥ ೧ ॥

ತರಳೆ ನೀ ಕೇಳು ಪ್ರವೀಣೆ । ಈತ । ಸುರಗಾದ್ರಿವಾಸನು ಕಾಣೆ ॥ ಪರಶುರಾಮ ಸೃಷ್ಟಿಯೊಳಿರುವ ಸುಜನರನು । ದ್ಧರಿಸಲೋಸುಗ ಬಂದಿರುವ

ಬ್ರಹ್ಮರಥವ ॥ ವಿರಚಿಸುತ್ತೇರುವ ಪರಸಾರಂಭಕೆ । ಮೆರೆವ ಸುಮಂಗಲಕರ ಮಖದೀಕ್ಷೆಯು ॥ ವಿರಚಿಸಿ ದಿವ್ಯಾಂಕುರವ ಸಮರ್ಪಿಸು । ವರೆ ಬ್ರಾಹ್ಮಣರ ತತಿಭರಿತ ವಿಘೋಷಾ ॥ ತರಳೆ ನೀ ॥ ೨ ॥

ಚದುರೆ ಪಂಚಮಿಯುದಯದಲೀ । ತನ್ನ । ಸದನ ದ್ವಾರದ ಇದಿರಿನಲೀ । ಸಂಭ । ವದಗಿ ನಿಂದಿರಿಸಿ ಲೀಲೆಯಲೀ । ಸರ್ವ । ಬುಧರ ಮಧ್ಯದಿ ಆ ರಾತ್ರೆಯಲೀ ॥ ಆಹಾ ॥ ಮುದದಿ ಹಕ್ಕಿಯನೇರಿ ವಿಧದಿ ಮತ್ತೆರಡನೆ । ಯಧಿಕ ತೇರಡರುವ ಪದವವೇನಿದ ಪೇಳೇ । ಭಾವಕೀ ॥ ೩ ॥

ಮುಗುದೆ ಕೇಳ್ ಧ್ವಜಕೆ ಸ್ತಂಭವನೂ । ಮಾಡಿ । ನಿಗಂಡಿಸುವ ದುಂಟೀ ಧ್ವಜಯನೂ ॥ ಬಗೆಗೆ ಪೂಡುತಾಗ್ರದೀ ಖಗವಾಸುಗರೀರ್ವರ । ಮಿಗೆ ಮೇಲಡರಿಸುತ್ತಾ ಸುಗುಣ ಸ್ವಾರಿ ಯೋಚಿಸಿ ॥ ನಿಗಮಸಮೂಹವು ಪೊಗಳಲು ಗರುಡನ । ಪೆಗಲೇರಿಸೀ ಝಗಝಗಿಸುವದಾಭರ ॥ ಣಗಳ ಪ್ರಕಾಶದ ಜಗದುದ್ಧಾರನು । ಮುಗುಳೆ ರಥವ ಬಹ ಸೊಗಸಿದ ನೋಡೇ ॥ ॥ ತರಳೆ ನೀ ॥ ೪ ॥

ಬಾಲೆ ಓಹೋ ಈತನ್ಯಾರೇ । ಅಮ್ಮ । ಶೂಲಿಯಂತಿಹ ಹೊಂತಕಾರೇ । ಗುಣ । ಶೀಲನು ಸ್ಥೂಲಶರೀರೇ । ನೋಡೆ । ಮೇಲು ಪೀತಾಂಬರಧಾರೆ ॥ ಆಹಾ ॥ ಕೋಲುಬೆತ್ತವು ತ್ರಿಶೂಲ ಕೃಷ್ಣಾಜಿನ । ಸೀಳು ಚರ್ಮವು ಪಿಡಿದೋಲಗಿಸುವನ್ಯಾಕೇ ॥ ಭಾವಕೀ ॥ ೫ ॥

ಕಂಡೆಯಾ ನಿಪುಣನಾಕೃತಿಯಾ । ಇವನ । ಮುಂದೆಯೊಳಿಹ ಭಾಗೀರಥಿಯಾ ॥ ರುಂಡಮಾಲೆಯು ಕರ್ಣಕುಂಡಲಗಳ ಜೋಡು । ಕುಂಡಲಿ ತ್ರಿಶೂಲವುದ್ದಂಡ ಡಮರುಗವು ॥ ಗುಂಡುಡಿಗೆಯು ಮೇಲೆ ಹಿಂಡುಗೆಜ್ಜೆಯು ಸರ । ಗೊಂಡೆ ಸುವರ್ಣದ ತಂಡದಿ ಮೆರೆವ ಪ್ರ ॥ ಚಂಡ ಜಟಾಧರ ಮಂಡಲದೊಳಗೆ ಅ । ಖಂಡಿತ ಭೈರವ ಪಂಡಿತನಿವನೂ ॥ ತರಳೆ ನೀ ॥ ೬ ॥

ಮತ್ತೊಂದಿಹುದು ಈ ಪುರುಷನ । ಸುತ್ತ । ಮುತ್ತಿಕೊಂಡಿದೆ ಭೂತಗಡಣಾ । ಇರ್ವ । ರೊತ್ತಿಲಿ ಬ್ರಹ್ಮರಾಕ್ಷಿವನಾ । ಕುಣಿ । ವುತ್ತಲಿಹರು ನೋಡೀ ಹದನಾ ॥ ಆಹಾ ॥ ಬಿತ್ತರಿಸೆನಗೆ ಚರಿತ್ರ ಸುಪಾತ್ರಪ । ವಿತ್ರನ ಚಿತ್ರ ವಿಚಿತ್ರವೇನಿದ ಪೇಳೇ ॥ ಭಾವಕೀ ॥ ೭ ॥

ಬಿಡದೆ ಸಜ್ಜನರ ಬಾಧಿಸುತಾ । ಮಹಾ। ದಡಿಗಜಟ್ಟಿಗ ಭೂತಪ್ರೇತಾ ॥ ವಡನೆ ಬ್ರಹ್ಮರಾಕ್ಷಸ ಮಿಡುಕ್ಯಾಡುವ ಪಿಶಾಚ । ಗಡಣ ಘೋಂಪಿಸಲು ಮೃಗದರೀ ಪೀಡಿಸುತಿರೆ ॥ ಕಡು ಶೌರ್ಯಗಳ ಘೋರ್ಗುಡಿಸುತ ತೀರ್ಥವ । ಝುಡಿದು ಖಳರ ಸೆರೆಬಿಡಿದಾ ಬ್ರಹ್ಮರ ವಶ ॥ ಕೊಡುತಾ ವೇಳ್ಯದಿ ಕೊಡುವ ಬಲಿಗೆ ಖುಷಿ । ವಡುತಾ ಮೃಡಸೊಳು ಸಿಡಿದಾಡುವವು ॥ ತರಳೆ ನೀ ॥ ೮ ॥

ಧನ್ಯನಿವನು ಧರಿತ್ರಿಯಲಿ । ಭಲೆ। ಮಾನ್ಯನವನು ತ್ರಿದಶರಲಿ । ಸುಪ್ರ। ಸನ್ನ ಶ್ರೀಹರಿಯ ಸೇವೆಯಲಿ। ಕೃಪೆ। ಯನು ಪಡದ ನಿಷ್ಠೆಯದಲಿ ॥ ಆಹಾ ॥ ಕನ್ನೆ ಸದ್ಗುಣಗಣರನ್ನೆ ಕೇಳಿಲೆ ಈತ ಮುನ್ನನೆಲ್ಲಿರ್ದ ಸಂಪನ್ನ ಪೇಳ್ವೆನಗ ಕೇಳ್ ॥ ಭಾವಕೀ ॥ ೯ ॥

ಪುರವು ಈತಗೆ ಗಂಗಾತೀರ । ರಾಮೇ । ಶ್ವರಕೆ ಮುತ್ತೈದ ಈ ಧೀರ ॥ ಭರದಿ ಸೇತುಸ್ನಾನವ ವಿರಚಿಸಿ ಹೇಮಾದ್ರಿಗೆ । ತೆರಳಿ ಶ್ರೀನಿವಾಸನ ದರುಶನವ ಮಾಡಿರೆ ॥ ಕರದು ಶರಣನೆಂದರಿತು ಮುಂತ್ರಿತ್ವವ । ಧರಿಸಿ ಪರಿಶಜನ ಬರಿಸಿ ಕಾಣಿಕೆಯನು॥ ತರಿಸನುತಲಿ ಧರಿಯವಲು ಬರಿದಿಲ್ಲಿರುವ ಶ್ರೀಚ್ಛೈರವ ಘೋರೆ ನಯನವನಿ । ತರಳೆ ನೀ । ೧೦ ।

ಅರಿತೆ ನಾ ನಿನ್ನ ನಿಷ್ಠೆಯವಾ। ಇಂಥಾ । ಸರಸದುತ್ಸವದ ಸಂಭ್ರಮವು ವಾ । ನೋಡಿ । ಭರದಿ ಹಾಟಿದೆ ಭವಾರ್ಣವವ । ಇನ್ನು । ಮರೆಯದೀತನ ದಿವ್ಯಪದವ ॥ ಆಹಾ ॥ ಸ್ಮರಿಸಿರೂ ಮೂಲಿಕೆಸ್ಥರದ ಶ್ರೀ ವೆಂಕಟೇ। ಶ್ವರ ನರಸಿಂಹ ಶ್ರೀಕರ ರಘನಾಥನನ ಕೇಳ್ । ಭಾವಕೀ । ೧೧ ॥ ಶ್ರೀ ॥

॥ ೬೯ ॥ ರಾಗ, | ಧಾಟಿ:- | ತಾಳ

ರಮಣಿ ಇಂದಿನಲಿ ನೋಡಮಮ ಜೋಡಿಗೊಂದೇನಮುತ। ಬ್ರಹ್ಮಾಂಡ ನಾಯಕನಾ ॥ ಭ್ರಮಿಸದೆ ಪೆಗಲೋಳ್ । ಸಂಭ್ರಮದಿ ಪೊತ್ತು ಸ್ವಾಂಗೆ ಗಮಿಸುವ ಕಪಿ ಈತನ್ಯಾರೆ ॥ ೧ ॥

ಕಪಿಯನ್ನದಿರೆಲೆ ನಿಪುಣೆ ಈ ಹನುಮನು । ಸುಫಲನು ನಿನ್ನಾಣೆ । ತ್ರಪನಕಲೇಶನು ಕೃಪೆಯೊಳವನ ಮೊದ । ಲುಪಚರಿಸಿದ ಕಾಣೆ ॥ ಕಪಟವಿ ದಲ್ಲಿದು ನೃಪತಿಗೆರಗಿ ಜಲ । ಧಿಪನನುಲ್ಲಂಘಿಸಿದಾ । ಚಪಲನು ಲಂಕೆಯ ನುಪವನದಲಿ ಖಳ । ರಪರಿಮಿತ ಸಂಹರಿಸಿದಾ ॥ ೨ ॥

ಎಲ್ಲಿ ದೊರಕಿದ ಶ್ರೀವಲ್ಲಭಗಿವ ಬಂಟ । ಬಲ್ಲಿದ ಪ್ಲವಗರಾಜೇಂದ್ರ ॥ ಯಿಲ್ಲ ತ್ರೈಜಗದೊಳು ಮುಲ್ಲಿಗಣೆಯು ಕೇಳ್ ಸು। ಳ್ಳಲ್ಲ ಧೀರನೆಂದು ತೋರು ತ್ತಿದೇ ॥ ೩ ॥

ಕುಂದೇನಿವಗೆ ಪರಾಕ್ರಮದೋಳ್ ಸಖಿ । ಇಂದ್ರಾರಿಯು ರಣದೀ । ಹಿಂದೆ ಬ್ರಹ್ಮಾಸ್ತ್ರದಿ ಬಂಧಿಸಿ ಮರ್ಕಟ । ವೃಂದವೆಲ್ಲವು ಭರದೀ ॥ ಕೊಂದಿಡ ಲಾಕ್ಷಣ ಚಂದ್ರದ್ರೋಣಾದ್ರಿಯು । ತಂದು ಸಂಜೀವನದೀ। ಸಂಧಿಸಿ ಸೈನ್ಯದ ಸಿಂಧುಸುಬ್ಬಿಸಿದ ಸ । ಸಿಂಪ್ರನಿವನು ಧಿಟದಿ ॥ ೪ ॥

ಗಿರಿಯ ಪೆಗಲಿನೊಳು ಧರಿಸಿ ತಂದನೆ ಜೀವ । ತೂರಿದನೆಲ್ಲರಸುಳುಹಿ ದನೇ ॥ ಸರಿಯಿಲ್ಲ ಇವ ತನ್ನ ಧೂರೆಯ ಚಿತ್ತವ ಸಾಧಿ । ಸಿರುವ ತಾ ಭಲಿ ಶೂರನಹುದು ॥ ೫ ॥

ನಾರಿ ಕೇಳ್ ಮಹಿಜಾಚೋರನ ರಣದಲಿ । ಮಾರುತಿ ರಾಘವಗೇ । ತೇರಾಗುತ ಪೆಗಲೇರಿಸಿ ಖಳನ ವಿ । ಕಾರವೆಸಗಿದ ಬಗೆ ॥ ಕ್ರೂರ ದೇವಾಂ ತಕ ಶೂರ ನರಾಂತಕ । ರಾಘವದೊಳಗವರ ॥ ವೀರಭದ್ರನ ಕರವಾಳ ಸೆಳ ಸಿರ । ಹಾರಿಸಿದ ಸುಭಟನಾ ॥ ೬ ॥

ಭೃಂಗಕುಂತಳೆ ಕೇಳ್ ಶ್ರೀರಂಗಧಾಮನ ರಣ । ರಂಗದೀ ಪೊರುವ ದುಚಿತವೂ ॥ ಸಂಗ್ರಾಮದಲ್ಲಿದು ಹಿಂಗದೀಗಲು ಪೊತ್ತಾ । ಯಿಂಗಿತವೇನೆ ಪೇಳವ್ವಾ ॥ ೭ ॥

ಪ್ರಥಮದಿ ಸೀತಾಪತಿಯು ಸೇವೆಗ ತಾ । ರಥವಾಗಿಹ ಪರಿಯಾ । ಕ್ಷಿತಿಯಲಿ ಪ್ರತ್ಯಕ್ಷಕೆ ಶಕಟವನೇ । ರುತ ಮುಂಡಿಸಿ ಹರಿಯಾ ॥ ಜತನದಿ ಪೊತ್ತುಕೊಳ್ಳುತಲತಿಸಂಭ್ರಮ । ಹಿತವೆಮಗದು ತೋರೀ । ಅತಿಸೌಭಾಗ್ಯ ವು ಪ್ರತಿದಿನ ಪಾಲಿಪ । ಸತಿ ಕೇಳ್ ದಯದೋರೀ ॥ ೮ ॥

ಯುವತಿ ನೋಡೆಲೆ ಶ್ರೀ ಕೇಶವನು ಯೇನಿಮು ತನ್ನ । ಭವನ ಸುತ್ತಲು ಬಪನ್ಯಾಕೇ ॥ ನಿವಹ ನೃತ್ಯವಾದ್ಯನೂದುವ ಶಂಖಧ್ವನಿಯು ಕೇಳ್ । ವಿವರಿಸೆನಗೆ ಈ ವಿನೋದಾ ॥ ೯ ॥

ಬಾಲೆ ನೋಡೆಲೊ ಈಕೊ ಸಾಲು ಸಾಲಿನಲೀ । ಹಿಲಾಲು ದೀವಿಟಿಕೆ ಗಳು । ಮೇಲು ನಿಸಾಣಿ ಚಡಾಳಿಪ ಚಮರ ವಿ । ಶಾಲ ಛತ್ರ ಟಕ್ಕೆಯೊಳೂ ॥ ಲೀಲೆಯಲಿ ರಜತ ಕೋಲು ಬೆತ್ತವು ಪಿಡಿ। ದೋಲಗಿಸುವ ಸುಜನಾ । ಜಾಲ ರಕ್ಷಿಸಲು ಶ್ರೀಲೋಲ ನೆವದಿ ಬಹ । ಶೀಲಸುತ್ಸವಕೆ ಘನಾ ॥ ೧೦ ॥

ಮರವೆನೆ ನಿನ್ನ ಕೇಳ್ ಸರಸಿಜಾನನೆ ಇಹ । ಪರಕೆ ಸಾಧನವ ತೋರಿಸಿದೇ ॥ ಮೆರವ ಸೃಷ್ಟಿಯಾನಂದ ಪರಮ ಮೂಲಿಕೆಯೊಳ್ ಶ್ರೀ । ಕರ ರಮಾಧವನ ನಾ ಕಂಡೇ ॥ ೧೧ ॥ ಶ್ರೀ ॥

॥ ೭೦ ॥ ರಾಗ [ಧಾಟಿ:- ] ತಾಳ

ಚಂದಿರವದನೆ ಕೇಳಿಂದು ಸಪ್ತಮಿಯೊಳಾ । ನಂದದುತ್ಸಹವಿದೇನೇ ॥ ಸುಂದರಧರನ ಪೊತ್ತವನೀತಸುರಗನ್ಯಾ । ರಂದು ಪೇಳೆನಗೆ ಜಾಣೇ ॥ ೧ ॥

ಲಾಲಿಸು ಪ್ರೇಮದಿ ಬಾಲೆ ನೀ ಸುಮದೀ । ಶ್ರೀಲಲಾಮನ ಭಾಗ್ಯ ಪೇಳ್ವ ಸಂತಸದೀ ॥ ಶೀಲ ಸುಗುಣ ಸುಕುಮಾಲ ಶ್ರೀವೈಕುಂ । ಠಾಲಯದಲಿ ಒಡ್ಡೋಲಗಗೊಟ್ಟಿಹ । ಮೂಲ ಸುಪುತ್ರಿಗೆ ವ್ಯಾಳನಿವನು ಈ । ಭೂಲೋಕದೊಳಾಲೀಲೆಯ ತೋರುವ ॥ ೨ ॥

ಕಮಲದಳಾಕ್ಷಿ ನೋಡಮುಮ ಭುಜಂಗನಿ । ಗಮಿತ ಪೆಡೆಗಳಿದೇನೇ ॥ ವಿಮಲನ ಶಿರದ ಮೇಲೆತ್ತಿ ಪಿಡಿದ ಈ । ಕ್ರಮವ ಪೇಳೆನಗೆ ಜಾಣೇ ॥ ೩ ॥

ಇಂದಿದು ಪೊಸತಲ್ಲ ಮಥುರಪಟ್ಟಣದೀ । ಹಿಂದೆ ಶ್ರೀಹರಿಯವತರಿಸಲಾಕ್ಷಣದೀ ॥ ಕಂದನೆನುತ ಶ್ರುತಿವಂದ್ಯನ ಯೆತ್ತುತ । ಅಂದು ಗೋಕುಲಕಿಡಲೆಂದು ಶೌರಿಯು ಬರೆ ॥ ಮುಂದೆ ತನ್ನೊಡಲನು ಬಂದಿವ ಹಾಸಿಮೇ । ಲಿಂದು ನೆಗಹಿ ಪೆಡೆಯುಂಡೇ ನೆಗಹಿದಾ ॥ ೪ ॥

ನಾರಿ ಕೇಳಿವ ಹೊಂತಕಾರಿ ಸರಿಸ್ಸ್ಪ । ಧೀರನೆಯಹುದಹುದೂ ॥ ವಾರಿಜಾಕ್ಷನ ಪೊತ್ತ ಭಾರವ್ಯಾಕಿರದು ನಿ । ಚಾರಿಸಿ ಪೇಳೆಯಿದು ॥ ೫ ॥

ವಾಸುಕಿಯೆನಿಸೀ ಹಾಸಿಕೆಯಾದ ಹರಿಗೇ । ಬೇಸರಿಸ್ಸದೆ ಮುಂದೆ ನೇಣಾದ ಗಿರಿಗೇ ॥ ಸಾಸಿರಪೆಡೆಯು ವಿಲಾಸದೀ ಪಸರಿಸು । ತಾ ಸರಸದೀ ಕ್ಷಿತಿ ತೋಷದೀ ಪೊರೆವಾ ॥ ಶೇಷಪ್ರಬಲ ಅತಿ ವೇಷಧರನು ಮಹ । ಶೇಷನಿವನು ಜಗದೀಶನ ಶರಣಾ ॥ ೬ ॥

ಭಾವೆ ಲೇಸಿದು ವಾಸುದೇವಗೆ ಹಾವಿನ ಸಹ । ವಾಸವಾಯಿತಲ್ಲೇ ॥ ಶಿವಿ ಮತ್ತೊಂದ ಕೇಳುವೆನು ಹತ್ತವತಾರ । ಕೋವಿದಗಹುದು ಬಾಲೇ ॥

ದಿಟ್ಟೆ ಕೇಳಹುದು ಕೊಂದನು ಮುನ್ನ ತಮನಾ । ಬೆಟ್ಟವ ನೆಗಹಿ ಭೂಮಿಯ ತಂದು ಖಳನಾ ॥ ಹೊಟ್ಟೆ ಬಗಿದು ಅಡಿಯಿಟ್ಟು ನೃಪರ ತಲೆ । ಕುಟ್ಟಿ ಅಬ್ಧಿಗೆ ಕಲ್ಲೊಟ್ಟಿ ಗೋಕುಲದಲೀ ॥ ಪುಟ್ಟಿ ನಾಚಿಕೆಯನು ಬಿಟ್ಟು ಬತ್ತಲೆ ಹಯ । ಥಟ್ಟುವಡರಿದ ಈ ಸೃಷ್ಟಿಗೊಡೆಯನಿವ ॥ ೮ ॥

ಏನು ಚೋದಿಗವು ಶ್ರೀನಿವಾಸನು ಮುನ್ನ । ತಾನೇ ಶೇಷಾದ್ರಿಯಲೀ ॥ ಜಾಣನಲ್ಲೀರ್ದು ಇಲ್ಲ್ಯಾಕೆ ಬಂದಿರುವ ನಿ । ದಾನ ಪೇಳ್ ಪ್ರೇಮದಲೀ ॥

ಶರಣವತ್ಸಲನೆಂಬ ಬಿರಿದುಳ್ಳ ಹರಿಯೂ । ಸುರನರೋರಗರ್ಗೆ ಸೌಭಾಗ್ಯದ ಸಿರಿಯೂ ॥ ವರ ಪ್ರಹಲ್ಲಾದನು ಶರಿರಾಜನು ಧ್ರುವ । ತರಳೆ ದ್ರೌಪದಿ ಸಹ ಕರೆಯಲು ಬಂದಿಹ ॥ ತೆರನಂತೆಮ್ಮನು ಪೊರೆಯಲು ಬಂದಿ । ಲ್ಲಿರುವ ಸುವರ್ಣದ ಗಿರಿಯಾಧಿಪನಿವಾ ॥ ೧೦ ॥

ಭಲಿರೆ ಶಾಬಾಸು ಯೀ ಆಲನೆ ಮೂಲಿಕೆಯೊಳು । ಚಲುವ ರಮಾಧವನಾ ॥ ಪಲಿದು ತ್ತೋರಿಸಿದೆ ಸತ್ಕುಲದೊಳುತ್ತಮೆ ಕೇಳು । ತ್ತಿಳಿದೆ ನಿನ್ನಯ ಸುಜ್ಞಾನಾ ॥ ೧೧ ॥ ಶ್ರೀಃ ॥

॥ ೭೧ ॥ ರಾಗ. [ಧಾಟಿ:- ] ತಾಳ

ಸರಸಿಜಾಕ್ಷಿ ಇವನ ನಿಜವನರಿಯದಲ್ಲೆ ಬಾಲೇ ॥ ಹರಿಯಾ ಸಿರಿಯಾ ಪ್ಟರಿಯಾ ಪರಿಯಾನರುಹಿಸ ಆ ಲೀಲೇ ॥ ಸರಸಿಜಾಕ್ಷಿ ॥ ೧ ॥

ಮೊದಲು ವೇದಚೋರನ ಕೊಂದಾ । ಮತ್ತೆ । ಸುಧೆಯು ನಿರ್ಜರರುಣಲೆಂದಾ । ಭೂಮಿ । ಯೊದಗೀ ಕಂಕುಳೊಳಿಟ್ಟು ತಂದಾ ॥ ಖಳನ ॥ ಸದದು ಗಂಗೆಯು ತನ್ನ । ಪದದುಂಗುಟದಿ ಪೆತ್ತಾ ॥ ಈತನೇ । ನೋಡವ್ವ ಭಾಗ್ಯನಿಧೀ ॥ ಈತನೇ ॥ ೨ ॥

ಯೇನು ಇವನ ಚರಿತೆ ಕೇಳ್ವದಾಶೆ ಯೆನಗೇನ್ ಬಾಲೇ । ಆಸುವೇಶ ಶ್ರೀಶಗೇನ್ ಸು । ಭಾಷೆ ಪೇಳಾ ಲೀಲೇ ॥ ३ ॥

ಮೆರೆವ ಭಾರ್ಗವನಾಗಿ ಬಂದಾ । ಲಂಕಾ । ಪುರವು ಭಕ್ತನಿಗಿತ್ತಾನಂದಾ । ಗೇಹ । ಶರಧಿ ಮಧ್ಯದಿ ಮಾಡಿ ನಿಂದಾ ॥ ಮುದ್ದು ॥ ಸುರಿವ ಮೋಹಕನಾಗಿ । ತುರಗಸ್ವಾರಿ ಗೈದಾತಾ ॥ ಈತನೇ ॥ ೪ ॥

ಮತ್ತೇನಗೈದ ಶ್ರೀ ಪುರುಷೋತ್ತಮನು ಬಾಲೇ । ಚಿತ್ರ ವಿಚಿತ್ರ ಚಾರಿತ್ರ ಬಿತ್ತರಿಸಾ ಲೀಲೇ ॥ ೫ ॥

ಏದುರನ ಗೃಹದಿ ಪಾಲುಂಡಾ । ರುಕ್ಮಾಂ । ಗದನಾತ್ಮಜನ ಅಪ್ಪಿಕೊಂಡಾ । ಕೂಡಿ । ಮುದುಕಿ ಕುಬುಜೆಯ ಸ್ನೇಹ ಕಂಡಾ ॥ ಧ್ರುವಗೆ ॥ ಪದವ ಪಾಲಿಸುತ ದ್ರೌಪದಿಗ ಅಕ್ಷಯವಿತ್ತಾ ॥ ಈತನೇ ॥ ೬ ॥

ಹಲವು ಜನರ ಸಲಹೀ ಕೆಲರ ಕೊಲುವ ಬಗೆಯೇನೆ ಬಾಲೀ ॥ ಅಳಸಿ ಬೆಳಸಿ ಸುಳಿಸುವ ಈ ವಳವ ಪೇಳಾ ಲೀಲೀ ॥ ೭ ॥

ಸಾಧುಸಜ್ಜನರಿಗಾಧಾರೀ । ದುಷ್ಟ । ರಾದವರ ವ್ರಾತಕುಠಾರೀ । ನಿತ್ಯ । ಮೋದಭರಿತ ಸುವಿಚಾರೀ । ಅಮಿತ । ವೇದವಂದಿತನು ಅನಾದಿಮೂರುತಿ ॥ ದೇವಾ ॥ ಈತನೇ ॥ ೮ ॥

ಹರಿಯು ಇಂಥ ಮಹಾತ್ಮನೆ ಅರಿಯುವಲ್ಲಿ ಬಾಲೀ । ಭರದೊಳಿದ್ದು ಸ್ವಾರಿಗೀತ ತೆರಳ್ವನೆಲ್ಲಿ ಪೇಳೀ ॥ ಸರಸಿ ॥ ೯ ॥

ಸ್ವಾರಿಯುಸ್ವಪ್ನದೊಳುಂಟವಪ್ಪಾ । ಕೇರಿ । ಕೇರಿಗೈತರ ವಾಸುದೇವಾ । ಭಕ್ತೋ । ದ್ಧಾರ ಸಮ್ಮೆಲ್ಲರ ಕಾವಾ । ಬಗೆ । ಗಾರ ಆರತಿಯು ಶೃಂಗಾರ ನೋಡುತ ಬಂದಾ ॥ ಈತನೇ ॥ ೧೦ ॥

ಅತಿ ಸಂಭ್ರಮವು ಈ ಮೂಲಿಕೆಯೊಳ್ ಹಿತದಿ ಕಂಡೆ ಬಾಲೀ ॥ ಅತುಲಿತ ಮಹಿಮ ಶ್ರೀರಮಾಪತಿಯು ಗೈದಾ ಲೀಲೀ ॥ ಸರಸಿ ॥ ೧೧ ॥

॥ ೭೨ ॥ ರಾಗ, [ಧಾಟಿ:- ] ತಾಳ

ಅಮಮ ಇದೇನೇ ಇಂದಿನ ಲೀಲೀ । ನೋಡೆ । ವಿಮಲ ಶ್ರೀ ರಂಗ ನಾಟವು ಬಾಲೀ ॥ ಅಮಮ ॥ ಪಲ್ಲ ॥ ಬ್ರಹ್ಮರುದ್ರಾದಿ ನಿರ್ಜರರಿಂದೂ । ತಮ್ಮ । ತಮ್ಮ ವಿಮಾನಕದರಿ ನಿಂದೂ ॥ ಜನ್ಮಸಾರ್ಥಕವಾಯಿತು ಎಂದೂ । ಸಭದೊ । ಳೊಮ್ಮಲಿ ಘೋಷಗೈವರಾಸ್ತಿಕರಿಂದೂ ॥ ೧ ॥

ಕಮಲದಳಾಕ್ಷಿ ನೋಡೆಲೆ ನೀರೆ । ಇಂದು । ನವಪುಯುತ್ಸವದ ಈ ಬಗೆ ಬೇರೆ । ಕಮಲ ॥ ಪಲ್ಲ ॥ ಕ್ಷೀರಸಾಗರಶಯನ ವಿನೋದದಿ । ಭಾರಿ । ತೇರನೇರಿದನೆಂಬುಲ್ಲಾಸದಿ ॥ ಭೂವಿಬು । ಧರು ನೀಕ್ಷಿಸಿ ತೋಷದಿ । ಆ ಉ । ದ್ಧಾರನ ಗುಣ ನುತಿಪರು ಘೋಷದಿ ॥ ಕಮಲ ॥ ೨ ॥

ಅಖಿಲ ಬ್ರಹ್ಮಾಂಡ ನಾಯಕನಿವನು । ಭೂತ । ನಿಕರಕೆ ಬಲಿಯ ಚಲ್ಲುತ ಕೊಳನು ॥ ಸಕಲಂತರ್ಯಾಮಿ ಮತ್ತೆ ರಥವನು । ನೇರ್ದ । ಪ್ರಕಟಿಸಿ ದೇನೆ ಪೇಳೆನಗದನು ॥ ಅಮಮ ॥ ೩ ॥

ವಡಿಗ ಭೂತಾದಿವ್ರಾತಕೆ ದಯದಿ । ತೃಪ್ತಿ । ಪಡಿಸಲು ಬಲಿಯ ಚಲ್ಲುತ ಮುದದಿ ॥ ಬಿಡದೆ ಉದ್ಧಾರಗೈಯುತ ತೋಷದಿ । ತೇರ । ನಡರಿ ಬಾಹನು ನೀ ನೋಡೆಲೆ ಕೆಳದಿ ॥ ಕಮಲ ॥ ೪ ॥

ಸೋವಮಾರ್ಕಜೋತಿ ನೋಡೆ । ಜನ । ಸ್ತೋಮಚ್ಛೈಸುಂಡೆ ಬಿಂಸು ಮಿಗಿಲು ॥ ಚಾಮರ ಛತ್ರ ಸಮ್ಮೇಳದೊಳು । ಗುಣ । ಧಾಮನ ಸ್ವಾರಿಯೇ ನಿದು ಪೇಳು । ಅಮಮ ॥ ೫ ॥

ಪಟಹ ಡಿಂಡಿಮಡಕ್ಕೆ ಶ್ರುತಿಮೌರಿ । ಈ ತಂ। ಬಟಭೇರಿ ಮುಖ್ಯವಾದ್ಯ ದಶೌರಿ ॥ ಸಟೆಯಲ್ಲ ಇದಕೊ ರಥವನೇರಿ । ನಮ್ಮ । ಕಟಕ ರಕ್ಷಿಸಲು ಬಾಹವವಾರಿ । ಕಮಲ ॥ ೬ ॥

ಬಿಡದೆ ಇನ್ನೊಂದ ಕೇಳುವೆ ಕಾಣೆ । ತೇರ । ಧಡಿಗೊದಗಿದ ಮೇಲೆ ನಿದು ಜಾಣೆ ॥ ಬೆಡಿ ಕಂಭಧ್ವನಿಯು ಗರ್ಜನೆ ಯೇನೆ । ಇಂಥಾ । ಬೆಡಗ ಪೇಳಿನಗೆ ಭಲೆ ಶಾಣೆ । ಅಮಮ ॥ ೭ ॥

ಜನರು ಯಲ್ಲಾಡಡಂಜಿದ ಭಯುವ। ತಮ್ಮ ।ತನುವಿಗೆ ಸೋಂಕಿರಲದ ನೆಲ್ಲವಾ ॥ ಮನದೀ ರ್ಘೊಮ್ಮನಿಸಿ ಬೆಚ್ಚೋಡಿಸುವ । ಕಂಭ । ಧ್ವನಿಯೆಸಗು ವುದಿದು ಹರಿಯಾಟವಾ । ಕಮಲ ॥ ೮ ॥

ಮರಳಿ ಯೇರಿದ ಇದ್ಯಾವ ವಿಮಾನ । ಚಕ್ರ । ತಿರುಗುತಲಿದೆ ನೋಡದರ ತ್ರಾಣ ॥ ಬರುವ ಘರ್ಜನೆಯು ಕೇಳು ನಿದಾನ । ವಿಶ್ವಂ । ಭರನ ಲೀಲೆಯಿದು ಪೇಳು ವಿಧಾನಾ ॥ ಅಮಮ ॥ ೯ ॥

ಸಿಂಧುರಗಮನೆ ಸುರತಲೋಲಿ । ಇದು । ಚಂದ್ರಮಂಡಲವು ಕೇಳೆಲೆ ಬಾಲೆ ॥ ಇಂದ್ರಾದಿ ಸುರರೋಲೈಸುವ ಲೀಲೆ । ಗಾಗಿ । ಇಂದು ಇದೇರಿ ಬರುವನಲ್ಲೇ ॥ ಕಮಲ ॥ ೧೦ ॥

ಚಲುವ ಪಲ್ಲಂಕಿ ಯೇರಿದ ಕಾಣೇ । ಯಡ । ಬಲದೀ ಸ್ತ್ರೀಯರಿರ್ವ ರ್‍ಯಾರೆಲೆ ಜಾಣೇ ॥ ಬಳಿಕ ತೊಟ್ಟಿಲೊಳು ಮಂಡಿಸಿ ತಾನೇ । ವೇದ । ಗಲಭೆ ಯೊಳ್ತೂಗಿಸಿಗೊಂಬ ಯಿದೇನೇ ॥ ಅಮಮ ॥ ೧೧ ॥

ಆದಿಪತ್ನೀ ಶ್ರೀಲಕ್ಷ್ಮಿ ತಾನೊಬ್ಬಳೇ । ತೋರ್ಪ । ಳೀದ್ವಯ ರೂಪಿಲಿ ಮೆರದಿಹಳೇ ॥ ವೇದವೇದ್ಯನ ಕೂಡುತ ವಿನೋದದೀ । ಈ ಪ । ರೀ ದಿವ್ಯ ವಸವಂತ ಮಂಟಪದೀ ॥ ಕಮಲ ॥ ೧೨ ॥

ಪರಮ ಪಾವನೆಯೆ ಲಾಲಿಸಿ ಕೇಳೇ । ದೇವ । ಮೆರೆವ ಮಂಟಪದಿಂದ ಪೊರಡುತಲೇ ॥ ಯರಕವಾಗಿ ರಮೆಯ ಗೂಡುತಲೇ । ಸುತ್ತು । ಬರು ತೊಳಪೊಕ್ಕು ನುಂಡಿಸಿದ ಬಾಲೇ ॥ ಅಮಮ ॥ ೧೩ ॥

ರತಿಪತಿಪಿತನು ಇದೇ ಪಂಯೂ । ನಮ್ಮ । ಹಿತಕಾಗಿ ಮೊಳ್ಪ ವರುಷಕೊಮ್ಮೆಯೂ ॥ ಸತತ ಸಜ್ಜನರ ರಕ್ಷಿಪ ಜವದೀ । ಕೇಳ । ಚ್ಯುತ ನಮ್ಮುದ್ಧರಿಸುವ ಕರುಣನಿಧೀ ॥ ಕಮಲ ॥ ೧೪ ॥

ಅಹಹ ಆನಂದದೊಂದಿದೆ ಯೆನಗೇ । ತಾಯೇ । ಬಹು ಜನ್ಮ ಮರೆಯ ಬಹುದೆ ನಿನಗೇ ॥ ಮಹಿಯೊಳಧಿಕ ಈ ಮೂಲಿಕೆಯೊಳಗೇ । ನಿನ್ನ । ಸಹಾಯದಿ ಕಂಡೆ ಶ್ರೀರಮಾಧವಗೇ ॥ ಅಮಮ ॥ ೧೫ ॥ ಶ್ರೀಃ ॥

॥ ಕವಿ ವಾಸುದೇವಪ್ರಭುಕೃತ ಪದಗಳು ಸಂಪೂರ್ಣಂ. ॥

# ಕವಿ ಶೇಷಪ್ರಭುಕೃತ ಪದಗಳು.

॥ ೭೩ ॥ ರಾಗ, ಜಂಜೋಟಿ [ಧಾಟಿ:- ಬಾರೋ ಶ್ರೀಹರಿ ಭಕ್ತ] ಚೌತಾಳ

ಶ್ರೀರಾಧಾವಲ್ಲಭ ಸಜ್ಜನಸುಲ್ಲಭ । ದಾಂದ್ರಚ್ಛೇದನ ಪಾಪವಿಮೋಚನ ॥ ನಾರದನುತ ಭಾಗೀರಥಿಪಿತ ಮಹಾ । ಘೋರ ದುಂತ ಉತ್ತಾರಣ ಹರಿಯೆ ॥ ಶ್ರೀರಾಧಾವಲ್ಲಭ ॥ ಪಲ್ಲ ॥ ನಿತ್ಯನಿರಂಜನ ದೈತ್ಯವಿಭಂಜನ । ಸತ್ಯಾತ್ಮ ಪಾವನ ಸದ್ಭಕ್ತಜೀವನ ॥ ಸತ್ವರಜೋತಮ ಕರ್ತುರ್ ಪರಾತ್ಪರ । ಮೂರ್ತಯೇ ನಮಃ ನಮೋಸ್ತು ಸರ್ವೇಶ್ವರ ॥ ಶ್ರೀರಾಧಾವಲ್ಲಭ ॥ ೧ ॥ ಸಿಂಧುಸಂಚಾರಣ ಮಂದರಧಾರಣ । ಇಂದಿರಾನಾಯಕ ಸುಂದರ ಆನಕ ॥ ದುಂದುಭಿನಂದನ ಚಂದ್ರಚೂಡ ಅಮರೇಂದ್ರ ದ್ರುಹಿಣನುತ ದ್ವಂದ್ವಪದಾಬ್ಜ ॥ ಶ್ರೀರಾಧಾವಲ್ಲಭ ॥ ೨ ॥ ಚಿಂತಿತಾರ್ಥಪ್ರದ ಚಿನ್ಮಯ ರೂಪದಾ । ನಂತ ಶ್ರೀಮೂರ್ತಿಯ ಆನಂದ ಕೀರ್ತಿಯ ॥ ನಾಂತೆನ್ನಯ ಹೃದಯಾಂತರದಲ್ಲಿ ನಿ । ರಂತರ ವ್ಯಾಪಿಸೊ ಶ್ರೀಹರಿಯೇ ॥ ಶ್ರೀರಾಧಾವಲ್ಲಭ ॥ ೩ ॥ ಪದ್ಮಪತ್ರೇಕ್ಷಣ ಪಾಂಡವ ರಕ್ಷಣ । ಪದ್ಮನಿಭೇಕ್ಷಣ ಪರಬ್ರಹ್ಮ ಪಾವನ ॥ ಪದ್ಮಾಲಯ ಪಿತ ಪದ್ಮವಿರಾಜಿತ । ಪದ್ಮಜಪಿತ ಪದ್ಮಾಪತೀರಮಣ ॥ ಶ್ರೀರಾಧಾವಲ್ಲಭ ॥ ೪ ॥ ಶಂಖಚಕ್ರಾನ್ವಿತ ಶಾರ್ಙಧನ್ವ ಧೃತ । ಪಂಕಜಲೋಚನ ಪಾಪವಿಮೋಚನ ॥ ಪಂಕಜಭವಪಿತ ರಮಾಪತೀವರ। ಲಂಕಾಧೀಶ್ವರ ವೆಂಕಟರಮಣಾ ॥ ಶ್ರೀರಾಧಾವಲ್ಲಭ ॥ ೫ ॥

॥ ೭೪ ॥ ರಾಗ, ಸಾರಂಗ [ಧಾಟಿ:- ಕೊಡೊ ಕೊಡೊ ಕೊಡೊ] ಚಾಪುತಾಳ

ಶ್ರೀವೈಕುಂಠಪತೇ ವಿಶ್ವಪತೇ । ಪಾಲಯ ಮಾಂ ಪುರುಷೋತ್ತಮಾ ॥ ಶ್ರೀವೈಕುಂಠಪತೇ ॥ ಪಲ್ಲ ॥ ಜಲಚರ ಮಂದರಧರಲಾಚಲಾಧೃತ । ಕಲಾಪೂರ್ಣ ನರಸಿಂಹಾ ॥ ಬಲಿಗರ್ವವಿದಾರಣ ಘನಶ್ಯಾಮ । ಲಲಿತ ಸದ್ಗುಣ ಭಾರ್ಗವ ॥ ಶ್ರೀವೈಕುಂಠಪತೇ ॥ ೧ ॥ ಕೌಸಲ್ಯೋದರ ಕುಮುದಸುಧಾಕರ । ಕಂಸಾಂತಕ ಕಮಲೇಶಾ ॥ ಹಂಸಯಾನಪಿತ ತ್ರಿಪುರವಧೂವ್ರತ । ಧ್ವಂಸಿ ತುರಂಗಮವಾಹನಾ ॥ ಶ್ರೀವೈಕುಂಠಪತೇ ॥ ೨ ॥ ವಿಶ್ವಮಯ ವಿಶ್ವಾತ್ಮ ಜಯ ಜಯ । ವಿಶ್ವಂಭರ ಮಹಾಕಾಯಾ ॥ ವಿಶ್ವವ್ರಜ ವಿಶ್ವಾಂಡಪ್ರೇರಣ । ವಿಶ್ವ ವಿಶ್ವಮಯಧಾರಣಾ ॥ ಶ್ರೀವೈಕುಂಠಪತೇ ॥ ೩ ॥ ಕಾಳಿಯಮಸ್ತಕ ರಂಜಿತ ಪದಕ। ಮಲಾಯ ಕರುಣಾಸಾಗರಾ ॥ ನೀಲಗಾತ್ರ ನಿರ್ಮಲ ಶ್ರೀ ತುಳಸೀ । ಮಾಲಾಲಂಕೃತ ಕೌಸ್ತುಭಾ ॥ ಶ್ರೀವೈಕುಂಠಪತೇ ॥ ೪ ॥ ಭಾಸುರಾಂಘ್ರಿಯುಗ್ಮ ವಳಲಂಕಾ । ಕೋಶಧೀಶ ಶ್ರೀಶ್ರೈಶವಾ ॥ ವಾಸುದೇವ ಕೇಶವ ಶಿವ್ನಪ । ದ್ಮಾಸನಪಿತ ಶ್ರೀರಮಾಧವಾ ॥ ಶ್ರೀವೈಕುಂಠಪತೇ ॥ ೫ ॥ ಶ್ರೀಃ ॥

॥ ೭೫ ॥ ರಾಗ, ಆರಭಿ [ಧಾಟಿ:- ಕಲಯೇ ವಿಷ್ಣು ಕೃಷ್ಣ] ಏಕತಾಳ

ವಂದೇ ಶ್ರೀಕೃಷ್ಣಂ । ಗೋಪಾಲಕೃಷ್ಣಂ ॥ ಪಲ್ಲ ॥ ವೃಂದಾವನ ಸಂಚಾರಣ ಶ್ರೀಮದಾ । ನಂದತೀರ್ಥವಂದಿತ ಸದದ್ವಂದ್ವಂ ॥ ವಂದೇ ॥ ॥ ಅನು ॥ ದಕ್ಷಂ । ಧರಣೀಧರ ಶತಪತ್ರಾಕ್ಷಂ । ಭೀಕರ ದೈತ್ಯಾನ್ವಯ ಶಿಕ್ಷಂ । ಅಣುರೇಣುಚರಾಚರರಕ್ಷಂ ॥ ಪಕ್ಷೀಂದ್ರಗಮನಂ ॥ ಅಕ್ಷಯಾತ್ಮ ಸಹಸ್ರಾಕ್ಷರಕ್ಷ ಸಾ । ಕ್ಷಾತ್ಕರ ಶ್ರೀಲಕ್ಷ್ಮೀಶ ಪರೀಕ್ಷಂ ॥ ವಂದೇ ॥ ೧ ॥ ನಿತ್ಯಂ । ನಿರಮಯ ನಿಗಮಾಗಮಸ್ತುತ್ಯಂ। ಮುನಿಜನ ಹೃತ್ಕಮಲಾದಿತ್ಯಂ । ಮುರಲೀ ಮೃದುವಾದನಕೃತ್ಯಂ ॥ ನಂದಯಶೋದಾ ॥ ನಿತ್ಯತೃಪ್ತ ನಿತ್ಯಾತ್ಮ ನಿರಂಜನ । ಸತ್ಯಸಾಕ್ಷಿ ಸಾತ್ವಿಕಗುಣಭರಿತಂ ॥ ವಂದೇ ॥ ೨ ॥ ತರಣಂ । ಬಹು ಜನ್ಮಾಂತರ ದುಸ್ತರಣಂ । ಕರುಣಾಕರ ದೀನೋದ್ಧರಣಂ । ಪೂತನಾದ್ಯಸುರ ಸಂಹರಣಂ॥ ಕೌಸ್ತುಭರತ್ನಾಭರಣಂ ॥ ದೇವಕಿತರುಣಂ ಭಾಸ್ಕರ ಕಿರಣಂ । ಭವಭಯಹರಣಂ ಪಾವನಚರಣಂ ॥ ವಂದೇ ॥ ೩ ॥ ಧೀರಂ । ಜಾನಕಿಮುಖಚಂದ್ರಚಕೋರಂ । ಜನಿಮೃತಿಭಯಶೋಕವಿದೂರಂ । ಭವಭಂಜನ ಭಕ್ತೋದ್ಧಾರಂ ॥ ಜಿತಶೂರಂ ॥ ರಾತ್ರಿಂಚರಗಣ ಮದವಾರಣ

ಕಂಠೀರವ ಕೌರವ । ವಾರವಿದಾರ ಮುರಾರಿಮುದಾರं ॥ ವಂದೇ ॥ ೪ ॥ ಶಾಂತಂ । ಸದ್ಗುಣ ರಂಜಿತ ನಿಶ್ಚಿಂತಂ । ವಿಶ್ವಂಭರ ಶ್ರೀಮದನಂತಂ । ಗಂಗಾಜನಕ ರಮಾಕಾಂತಂ ॥ ನಿಜ ಕಾಂತ್ಯಾಭಾಂತಂ ॥ ಘೋರ ದುರಿತ ಧ್ವಾಂತ ಪತಂಗಾನಂತಶಾಯಿ । ವೇದಾಂತವೇದ್ಯ ವಿಶ್ವಾಂತರವ್ಯಾಪ್ತಂ ॥ ವಂದೇ ॥ ೫ ॥ ಶ್ರೀ ॥

॥ ೭೬ ॥ ರಾಗ ಬೇಗಡೆ [ಧಾಟಿ:-ರಾಮಕೃಷ್ಣ ನಾರಾಯಣ ಶ್ರೀಹರಿ] ಏಕತಾಳ.

ನಮೋ ನಮೋ ಶ್ರೀ ವಿಷ್ಣು ಕೃಷ್ಣ ಜಯ । ನಮೋ ನಿಖಿಳ ನಿರ್ಜರ ವಂದ್ಯ ॥ ಪಲ್ಲ ॥ ನಿರಂಜನ ಕೃಪಾಕರಂ ಜನಾರ್ದನ । ಪರಂಜ್ಯೋತಿ ಪರಮಾನಂದಾ ॥ ನಮೋ ನಮೋ ॥ ಅನುಪಲ್ಲ ॥ ಪತಂಗಭಾಸುರ ಮತಂಗ ರಕ್ಷಕ। ರಥಾಂಗಪಾಣಿ ಶ್ರೀಗೋವಿಂದಾ ॥ ನಮೋ ನಮೋ ॥ ೧ ॥ ಅನಂತ ಗುಣ ಪಾವನಾನಂತಜಗಜೀ । ವನಾ ತ್ರಿದಶನುತ ಪದದ್ವಂದ್ವಾ ॥ ನಮೋ ನಮೋ ॥ ೨ ॥ ಲತಾಂತಶರಧೃತಪಿತಂ ತ್ವ ಶ್ರೀರಮಾ । ಪತಿಂ ತ್ರಿಗುಣ ಪೂರ್ಣಾನಂದಾ ॥ ನಮೋ ನಮೋ ॥ ೩ ॥ ಶ್ರೀ ॥

॥ ೭೭ ॥ ರಾಗ, ಪೀಲು [ಧಾಟಿ:- ನಂಬು ನಂಬು ನಾರಾಯಣನಾ] ಏಕತಾಳ

ನಂಬು ನಂಬು ಸೀತಾರಾಮನಾ । ಸತ್ಯದೃಢದಿ । ನಂಬಿದರೆ ಕಾಯಲಾರನೇ ॥ ಕುಂಭಿನಿಯೊಳ್ಸಾಧುಭಕ್ತರ । ರಕ್ಷಿಸುವ ಕಾರು । ಣ್ಯಾಂಬುಧಿ ಶ್ರೀಸೀತಾರಾಮನಾ ॥ ನಂಬು ॥ ೧ ॥ ಎಂಜಲ ಎಂದೆನಿಸಿ ನೋಡದೇ । ಶಬರೀಗೊಲಿದು । ಭುಂಜಿಸಿದಂಜಿಕೆಯ ಮಾಡದೇ ॥ ಕಂಜನಾಭ ಶ್ರೀ ರಘುರಾಮನಾ । ನಾಮದ ವಜ್ರ । ಪಂಜರವಿರೆ ಭಯವಿದೇನ್ ಘನಾ ॥ ॥ ನಂಬು ॥ ೨ ॥ ಮಂಗಲಪ್ರದ ಶ್ರೀರಾಮನು । ಕರುಣದಿ ಸುಗ್ರೀ । ವಂಗೆ ಸೌಭಾಗ್ಯವನಿತ್ತನು ॥ ಅಂಗದನ ಕಾಯಲಿಲ್ಲವೇ । ರಾಮನ ಚರ । ಣಂಗಳನ್ನು ಸ್ಮರಿಸಲಿಲ್ಲವೇ ॥ ನಂಬು ॥ ೩ ॥ ಜನಕನಂದನೆಯ ಕುರುಹನು । ತಂದಾ ಹನುಮಗೆ । ವನಜಭವನ ಪದವನಿತ್ತನು ॥ ಚಿನುಮಯಾನಂದ ಶ್ರೀರಾಮನು । ವಿಭೀಷಣಗೆ । ಘನವಾದ ಸಂಪದವನಿತ್ತನು ॥ ನಂಬು ॥ ೪ ॥ ಎಂಥಾ ಕರುಣಿಯೊ ರಾಮನು । ಸ್ಮರಪಿತ ಶ್ರೀರಮಾ । ಕಾಂತ ಸುರ ಸಾರ್ವಭೌಮನು ॥ ಯಂತಾದರು ನಮ್ಮ ಕಾವನು । ನಾವ್ ಬಯಸಿದ । ಚಿಂತಿತಾರ್ಥಗಳನೀವನೂ ॥ ನಂಬು ನಂಬು ॥ ೫ ॥ ಶ್ರೀ ॥

॥ ೭೮ ॥ ರಾಗ, ಪೀಲು [ಧಾಟಿ:- ಶ್ರೀರಾಧಾವಲ್ಲಭಾ ಸಜ್ಜನಸುಲ್ಲಭಾ] ಆದಿತಾಳ

ಶ್ರೀ ರಘೂತ್ತಮ ರಾಘವಾ । ಶ್ರೀರಘೂತ್ತಮ ರಾಘವಾ ॥ ಪಲ್ಲ ॥ ನಿಗಮಾರ್ಚಿತ ಪದ । ಯುಗ ಭೃಗುದ್ರುಗುಹರ । ಅಗಣಿತಘ ಭುಜಗ ಖಗ ಮೃಗಧರನುತ । ಶ್ರೀರಘೂತ್ತಮ॥ ಪಲ್ಲ ॥ ವಾಂಚರ ಮತ್ಸ್ಯವತಾರ। ಗಿರಿ । ಧಾರಣ ವರಹ ಶರೀರ ॥ ವೀರ ನೃಸಿಂಹಮುದಾರ ಧರಣಿಸುರ । ವಾರ ವಾರಿನಿಧಿ ವಾರಿಜಾರಿ ॥ ಶ್ರೀರಘೂತ್ತಮ ॥ ೧ ॥ ಯತಿಕುಲ ನಳಿನ ದಿನೇಶ। ರಘು । ಪತಿ ಶ್ರೀಕೃಷ್ಣ ಪರೇಶಾ ॥ ತ್ರಿತಯ ಪುರವಧು ವ್ರತಭಂಗ ಸೂನೃತ। ಜಿತವ್ಲೇಂಛಾನ್ವಯ ಶ್ರುತಿತತಿನುತ ॥ ಶ್ರೀರಘೂತ್ತಮ ॥ ೨ ॥ ಕೋಸಲ ನಗರನಿವಾಸಾ । ಖರ । ದೂಷಣಾರಿ ಸರ್ವೇಶಾ॥ ವಾಸವಸುತ ಕಮಲಾಸನ ಪಿತ ಶ್ರೀರ। ಮೇಶ ವಿಭೀಷಣಪೋಷಣಧೀಶಾ॥ ಶ್ರೀರಘೂತ್ತಮ ॥ ೩ ॥ಶ್ರೀ॥

॥ ೭೯ ॥ ರಾಗ ಬೃಂದಾವನಸಾರಂಗ [ಧಾಟಿ:- ಕರುಣದಿ ಪಾಲಿಸೆನ್ನ] ತ್ರಿವುಡೆತಾಳ

ನುತಿಸಲಳವೆ ಕೀರ್ತಿಯಾ । ಭುವನೇಂದ್ರರರ್ಥಿಯ । ನುತಿಸಲಳವೆ ಕೀರ್ತಿಯಾ ॥ ನುತಿಸಲಳವೇ ಯತಿಕುಲಾರ್ಣವ । ಪ್ರತಿಸುಧಾಕರರಂಘ್ರಿ ಕಮಲವ । ಶ್ರಿತಜನ ಮನೋರಥವ ಸಲಿಸುವ । ಸತತ ಶ್ರೀಗುರುಸಾರ್ವ ಭೌಮರ ॥ ನುತಿಸ ॥ ಪಲ್ಲ ॥ ಸರಸಿರುಹಭವಾಂಡದೀ । ಭೂಲೋಕದ । ಶರಧಿ ಏಳರ ಮಧ್ಯದೀ ॥ ಶಾಲ್ಮಲಿ ಕುಶಪ್ಲ। ಕ್ಷರಶಾಖಾಕ್ರೌಂಚಪಕ್ಷದೀ ॥ ಜಂಬೂದ್ವೀಪದಿ ॥ ಕುರುಹಿರಣ್ಯಕರಮ್ಯ ಇಳಾವ್ರತ । ಹರಿವರುಷಭದ್ರಾಶ್ವ ವರ ಕಿಂ। ಪುರುಷಕೇತು ಮಾಲಾದಿಯುದರೊಳು ! ಮೆರೆವ ಭರತಖಂಡದಲಿ ವರ ಭಾ॥ ಸುರ ಹಿಮಾಚಲದಗ್ರ ತೆಂಕಣ । ಸುರನದೀತೀರದಲಿ ಕಾಶೀ । ಪುರ ಮಠಾಧೀಶ್ವರರ ಪಾರಂ । ಪರೆಯ ಶ್ರೀಭುವನೇಂದ್ರರಂಘ್ರಿಯ ॥ ॥ ನುತಿಸ॥ ೧ ॥ ಸುಮತೀಂದ್ರ ಶ್ರೀತೀರ್ಥರ । ಕೋಮಲಕರ । ಕರಯುಗ್ಮ ಸಂಜಾತರಾ ॥ ಸುಜನಹೃತ್ಕಮಲ । ದ್ಯುಮಣೀ ಕೀರ್ತಿವಿಖ್ಯಾತರಾ ॥ ದೀನ ನಾಥರಾ ॥ ವಿಮಲ ಪರಬ್ರಹ್ಮಾತ್ಮವಿದ್ಯಾ । ಕ್ರಮವರಿತ ಕಾರುಣ್ಯನಿಧಿ ಬಹು। ಕ್ಷಮೆಗುಣಾನ್ವಿತ ಕ್ಷಿತಿಗೆ ಪಾವನ । ರಮಿತ ಯತಿಕುಲತಿಲಕ ಸಜ್ಜನ ॥ ನಮಿತ ಭವಭಯತಿಮಿರಭಾಸ್ಕರ । ಯಮನಿಯಮ ಯೋಗಂಗಳನು ತಿಳಿ । ದಮಲ ಗುಣಚಾರಿತ್ರ ಕಲ್ಪ । ದ್ರುಮ ದಯಾಪರರಂಘ್ರಿ ಕಮಲವ ॥ ॥ ನುತಿಸ ॥ ೨ ॥ ಝುಡಿವ ದುಂದುಭಿಭೇರಿಯು । ಶ್ರುತಿವರ್ಣಿಯು । ಹೊಡೆವ

ಡಂಕ ನಗಾರಿಯು ॥ ಹೊನ್ನಂದಣ । ನಡರುತ್ತೈತಹ ಸ್ವಾರಿಯಾ ॥ ಕೇರಿಕೇರಿಯಾ ॥ ಕಡುಕ್ಕಪೆಯೊಳೀಕ್ಷಿಸುತ ಬರೆ ಜನ । ರಡಿಗೆರಗಲತಿ ದೃಢದಭಯಕರ । ಜಡಜವೆತ್ತಿ ಮಂತ್ರಾಕ್ಷತೆಯ ಶಿರ । ಕಿಡುತ ತೃಪ್ತಿಯವಡಿಸಲಹುವ ॥ ಕಡುದಯಾಪರರಂಘ್ರಿಕಮಲಕೆ । ಎಡಿದೆಸೆವ ಸಿತಛತ್ರ ಚಾಮರ । ಘಡನ ಶಂಖಧ್ವಾನ ಸಂಭ್ರಮ । ದೊಡನೆ ಬಹ ಯತಿವರ್ಯರಂಘ್ರಿಯು ॥ ಸುತಿಸ ॥ ೩ ॥ ಕೋಮಲಮುಖಕಾಂತಿಯು । ಅರುಣಾಧರೋದ್ಧಾಮ ರದನಪಂಕ್ತಿಯು ॥ ನಿಖಿಲದೊಳೊಪ್ಪುವ । ನಾಮ ಮಧ್ಯದೊಳೊತ್ತಿಹ ॥ ತಿಲಕದ ಛಾಯಾ ॥ ತಾಮರಸದಳನಯನ ನಾಶಿಕ । ರಾಮಣೀಯಕ ಮೆರೆವ ದ್ವಾದಶ । ನಾಮ ಶ್ರೀಮುದ್ರೆಗಳ ಧರಿಸಿದ । ವ್ಯೋಮತಾರಾಸ್ತೋಮಮಧ್ಯದಿ ॥ ಸೋಮನಂದದಿ ಭೂಮಿಸುರರೊಳ । ಗಾಮನೋಹರರಾದ ಯತಿಕುಲ । ಭೌಮ ಸಜ್ಜನಕಾಮಧೇನು ಸು । ಪ್ರೇಮ ಸದ್ಗುಣೋದ್ಧಾಮರಂಘ್ರಿಯ ॥ ಸುತಿಸ ॥ ೪ ॥ ಮೆರೆವಾದಿತ್ಯಮಂಡಲದ । ಕಾಂತಿಯುಬೆಳ । ಗಿರುವ ಕಮಂಡಲದ ॥ ಪ್ರಭೆಯು ರತ್ನ । ಸ್ಫುರಿತ ಕೋಮಲದಂಡದ ॥ ರಾಜಿಸುವ ಗಳದ ॥ ಭರಿಕಂಠಿಯನುಟ್ಟಿರುವ ಕಾವಾಂ । ಬರದ ವಿಪ್ರರ ನೆರದ ರತ್ನಾ । ಕರದ ಚಂದ್ರನ ತೆರದ ಅಮೃತವ । ಸುರಿದ ಕರುಣಾಕರದ ದೃಷ್ಟಿಯ ॥ ತೆರದಮಿತ ಭಾಸುರದ ಮೂರ್ತಿಯು । ಚರಣಮಹಿಮೆಯು ನರಿತರಿಗೆ ಭವಾಂ । ತರದ ಕಿಲ್ಬಿಷ ತರಿದು ಕೀರ್ತಿಯ । ದೊರೆದು ಪೃಥಿವಿಲಿ ಮೆರೆದ ಮಹಿಮರ ॥ ಸುತಿಸ ॥ ೫ ॥ ಭೂಲೋಕದೊಳಗೆಣೆಯ । ಗಾಣೆನು ಸತ್ಯ । ಶೀಲ ವೈಷ್ಣವಾಗ್ರಣಿಯಾ ॥ ಯತಿಕುಲರತ್ನ । ಮಾಲ ಶಿಖಾಮಣಿಯ ॥ ಭಾಗ್ಯದ ಕಣಿಯ ॥ ಶ್ರೀಲಲಾಮನ ಮೂರ್ತಿಯನು ಹೃದ । ಯಾಲಯದಿ ಸ್ಥಾಪನೆಯಗೈದು ವಿ । ಶಾಲಮನದಿಂದಖಿಳ ಸುಜನರ । ಪಾಲಿಸುತ ಬಹುಜನ್ಮ ದುರಿತ ॥ ವ್ಯಾಳಗರುಡ ದುರ್ವಾದಿಗಳ ಹೃ । ತ್ಶೂಲ ಶ್ರೀವೈಷ್ಣವ ಮತಾಂಬುಜ । ಬಾಲ ಭಾಸ್ಕರ ಮಧ್ವಮುನಿಯ ವಿ । ಶಾಲ ದ್ವಯಚರಣಾಬ್ಜ ಭೃಂಗರ ॥ ಸುತಿಸ ॥ ೬ ॥ ಕಾಶೀನಗರನಿವಾಸರ । ಮಾಧವೇಂದ್ರ ಯ ।ತೀಶ ಕುಲ ರಾಜೇಂದ್ರರ ॥ ಕರಕಮಲಸಂಜಾ । ತ ಸೂರ್ಯೇಂದ್ರರ ಶಿಷ್ಯರಾ ॥ ವಿಬುಧೇಂದ್ರ ತೀರ್ಥರ ॥ ಆ ಸುಗುಣನಿಧಿಯಾದ ವಿಮಲ ಯ । ತೀಶ ಸುಮತೀಂದ್ರಾದಿ ಗುರುಗಳ । ಭಾಸುರಾಂಘ್ರಿಗಳನ್ನು ಸ್ಮರಿಸಲು ನಾ । ನೀಸು ಧನ್ಯ ಕೃತಾರ್ಥನೋ ಕಮ ॥ ಲಾಸನನ ಪಿತ ರಮೇಶ ಮಿತ್ರ ಪರಾಶರಾತ್ಮಜ

ವ್ಯಾಸ ನಥಹರಿ । ದಾಶರಥಿಯನು ಪೂಜಿಸುವ ಕರು । ದಾಶರಥಿ ಭುವ
ನೇಂದ್ರ ತೀರ್ಥರ ॥ ನುತಿಸಲಳವೆ ॥ ೬ ॥ ಶ್ರೀ ॥

॥ ೮೦ ॥ ರಾಗ, ಕಾಂಬೋಧಿ [ಧಾಟಿ:- ಯಾವ ಕುಲವೊ । ಸ್ವಾಮಿ] ಏಕತಾಳ

ಚಂದವೇನೊ । ಗೋವಿಂದ ನೀನು ॥ ಇಂದು ಎನ್ನ ಮರತೆಯಾ । ನಂದವಾಯಿತೇನೋ ॥ ಚಂದವೇನೋ ॥ ಪಲ್ಲ ॥ ಮೂಢನೆಂದು ಎನ್ನ । ದೂಡದಿಂದು ಮಿಕ್ಕ । ನಾಡುದೈವಂಗಳ ಕೂಡೆ । ಬೇಡಿದೇನೇ ಕೃಷ್ಣ ದಯದೀ ॥ ನೋಡಿ ಸಲಹದಿರಲು ನಿನ್ನ । ದೂರಲ್ಯಾಕೋ । ನಿನ್ನ ಸೇರ ಲ್ಯಾಕೋ ॥ ಕೃಷ್ಣ ॥ ಚಂದವೇನೊ ॥ ೧ ॥ ಪಡೆದ ಮಾತೆಯು ಮಗುವ । ಬಿಡದೆ ಪ್ರೀತಿಯು ಮಾಡಿ । ಕೊಡಲು ಮೊಲೆಯುಸ್ಸುಂಡು । ದ್ದುಡಿದು ತಾಯ ತೊಡೆಯ ತುಳಿಯೆ ॥ ಕಡುನಿಷ್ಠುರದ ಮನದಿ ಮಾತೆ । ಮುನಿವ ಳೇನೋ । ಕ್ರೋಧ ನೆಸೆವಳೇನೋ ॥ ಕೃಷ್ಣ ॥ ಚಂದವೇನೋ ॥ ೨ ॥ ಹರಿ ಕೃಪಾಕರ ಕೃಷ್ಣ । ಕರುಣಸಾಗರ ನಿನ್ನ । ಶರಣರ ರಕ್ಷಿಸಿದಂತೆ । ಕರುಣದಿ ರಕ್ಷಿಸಲು ನಿನ್ನ ॥ ಚರಣದ ಸ್ಮರಣೆಯು ಮೊದಲಿ । ಮರತೆನಲ್ಲಾ । ಮಿಕ್ಕ ಕೊರತೆಯಿಲ್ಲಾ ॥ ಕೃಷ್ಣ ॥ ಚಂದವೇನೋ ॥ ೩ ॥ ವ್ಯರ್ಥವಾಗಿದೆ ಜನ್ಮ । ಸಾರ್ಥಕಾಗದೆ ಸರ್ವ । ತೀರ್ಥಾತ್ಮಕನೆ ನಿನ್ನ ದಿವ್ಯ । ಮೂರ್ತಿಯ ಪೂಜಿಸಿ ನಾ ಕೃ ॥ ತಾರ್ಥನಾಗದೆ ವಿಷಯುಕ್ಕೆಳಸಿ । ಕೆಟ್ಟೆನಲ್ಲೋ । ನೀ ಕೈ ಬಿಟ್ಟೆ ಯಲ್ಲೋ ॥ ಕೃಷ್ಣ ॥ ಚಂದವೇನೋ ॥ ೪ ॥ ನಿಗಮವಂದ್ಯನೇ ಕೃಷ್ಣ । ಸುಗುಣವೃಂದನೇ ಎನ್ನ । ಅಗಣಿತ ಜನ್ಮಾಂತರದ । ಅಘವ ಪರಿಹರಿಸಿ ಕಾಯೋ ॥ ಮುಗುಳಂಬನ ಜನಕ ಶ್ರೀರಮಾ । ಲೋಲ ನೀನೂ । ನಿನ್ನ ಬಾಲ ನಾನೂ ॥ ಕೃಷ್ಣ ॥ ಚಂದವೇನೋ । ಗೋವಿಂದ ನೀನೂ ॥ ೫ ॥ ಶ್ರೀ ॥

॥ ೮೧ ॥ ರಾಗ, ಶ್ಯಾಮಕಲ್ಯಾಣ [ಧಾಟಿ:- ದಯಮಾಡಿ ಪತಸೇ। ತಾರದೇ] ಚಾಪುತಾಳ

ವಾಣಿ ವರದೇ । ವರಪದ್ಮಪಾಣೀ । ವಾಣಿ ವರದೇ ॥ ಪಲ್ಲ ॥ ವರ ಪದ್ಮಪಾಣೀ । ಶೃಂಗರ ನಾಗವೇಣೀ । ನಿರತಕಲ್ಯಾಣಿ ಸುರುಚಿರ ಕೀರ ವಾಣೀ ॥ ವಾಣಿ ವರದೆ ॥ ಅನುಪಲ್ಲ ॥ ಶರದೀಂದುವದನೇ । ವರ ಕುಂದ ರದನೆ । ಸುರಮುನಿ ಸನಕಸನಂದನ ಹೃತ್ಸದನೇ ॥ ವಾಣಿ ವರದೇ ॥ ೧ ॥ ಕಲಹಂಸಯಾನೇ । ಕೋಕಿಲಗಾನೇ । ಚಲಿಸದೆನ್ನ ಜಿಹ್ವೆಯೊಳ್ನೆಲಸಿರು ನೀನೇ ॥ ವಾಣಿ ವರದೇ ॥ ೨ ॥ ಕರುಣವವೆರಸೀ । ವರ್ಷವ ಸುರಿಸಿ । ಮಿರಿತ

ಥಗೆಯಲಿ ರಕ್ಷಿಸು ದಯವೆರಸೀ ॥ ವಾಣಿ ವರದೇ ॥ ೩ ॥ ಚಿತ್ರಾರ್ಕದ್ಯುತಿ ಯು । ಚಂದ್ರನಾಕೃತಿಯು । ಚಿತ್ರತಾಟಂಕ ಸುರತ್ನ ಮೂಗುತಿಯಾ ॥ ವಾಣಿ ವರದೇ ॥ ೪ ॥ ಅಗರು ಶ್ರೀಗಂಧಾ । ಯುಕ್ಷಕರ್ದಮದ । ಮೃಗಮದ ಕುಂಕುಮ ತಿಲಕದಾನಂದ ॥ ವಾಣಿ ವರದೇ ॥ ೫ ॥ ಅಂಗಜಪಿತ ರಮಾ । ಕಾಂತನ ಸೊಸೆಯೇ । ಶೃಂಗೇರಿ ಪುರವಾಸೆ ಬ್ರಹ್ಮಸರಸಿಯೇ ॥ ವಾಣಿ ವರದೇ ॥ ೬ ॥ ಶ್ರೀಃ ॥

॥ ೮೨ ॥ ರಾಗ, ಸುರುಟಿ [ಧಾಟಿ:- ಹ್ಯಾಗೆ ನಿನ್ನ ಚರಣಾ] ಆದಿತಾಳ

ಪಾಲಿಸು ಶ್ರೀಹರಿಯೇ । ಸದ್ಗುಣ । ಶೀಲ ಭಾಗ್ಯನಿಧಿಯೇ ॥ ಶ್ರೀ ಲಲಾಮ ಶೇಷಾಚಲಧೀಶ ಶ್ರೀ । ಲೋಲ ಬಾಲಭಾಸ್ಕರಸಂಕಾಶನೇ ॥ ಪಾಲಿಸು ॥ ಪಲ್ಲ ॥ ಕಂಡವರಿಂಗೆರಗೀ । ದೈನ್ಯವ । ಗೊಂಡೆ ಖಿನ್ನನಾಗೀ ॥ ಭಂಡನಾಗಿ ಬಳಲಿಸಿ ಬಹು ಕಾಯವ । ದಂಡಿಸಿದೆನು ರಕ್ಷಿಸೊ ಶ್ರೀಹರಿಯೇ ॥ ಪಾಲಿಸು ॥ ೧ ॥ ಯಾರಿಗೆ ದೂರುವೆನು । ಭಕ್ತೋ । ದ್ಧಾರನಲ್ಲವೆ ನೀನು ॥ ಘೋರ ದುರಿತ ಸಾಂದ್ರದ ವ್ಯಥೆಯು ಇ । ನ್ಯಾರಿಗೊರವೆ ಅದ ನಾರು ಕ್ಯಾವರ್ರೈ ॥ ಪಾಲಿಸು ॥ ೨ ॥ ಏಸಪರಾಧವನು । ಗೈದೆ ನಾ । ನೀಸು ಪಾಪಾತುಮನೋ ॥ ಈಸಪರಾಧವನೆಣಿಸದೆ ಎನ್ನಯ । ಕ್ಲೇಶವ ಪರಿಹರಿಸೋ ದಯಾನಿಧೇ ॥ ಪಾಲಿಸು ॥ ೩ ॥ ಕರುಣಾಸಾಗರನೇ । ತ್ರಿಜಗ । ದ್ಭರಿತ ಕೃಪಾಕರನೇ ॥ ಪರಮಾತ್ಮ ದಯಾಪರ ಪುರುಷೋತ್ತಮ । ಪರಂಜ್ಯೋತಿ ಪರಬ್ರಹ್ಮ ಸ್ವರೂಪನೆ ॥ ಪಾಲಿಸು ॥ ೪ ॥ ರಂಗನಾಥನೆನ್ನಾ । ಕಾಯೊ ವಿ । ಹಂಗರಾಜಗಮನಾ ॥ ಗಂಗಾಜನಕ ರಮಾಧವ ಕರುಣಾ । ಪಾಂಗ ರಂಗ ಮಂಗಲಾಂಗ ರಕ್ಷಿಸು ॥ ಪಾಲಿಸು ॥ ೫ ॥ ಶ್ರೀಃ ॥

॥ ೮೩ ॥ ರಾಗ, ನವರೋಜು [ಧಾಟಿ:- ಕ್ಷೀರಾಂಬುಧಿಯಸ್ಸೆ ತೊಟ್ಟಿಲ] ಅಷ್ಟತಾಳ

॥ ಜೋಗುಳಪದ ॥

ಸ್ವರ್ಣಕತ್ತಿಗೆಯಾದ ಚಲುವ ತೊಟ್ಟಲಿಗೇ । ರನ್ನರತ್ನದ ಸರಪಣಿಗಳ ಬಗಿದೂ ॥ ಚಿನ್ನದ ತೊಲಿಗೆ ಕಟ್ಟುತಲಿ ಯಶೋದೆ । ಚಿಣ್ಣ ಕೃಷ್ಣನನಿಟ್ಟು ತೂಗಿ ಪಾಡಿದಳು ॥ ಜೋ ಜೋ ॥ ೧ ॥ ಬಾಲ ಭಾಸ್ಕರಕೋಟಿ ತೇಜನೆ ಜೋ ಜೋ । ಶೀಲ ಸದ್ಗುಣ ಸುರಭೋಜನೆ ಜೋ ಜೋ ॥ ಬಾಲಕಾಗ್ರಣಿ ಯೆ ವಿಶ್ವಂಭರ ಜೋ ಜೋ ಎಂದು । ಬಾಲೆ ಯಶೋದೆಯು ತೂಗಿ ಪಾಡಿ

ದಳೂ ॥ ಜೋ ಜೋ ॥ ೨ ॥ ಅಚ್ಯುತಾನಂತ ಗೋವಿಂದನೆ ಜೋ ಜೋ । ಸಚ್ಚಿದಾನಂದ ಮುಕುಂದನೆ ಜೋ ಜೋ ॥ ವತ್ಸಕೌಸ್ತುಭಧರ ಕೇಶವ ಜೋ ಜೋ । ಮತ್ಸಕೇತಕೋಟರೂಪನೆ ಜೋ ಜೋ ॥ ಜೋ ಜೋ ॥ ೩ ॥ ನಿಶಿಚರಾಂತಕ ನಿತ್ಯಾನಂದನೆ ಜೋ ಜೋ । ಪಶುಪತಿ ಶಕ್ರಾದಿವಂದ್ಯನೆ ಜೋ ಜೋ ॥ ಬಿಸಜಾಕ್ಷ ಮೂರ್ತಿ ವಿಶ್ವಂಭರ ಜೋ ಜೋ । ವಸುದೇವಾತ್ಮಜನೆಂದು ತೂಗಿ ಪಾಡಿದಳು ॥ ಜೋ ಜೋ ॥ ೪ ॥ ಸಿಂಧುಶಯನ ಚತುರ್ವೇದಸಂರಕ್ಷಾ । ಮಂದರಧಾರಿ ಹಿರಣ್ಯಾಕ್ಷ ಶಿಕ್ಷಾ ॥ ಸೌಂದರತೇಜ ನೃಸಿಂಹಪರೀಕ್ಷಾ । ಕುಂದರದನ ತ್ರಿವಿಕ್ರಮ ಕಮಲಾಕ್ಷಾ ॥ ಜೋ ಜೋ ॥ ॥ ೫ ॥ ಮುನಿಕುಲನಿಧಿ ಪರಿಪೂರಣ ಚಂದ್ರಾ । ದಶಕಂಠ ಮಥನ ರಾಘವ ಯಾದವೇಂದ್ರಾ ॥ ಪಶುಪತಿಸಖ ತ್ರಿಪುರಾರಿ ಉಪೇಂದ್ರಾ । ಎಸೆವಕ್ಷ್ಯವೇಂದ ಸದ್ಗುಣಸಾಂದ್ರಾ ॥ ಜೋ ಜೋ ॥ ೬ ॥ ರತಿಪತಿಪಿತ ಶ್ರೀರಮಾಧವ ಜೋ ಜೋ । ಅತುಲಿತಮಹಿಮ ಶ್ರೀಭೂಧವ ಜೋ ಜೋ ॥ ಧೃತಶಂಖ ಚಕ್ರ ಗದಾಬ್ಜನೆ ಜೋಜೋ । ಪ್ರತಿರಹಿತ ದೇವಕಿಸುತ ಕೃಷ್ಣ ಜೋ ಜೋ ॥ ॥ ಜೋ ಜೋ ॥ ೭ ॥ ಶ್ರೀಃ ॥

॥ ೮೪ ॥ ರಾಗ, ಆನಂದಭೈರವಿ [ಧಾಟಿ:- ಅಮ್ಮಾ ನೀ ಯಾತಕೆ] ಏಕತಾಳ

ಶ್ರೀಹರಿಯೇ ಯನ್ನ ಮರತಿರುವರೆ ಇದು ಸರಿಯೇ । ಪಾಲಿಸು ನೀ ಧೊರೆಯೇ ॥ ತರಳತನದಿ ನಾ ಮರತೆನೆಂದು ನೀ । ಜರದು ಬಿಟ್ಟರೆ ಮುಂದೆ ಪೊರವರ್‍ಯಾರೈ ಶ್ರೀ ॥ ಹರಿಯೇ ॥ ಪಲ್ಲ ॥ ಒಡೆಯ ನೀನಾಗಿ ಸಲಹುದೀಗ । ನಿನ್ನಯ ಪದ । ಜಡಜಕೆರಗುವೆ ನಾ ಬೇಗ ॥ ಕಡುದಾರಿದ್ರ್ಯದ ಕಡಲೊಳು ಮುಳುಗಿದೆ । ತಡಿಯ ಕಾಣಿಸೊ ಜಗದೊಡೆಯ ದಯಾವಿ ಶ್ರೀ ॥ ಹರಿಯೇ ॥ ॥ ೧ ॥ ತರಳ ಧ್ರುವರಾಜನಿಗೊಲಿದೆ । ಅಂಬರೀಷನ । ಭರದಿ ಚಕ್ರದಿಂದಲಿ ಕ್ಷಾದೇ ॥ ತರಳೆಯ ಸಭೆಯಲ್ಲಿ ದುರುಳ ಬಾಧಿಸುತಿರೆ । ಭರದೊಳಕ್ಷಯ ಎತ್ತುದ್ಧರಿಸಲಿಲ್ಲವೇ ಶ್ರೀ॥ ಹರಿಯೇ ॥ ೨ ॥ ಕಷ್ಟಬಟ್ಟೆ ಭವದೊಳಾನು। ಎನ ಮನದ । ಭೀಷ್ಟ ಪಾಲಿಸೊ ದೇವ ನೀನು ॥ ಸೃಷ್ಟಿಗೊಡೆಯ ದಯಾದೃಷ್ಟಿಯಿಂದಲಿ ಮನ । ಸಿಟ್ಟು ಸಲಹೊ ಪರಮೇಷ್ಠಿ ಜನಕ ಶ್ರೀ ॥ ಹರಿಯೇ ॥ ೩ ॥ ತಂದೆ ನೀನಲ್ಲವೆ ಜಗದೀಶಾ । ಪಾಲಿಸು ನಿನ್ನ । ಕಂದನಲ್ಲವೆ ಸರ್ವೇಶಾ ॥ ಹಿಂದುಮುಂದ ನಾನೊಂದನರಿಯೆ ದಯ । ದಿಂದ ಕಾಯೊ ಮುಚುಕುಂದ ವರದ ಶ್ರೀ ॥ ಹರಿಯೇ ॥ ೪ ॥ ಮಂಗಲಪುರವಾಸಾ । ಶ್ರೀಶ ಶ್ರೀವೆಂಕ

ಟೇಶಾ । ಅಂಗಜಜನಕ ಶ್ರೀರಮೇಶಾ ॥ ಮಂಗಲಾಂಗ ನಿನ್ನಂಘ್ರಿ ಸೇವಕರ ಸು । ಸಂಗವ ಪಾಲಿಸು ಗಂಗಾಜನಕ ಶ್ರೀ ॥ ಹರಿಯೇ ॥ ೫ ॥ ಶ್ರೀ ॥

॥ ೮೫ ॥ ರಾಗ, ಹಿಂದುಸ್ಥಾನಿ [ಧಾಟಿ:- ಲೋಕಭರಿತನೋ । ಕೃಷ್ಣ] ರೂಪಕತಾಳ

ಮಂಗಳಾರತಿಯ ಪಾಡಿರೋ । ಮಾನುನೀಯರು ॥ಪಲ್ಲ॥ ಗಂಗಾಜನಕ ರಂಗ ಕರುಣಾ । ಪಾಂಗ ಮೋಹನಾಂಗನೆಸುತ ॥ ಅನುಪಲ್ಲ ॥ ಮತ್ಸ್ಯ ಕೂರ್ಮನಾದಗೇ । ವರಹ ನಾರಸಿಂಹಗೇ । ಸ್ವಚ್ಛ ವಾಮನಾಕೃತಿಗೇ । ಸಜ್ಜಿತ ಪರಶುರಾಮಗೇ ॥ ಮಂಗಳಾ ॥ ೧ ॥ ಕಾಮಜನಕ ರಾಮಗೇ ಸು । ತ್ರಾಮವರದ ಕೃಷ್ಣಗೇ । ಪ್ರೇಮದಿಂದ ಕ್ಷ್ಯಾವ ಬೌದ್ಧ । ಸ್ವಾಮಿ ಕಲ್ಕಿ ರೂಪಗೇ ॥ ಮಂಗಳಾ ॥ ೨ ॥ ಮೂಲ ಏಕಲರೂಪಗೇ । ಶ್ರೀಲೋಲ ವೆಂಕಟೇಶಗೇ । ಕಾಲಭಯವಿನಾಶ ನರಹರಿ । ಶೀಲ ಬಿಂದುಮಾಧವಗೇ ॥ ॥ ಮಂಗಳಾ ॥ ೩ ॥ ಶ್ರೀ ॥

॥ ೮೬ ॥ ರಾಗ, ಆರಭಿ [ಧಾಟಿ:- ಶ್ರೀನಿವಾಸನ ಸಾರಿವವರಿಗೆ] ಏಕತಾಳ

ಶ್ರೀಮನೋಹರ ಕೃಷ್ಣನಿಗೆ । ಜಯ ಮಂಗಲಂ ॥ ಕೋಮಲಾಂಘ್ರಿ ಸರೋಜಯುಗ್ಮಗೆ । ಶುಭಮಂಗಲಂ ॥ ಪಲ್ಲ ॥ ನಿತ್ಯನಿರ್ಗುಣ ನಿರ್ಮಲಾ ತ್ಮಕ । ಸತ್ಯನಿಧಿ ಪುರುಷೋತ್ತಮಗೆ ವರ । ಸತ್ಯಸಾಕ್ಷಿಗೆ ಸಾರ್ವಭೌಮಗೆ । ಜಯ ಮಂಗಲಂ ॥ ಶ್ರೀಮನೋಹರ ॥ ೧ ॥ ಆದಿಮಾಯಾತೀತ ನಿರುಪಮ। ನಾದಿಮೂರುತಿಯಂತ್ಯರಹಿತಗೆ । ವೇದವೇದ್ಯಗೆ ಇಷ್ಟಪೂರ್ಣಗೆ । ಶುಭ ಮಂಗಲಂ ॥ ಶ್ರೀಮನೋಹರ ॥ ೨ ॥ ಕಂಜಸಖ ಶತಕೋಟತೇಜಗೆ । ಮಂಜುಳಾಂಗಗೆ ಮದನಪಿತಗೆ ನಿ । ರಂಜನಾತ್ಮಕ ನಿತ್ಯಮೂರ್ತಿಗೆ ॥ ಶುಭ ಮಂಗಲಂ ॥ ಶ್ರೀಮನೋಹರ ॥ ೩ ॥ ಶಂಖಚಕ್ರಗದಾಬ್ಜ ಶ್ರೀವ । ತ್ಸಾಂಕಿತ ಶ್ರೀರಾಧಾಕೃಷ್ಣ ಶ । ಶಾಂಕವದನಗೆ ಶಾಂತಮೂರ್ತಿಗೆ ॥ ಶುಭಮಂಗಲಂ ॥ ॥ ಶ್ರೀಮನೋಹರ ॥ ೪ ॥ ವಾರಿಜಾಸನವಂದ್ಯನಿಗೇ ಭಾ । ಗೀರಥೀಪಿತ ಶ್ರೀ ರಮೇಶಗೆ । ಚಾರು ಉಡುಪಿನ ಕೃಷ್ಣನಂಘ್ರಿಗೆ । ಜಯ ಮಂಗಲಂ ॥ ಶ್ರೀಮನೋಹರ ನಾರಾಯಣಗೆ । ಜಯ ಮಂಗಲಂ ॥ ೫ ॥ ಶ್ರೀ ॥

॥ ಕವಿ ಶೇಷಪ್ರಭುಕೃತ ಪದಗಳು ಸಂಪೂರ್ಣಂ ॥

## ॥ ಶ್ರೀಕೃಷ್ಣಾರ್ಪಣಮಸ್ತು ॥

# ಕವಿ ರಾಮಕೃಷ್ಣಯ್ಯನವರ ಪದಗಳು.

॥ ೮೭ ॥ ರಾಗ, ಸಾರಂಗ [ಧಾಟಿ:- ಕೊಡೊ ಕೊಡೊ ಕೊಡೊ] ಚೌತಾಳ

ಹರಿ ಸರ್ವೋತ್ತಮ ಶ್ರೀಪುರುಷೋತ್ತಮ । ಶ್ರೀಧರ ಲಕ್ಷ್ಮೀಕಾಂತಂ ॥ ॥ ಪಲ್ಲ ॥ ಹೇಮಾಂಬರಧರ ಸುಂದರಮೂರುತೆ । ನೀಲಮೇಘ ನಿಭಶೋಭಂ॥ ನಿತ್ಯನಿರಂಜನ ಮತ್ಸ್ಯಾವತಾರಂ । ಪ್ಪಾಯಿ ದಯಾಬ್ಧೇ ಸಂತತಂ ॥ ಹರಿ ಸರ್ವೋತ್ತಮ ॥ ೧ ॥ ಸನಕಸನಂದನ ಪೂಜಿತಮೃದುಪದ । ವನಜಯುಗ್ಮ ಭವದೂರಂ ॥ ಅನಘ ವಿಚಿಂತ್ಯಂ ಮಂದರಧಾರಿಂ । ಕ್ರತುಭುಜ ವಂಶೋದ್ಧಾರಕಂ ॥ ಹರಿ ಸರ್ವೋತ್ತಮ ॥ ೨ ॥ ಅತ್ರಿಪುತ್ರನಿಭ ಸ್ನಿಗ್ಧವಕ್ತ್ರ ಶತಪತ್ರ ನೇತ್ರ ಋಷಿಸ್ತೋತ್ರಂ ॥ ಸುತ್ರಾಮಾರ್ಚಿತ ಧಾತ್ರಿ ಉದ್ಧಾರಕ । ಸೂಕರ ರೂಪಾನಂಚಿತಂ ॥ ಹರಿ ಸರ್ವೋತ್ತಮ ॥ ೩ ॥ ಅಂತ್ಯರಹಿತ ವೇದಾಂತ ವೇದ್ಯ ಮದನಂತ ಶಾಂತ ಭಗವಂತಂ ॥ ಸಂತರಕ್ಷ ಸರ್ವಾಂತರ್ಯಾತ್ಮಕ । ವೀರ ನೃಸಿಂಹ ಪಾಲಯ ॥ ಹರಿ ಸರ್ವೋತ್ತಮ ॥ ೪ ॥ ಬ್ರಹ್ಮಚರ್ಯಧರ ಅದಿತೀನಂದನ । ನಿರ್ಮಯ ಪ್ರಕೃತಿಪರೇಶಂ ॥ ಧರ್ಮಶಾಸನಾ ಭಾರ್ಗವ ಗುಣನಿಧೆ । ಬುಧಜನಪಾಲನ ಕೋಮಲಂ ॥ ಹರಿ ಸರ್ವೋತ್ತಮ ॥ ೫ ॥ ಸತ್ಯದೃಢವ್ರತ ದಶರಥನಂದನ । ಧೂರ್ತ ದಶಾಸ್ಯವಿದಾರಿತಂ ॥ ಕೀರ್ತಿವಾರಿಧೇ ಜನಿತಮೂರ್ತಿಕೇ । ಸೀತಾವಲ್ಲಭ ಶ್ರೀಧರಂ ॥ ಹರಿ ಸರ್ವೋತ್ತಮ ॥ ೬ ॥ ಮುರಲೀನಾದಿತ ಗೋವರ್ಧನಧರ । ಗರುಡಧ್ವಜ ಹಸಿತಾಂಗಂ ॥ ವರತರ ಸುಖದಂ ಪಾಂಚಜನ್ಯಧರ। ಪಾರ್ಥಸಾರಥೇ ಶ್ಯಾಮಲಂ॥ ॥ ಹರಿ ಸರ್ವೋತ್ತಮ ॥ ೭ ॥ ಬುದ್ಧಾಕೃತಿಧರ ಭವ್ಯಸವ್ಯಯುತ । ಭದ್ರ ನಿಶ್ಕಕಳಖಿಳೇಶಂ ॥ ಶೂದ್ರ ಮ್ಲೇಂಛಕುಲನಾಶನ ಪಾವನ । ಕಲ್ಕ್ಯಸ್ವರೂಪಕಂ ಕೇಶವಂ ॥ ಹರಿ ಸರ್ವೋತ್ತಮ ॥ ೮ ॥ ಭಾಸುರ ವರ ವಳಲಂಕಾಧಿಪವಿ । ಸ್ವೇಶ ಶ್ರೀವೆಂಕಟನಾಥಂ ॥ ಈಶ ಶ್ರೀಗುರು ನರಸಿಂಹದೇವ ಋಷಿ । ಕೇಶವ ಮೂರುತೆ ಪಾಹಿ ಮಾಂ ॥ ಹರಿ ಸರ್ವೋತ್ತಮ ॥ ೯ ॥ ಶ್ರೀಃ ॥

॥ ೮೮ ॥ ರಾಗ, ಆರಬಿ [ಧಾಟಿ:- ಕಲಯೇ ಶ್ರೀವಿಷ್ಣು ಕೃಷ್ಣ] ಆದಿತಾಳ

ಪ್ರಣತೇ ಶ್ರೀವಿಷ್ಣು ವೈಷ್ಣವವಿಭು ವಿಷ್ಣು । ಪ್ರಣತೇ ॥ ಪಲ್ಲ ॥ ಪ್ರಣವರೂಪ ಶ್ರೀಪೂರ್ಣಪ್ರಜ್ಞ । ಸದ್ವಿನುತ ಪದಾಬ್ಜಯುಗಂ ವನಮಾಲಂ ॥ ಪ್ರಣ

ತೇ ॥ ಅನುಪಲ್ಲ ॥ ಭದ್ರಂ । ಭೂಭೂಧರ ಪುಣ್ಯಸಮುದ್ರಂ । ಬ್ರಹ್ಮಾಂಡ ಧೇಕ್ಷ ಅಘಭಿದ್ರಂ । ಭಯಭೀಕೃತ ದಾನವರಾದ್ರಂ ॥ ಕಾದ್ರೇಯಶಯನಂ ॥ ಚಿದ್ರೂಪಾತ್ಮಸುಧೇಯಾಮೃತ ಸಾರ್ಧಮ। ರದ್ರಕ್ಷ್ಮಾದ್ರಿಧರಂ ಸಖರುದ್ರಂ ॥ ಪ್ರಣತೇ ॥ ೧ ॥ ಶುದ್ಧಂ । ಶಾಂತಾಕರ ವೇದಪ್ರಸಿದ್ಧಂ । ಸದ್ಧರ್ಮ ಕೀರ್ತಿ ಸಾನ್ನಿಧ್ಯಂ । ಶಶಿವರ್ಣ ಪದಾಶ್ರಿತಸಾಧ್ಯಂ ॥ ಭವರೋಗವೈದ್ಯಂ ॥ ನೃದ್ಧಿ ರೂಪ ನಿರವದ್ಯ ಸಾಕ್ಷಿಕಾರಾಷ್ಯ ಪ್ರದ್ಯವೇದ್ಯಂ ಅನಿರುದ್ಧಂ॥ ಪ್ರಣತೇ ॥ ೨ ॥ ಹಂಸಂ । ಹೃಷೀಕೇಶ ಕೈಟಭಧ್ವಂಸಂ । ಹರಿ ಕೃಷ್ಣರೂಪ ಜಿತಕಂಸಂ । ಶೈವಮಾಂಬರ ರುಚಿರಸುತಂಸಂ ॥ ಪರತತ್ವ ಸಂಸಂ ॥ ಹಂಸರೂಢ ಸಂಸಾರ ಸಸರ್ಜಿತ । ಸಂಸ್ತುತ ಸುರಮುನಿ ಮಾನಸಹಂಸಂ ॥ ಪ್ರಣತೇ ॥ ೩ ॥ ಕತ್ರುಂ । ಕಮಲಾಂಬಕ ದೇವಕಿಪುತ್ರಂ । ಕೌಸ್ತುಭಲಂಕೃತ ಸುಚರಿತ್ರಂ। ನಿರ್ಮಲ ಶಾಮಲನಿಭಗಾತ್ರಂ ॥ ಕಮನೀಯಸ್ತೋತ್ರಂ ॥ ಧಾತ್ರಿಭತ್ರು ಶುಭ ವಕ್ತ್ರತೀರ್ಥಪದ । ಚಿತ್ರಸೂತ್ರಧಾರಕ ಸುಪವಿತ್ರಂ ॥ ಪ್ರಣತೇ ॥ ೪ ॥ ವರ್ಯಂ । ಮಹಲಕ್ಷ್ಮೀಮುಖಾಂಬುಜಸೂರ್ಯಂ । ಮೃತಿಜನ್ಮಕ್ಲೇಶಹರ ಶೌರ್ಯಂ । ವೈಕುಂಠವಾಸ ಸ್ಥಿರಧೈರ್ಯಂ ॥ ಭೂತಾತ್ಮಶೌರ್ಯಂ ॥ ಆರ್ಯವಾದಿ ಗ್ರಹಪರ್ಯಯ ಚರ್ಯಕ । ಕಾರ್ಯಪ್ರದ ಮಹವೀರ್ಯ ಮುದಾರ್ಯಂ ॥ ಪ್ರಣತೇ ॥ ೫ ॥ ಶೀಲಂ । ಮತ್ಸ್ಯಾಕೃತಿ ನಗಧರಲೀಲಂ । ಕಿಟಕನಕಕಶ್ಯಪು ಮೃತ್ಯುಲಂ । ವಟು ಪರಶುಧರಂ ಗುಣಜಾಲಂ । ದಶ ಕಂಠ ಕಾಲಂ ॥ ಲೀಲಂ ಗೋಪಿಕಲೋಲಂ ಬುದ್ಧ ಖಳಾಳಿ ಮ್ಲೇಂಛಖಂಡನ ಭೂಪಾಲಂ ॥ ಪ್ರಣತೇ ॥ ೬ ॥ ವೀರಂ । ಬಿಭ್ರಾಣಮರ್ಕಜ್ಯವಿಪೂರಂ । ವರ ಭೀಕರ ಮುಖಪಯಸಾರಂ । ಭುತ ಅಷ್ಟದಂಷ್ಟ್ರ ಸುಕಠೋರಂ ॥ ಸ್ತಂಭ ವಿದಾರಂ ॥ ಪಾರಮಹಿಮ ಪ್ರಹ್ಲಾದರಕ್ಷ ಗುರು । ನಾರಸಿಂಹ ವಳಲಾಕ ಪುರೇಶಂ ॥ ಪ್ರಣತೇ ॥ ೭ ॥ ಶ್ರೀಃ ॥

॥ ೮೯ ॥   ರಾಗ, ಶಾಮಕಲ್ಯಾಣಿ [ಧಾಟಿ:- ಹರಿ ಸರ್ವೋತ್ತಮ ಶ್ರೀ!] ಏಕತಾಳ

ಜಯ ಜಯ ಹೇ ಕೊಲ್ಲಾಪುರ ವಾಸಿನಿ । ಏಸ್ಲಪ್ರಿಯೇ ಕ್ಷೀರ ಸಿಂಧುಸುತೆ ॥ ಪಲ್ಲ ॥ ಜಯ ಜಗನ್ಮಾತೆ ಸಚ್ಚಿನ್ಮಯ ಪ್ರಕೃತಿ ನಿರ್ಮಯೆ ದಯೆ ಸುಪ್ರೀಯೆ ಶೇಷ ಸಿರೀ ॥ ಪಯಜಾತೆ ನಾಮ ಸನಾಮ ಮನೋರಮೆ । ನಯ ಸತ್ಯಸಾಕಾರೆ ರತ್ನಗರ್ಭೆ ॥ ಜಯ ॥ ೧ ॥ ಅರ್ಥಿಂಮಪಾಲಿ ಏಕಾಲಿ

ಅಲಂಕರಿ । ಭದ್ರ ದಾರಿದ್ರವಿಚ್ಛೇದನಿಯೇ ॥ ಕರ್ದಮಜಾಸನ ಜನನೀ ಸಂತತ ಸುಖ । ವರ್ಧಿನಿ ಸ್ವಧರ್ಮರಾಜಸುತೇ ॥ ಜಯ ॥ ೨ ॥ ಸಂತತ ಸ್ವಸ್ಥಿರೆ ಸಂತಪ್ರಸನ್ನೆ ಮ। ಹಾಂತ ಅನಂತ ಸೌಭಾಗ್ಯಮಯೇ ॥ ಕಂತು ಮಾತೆ ಕಂಜನೇತ್ರೆ ಕುತೂಹಲೇ । ಕಾಮಿತಾರ್ಥದಾತೆ ಭಕ್ತನಾಥೆ ॥ ಜಯ॥ ॥ ೩ ॥ ಅಕ್ಷಯಾತ್ಮಕಿ ಮಹಾಲಕ್ಷ್ಮೀ । ಲಕ್ಷ್ಮೀ ಲಕ್ಷಂಥೇಕ್ಷೆ ಸದ್ಭಾವಿಕ ರಕ್ಷಕರೇ ॥ ಸೂಕ್ಷ್ಮ ಸ್ಥೂಲ ವಿಶ್ವಸಾಕ್ಷಿ ಸಾಕ್ಷಿ । ಸಾಕ್ಷಾದ್ಧಾಕ್ಷಾಯಣೀ ಪ್ರಿಯೇ ಮೋಕ್ಷದಾತೇ ॥ ಜಯ ॥ ೪ ॥ ಅಂಬಿಕೆ ವರದೆ ಮುಖಾಂಬಿಕೇ ಸುಖ್ಯಾತ । ಕುಂಭ ಕುಂಭಕುಚ ಕಂಬುಕಂಠೇ ॥ ಅಂಬೆ ಅಂಬೆ ಕಲರಂಬೆ ಸ್ವರ್ಣಪಿ । ತಾಂಬರರಂಭಣಲಂಕರಿತೇ ॥ ಜಯ ॥ ೫ ॥ ಇಂದಿರದಿಂದಿರ ಮಂದಿರ ಮಂದಾರೆ । ಚಂದ್ರಾಸ್ಯೆ ಚಂದ್ರಿಕ ಚಾರುಹಸ್ತೇ ॥ ಸುಂದರಿ ಸುಂದರಿ ಶಾಂತಸುಸುಂದರಿ । ಪೂರ್ಣಾನಂದ ನಂದ ನಂದನಿಧೇ ॥ ಜಯ ॥ ॥ ೬ ॥ ಸಾರಸಧ್ವಜ ವಜ್ರಲಾಂಛನ ಪದಯುಗೆ । ಸಾರಶಕ್ತಿ ಶಕ್ತಿ ಭಕ್ತಿ ರೂಪೇ ॥ ಕ್ರೂರ ಹಿರಣ್ಯಕಶ್ಯಪುವೈರಿ ಮದ್ಗುರು । ನಾರಸಿಂಹ ವಕ್ಷಸ್ಥಲ ನಿವಾಸೇ ॥ ಜಯ ॥ ೭ ॥ ಶ್ರೀ ॥

॥ ೯೦ ॥ ರಾಗ, ಶ್ಯಾಮಕಲ್ಯಾಣಿ [ಧಾಟಿ:- ಪಾಹಿ ಮಾಂ ಶ್ರೀವೇಣು] ರೂಪಕತಾಳ

ಪಾಲಿಸೈ ಶ್ರೀವೆಂಕಟೇಶ್ವರಾ । ಶ್ರೀಲೋಲ ಬಿಡದೆ । ಪಾಲಿಸೈ ಶ್ರೀವೆಂಕಟೇಶ್ವರಾ ॥ ಪಲ್ಲ ॥ ಪಾಲಿಸೈ ಶ್ರೀವೆಂಕಟೇಶ ನೀಲವರ್ಣ ದೀನಪೋಷ । ಶೀಲ ಮತಿ ವಿಶಾಲ ಕಾಲಕಾಲ ಬಾಲಲೀಲ ರಂಗಾ ॥ ಪಾಲಿಸೈ ॥ ಅನುಪಲ್ಲ ॥ ವೆಂಟಣಿಸಿದ ಜಲಧಿಯೊಳಗೆ । ತುಂಟ ಕಟಕಿ ತಮನು ಘನನಿ । ಗಂಟ ಮೂಲ ಶ್ರುತಿಗಳೊಯ್ಯೆ । ಟಿಂಟಣಿಸುತ ಕೋಪದಿಂದ ॥ ಕಂಟಕಿಯನು ತರಿಯಲೋಸುಗಾ । ಮತ್ಸ್ಯಾಕೃತಿಯನು । ಉಂಟಿಣಿಸುತ ಅಸುರವಾಶಿ ಗಾ । ಕ್ಷೀರಾಬ್ಧಿ ಮಥಿಸಿ॥ ಲೆಂಟು ದಿಗ್ವಿವಾದಿ ಸುರರಿಗೀಂಟದಮೃತಕ್ಕಾಗಿ ಶ್ರೀವೈ । ಕುಂಠನಾಥನೆನಿಸಿ ಗಿರಿಯ ಪಂಠಿ ತಾಳ್ದ ಕಂಕಮಟನೆ ॥ ಪಾಲಿಸೈ ॥ ॥ ೧ ॥ ಗರ್ವದಿಂದ ಖಳನು ವಿಮಲ । ಊರ್ವಿಯನ್ನು ಕದ್ದು ನಡೆಯೆ । ಸರ್ವಜನ ಸುಪರ್ವನೇಕ । ಸಾರ್ವಭೌಮನೆಂದು ನುತಿಸೆ ॥ ನಿರ್ವಹಿಸಲು ಸುರರು ದೂರನು। ತಾನಭಯವಿತ್ತು । ಪೂರ್ವಯಂಗ ವರಹರೂಪನೂ ॥ ಕೈಕೊಂಡು ದುರುಳನ ॥ ಶರ್ವರಿದು ಕಂಭದಿಂದ ದೂರ್ವ ಪಿಡಿಯಸುಗುಳಿ ವಂದಿ । ತರ್ವರಿಯನ ಕ್ಷಾದ ದುರಿತ ಪರ್ವತೌಘ ವಜ್ರ ನೃಹರಿ ॥

॥ ಪಾಲಿಸೈ ॥ ೨ ॥ ಶಕ್ರಪದವಿಯ ಬಯಸಿ ದೈತ್ಯ । ಚಕ್ರವರ್ತಿ ಗೈದ ಯಜ್ಞನ । ತಿಕ್ರಮಿಸಲು ವಿಪ್ರವಟುವಿ । ನಾಕ್ರಮದಲಿ ದಾನ ಬೇಡಿ ॥ ಶುಕ್ರ ನಯನ ಹರಣಗೊಳ್ಳುತಾ । ವಿರಾಟಧರ ಶ್ರೀ । ವಿಕ್ರಮಾಖ್ಯ ರೂಪ ತಾಳು ತಾ ॥ ಧರಿತ್ರಿಯೊಳಿದು ॥ ವಿಕ್ರಮದಿ ಬಲಿಕವಾಟ ಚಕ್ರಿಯೆನಿಸಿ ಕ್ಷತ್ರಿಕುಲವ । ವಕ್ರತನದಿ ಸಂಹರಿಸಿದ ಚಕ್ರನಿಭ ಕುಠಾರ ತಾಳ್ದ ॥ ಪಾಲಿಸೈ । ॥ ೩ ॥ ಹಿಂದೆ ಖಳರ ವೃಂದವನ್ನು । ನಂದು ತರಿಯಲಾಗಿ ಅಜನ । ನಂದನ ಸುತನೆಂದೆನಿಸಿ । ಇಂದಿರಾಕ್ಷಿ ನೆವದಿ ದಶವ ॥ ಕಂಧರಾದಿ ಮಂದದೈತ್ಯರ ॥ ಹವಾಗ್ರದಿಂದ । ಕೊಂದು ಸಲಹಿ ವಂದ್ಯಭಕ್ತರಾ ॥ ಒಳಿಕ ಬಿಡದೆ ॥ ನಂದ ಗೋಕುಲವಲ್ಲಿ ನಂದ ಕಂದನಾಗಿ ಪುಟ್ಟಿ ಪಾರ್ಥ । ನಿಂದ ದುಷ್ಟ ಕೌರವರನು ಕೊಂದಿಸಿದ ಮುಕುಂದ ಕೃಷ್ಣ ॥ ಪಾಲಿಸ್ಯ ॥ ೪ ॥ ಮತ್ತರಾಗಿ ಗೈವ ತ್ರಿಪುರ । ಮತ್ತಕಾಶಿನಿಯರ ವ್ರತವ । ಉತ್ತಲೆತ್ತದಿಂದ ಕೆಡಿಸಿ । ಮತ್ತೆ ತೇಜಿ ಏರಿಸುತ್ತ ॥ ಮತ್ತಿಸಿರ್ಪ ಮ್ಲೇಂಛವರ್ಗವಾ । ಸಂಹರಿಸಿ ಭಕ್ತ । ಮೊತ್ತ ನಿತ್ಯ ಸಲಹಿ ಮಾಧವಾ ॥ ಆನಂದದಿಂದ ॥ ಛತ್ರ ವಟದಪುರದಿ ನುತಿಸ ಭೃತ್ಯರುತ್ತಮರನ್ನು ಕ್ಕಾವ । ಕರ್ತೃ ಗುರು ನೃಸಿಂಹ ನಮೋ ನಮೋಸ್ತು ವೀರ ವೆಂಕಟೇಶ ॥ ಪಾಲಿಸೈ ಶ್ರೀವೆಂಕಟೇಶ್ವರಾ ॥ ೫ ॥ ಶ್ರೀ೩ ॥

॥ ೯೧ ॥ ರಾಗ, ಜುಂಜೋಟಿ [ಧಾಟಿ:- ದೇ ಮಜ ದಿವ್ಯ ಮತಿ । ಸರಸ್ವತಿ] ಅಷ್ಟತಾಳ

ಶ್ರೀರಾಮ ಸೀತಾಪತೇ । ಶ್ರೀರಘುಪತೇ । ಶ್ರೀರಾಮ ॥ ಪಲ್ಲ ॥ ಶಾರದೆಂದು ನಿಭ ಚಾರುಮುಖಾಂಬುಜ । ಸಾರಸಾಂಬಕ ರಾಜತೇ ॥ ಶ್ರೀರಘುಪತೇ ॥ ೧ ॥ ಭೂಮಿಪಾಲ ಸಾರ್ವಭೌಮ ದುರ್ವಾದಳ । ಶ್ಯಾಮಸುಂದರ ಮೂರುತೇ ॥ ಶ್ರೀರಘುಪತೇ ॥ ೨ ॥ ಕೌಸಲ್ಯ ಜಠರಾಬ್ಧಿ ಪೂರ್ಣಚಂದ್ರಮ ನಿತ್ಯ । ಹಂಸವಾಹನಪೂಜಿತೇ ॥ ಶ್ರೀರಘುಪತೇ ॥ ೩ ॥ ಕೋದಂಡಪಾಣಿ ಆಜಾನುಬಾಹು । ವೇದವೇದ್ಯ ಸತ್ಯಸಾನ್ನಿಧೇ ॥ ಶ್ರೀರಘುಪತೇ ॥ ೪ ॥ ನವರತ್ನ ಮಕರಕುಂಡಲ ಮಕುಟಾಂಕಿತ । ನವಪೀತಾಂಬರ ಧಾರಿತೇ ॥ ಶ್ರೀರಘುಪತೇ ॥ ೫ ॥ ಅಗ್ರಗಣ್ಯ ಸದಾನುಗ್ರಹಿ ಕಪಿವರ್ಯ । ಸುಗ್ರೀವಾದ್ಯಭಿವಂದತೇ ॥ ಶ್ರೀರಘುಪತೇ ॥ ೬ ॥ ವಾಸುದೇವಾದಿ ಪುರುಷ ಪುರುಷೋತ್ತಮ । ವಾಸವಾರ್ಚಿತ ಶ್ರೀಪತೇ ॥ ಶ್ರೀರಘುಪತೇ ॥ ೭ ॥ ಪವನ ಸರ್ವಜ್ಞತೀರ್ಥಾರ್ಯರೊಂದಿತ ಪಾದ । ಭುವನೇಂದ್ರ ತೀರ್ಥಾರ್ಚಿತೇ ॥ ಶ್ರೀರಘುಪತೇ ॥

॥ ೮ ॥ ಸಿಂಹಾಸನಸ್ಥ ಪ್ರಶಸ್ಥ ಮದ್ಗುರು ನಾರ । ಸಿಂಹ ಕೃಪಾಂಭೋನಿಧೇ ॥ ಶ್ರೀರಘುಪತೇ ॥ ೯ ॥ ಶ್ರೀ ॥

॥ ೯೨ ॥ ರಾಗ ಸಾರಂಗ [ಧಾಟಿ:- ಸಾಕು ಸಾಕು ಮನುಜಸೇವೆಯು] ರೂಪಕತಾಳ

ಅಭಯ ಬೇಡೊ ಸುಮನಸುಂದರ । ಶ್ರೀಹರಿಯ ಪ್ರಿಯ । ಅಭಯ ಬೇಡೊ ಸುಮನಸುಂದರ ॥ ಪಲ್ಲ ॥ ಅಭಯ ಬೇಡೊ ಪ್ರಿಯ ರಮಾ । ವಿಭು ಜಗನ್ನಿವಾಸನೊಡನೆ । ಉಭಯಸುಖವನೀವ ಚೆಲ್ವ । ಅಬುಜನೇತ್ರ ಸೊಬಗನೆಂದು ॥ ಅಭಯ ॥ ಅನುಪಲ್ಲ ॥ ಘೋರಭವದ ಪಾಶ ಮುನ್ನ । ಓರಣಿಸಿದೆ ಕೊರಳೊಳು । ಚಾರು ನವಸುಭಕ್ತಿ ಮುಖ । ಸ್ವಾರಸ್ಯದ ಮಾರ ಪಿತನ ॥ ಅಭಯ ॥ ೧ ॥ ನೊಂದು ವಾರಣೇಂದ್ರ ತನ್ನ । ದಂದುಗದಲಿ ನುತಿಸಲು । ಬಂದು ರಕ್ಷಿಸಿದ ಮುಕುಂದ । ಸಿಂಧುಶಾಯಿ ಎಂದು ಹರಿಯ ॥ ॥ ಅಭಯ ॥ ೨ ॥ ನಿಗಡ ದೈತ್ಯ ತರಳನನ್ನು । ಅಗಣಿತದಲಿ ಬಾಧಿಸೇ । ಮುಗುವು ಕರೆಯೆ ಬಂದು ಕ್ಶಾದ । ನಿಗಮನುತ ಪರಾಕು ಎನುತ ॥ ಅಭಯ ॥ ॥ ೩ ॥ ಕಿಂಕರೌಘ ಸುಪ್ರಸನ್ನ । ಸಂಕಟೌಘ ಧ್ವಂಸನ । ವೆಂಕಟೇಶ ವರದವಳ । ಲಂಕೆಯಧಿಪ ಗುರು ನೃಹರಿಯ ॥ ಅಭಯ ॥ ೪ ॥ ಶ್ರೀ ॥

॥ ೯೩ ॥ ರಾಗ, ಬೇಗಡೆ [ಧಾಟಿ:- ನಿರವಧಿ ಸುಖದಾ। ಹರ ಮಹಾದೇವ] ಚಾಪುತಾಳ

ಪರವಿಧಿವರದ ಶ್ರೀ । ಹರಿ ಶ್ರೀನಿವಾಸಾ ॥ ಪಲ್ಲ ॥ ಸ್ಥಿರಸುಖಭರಿತಂ । ಶೋಭನಚರಿತಂ । ಗರುಡವರೂಥಂ । ಗೋಮುನಿನಾಥಂ ॥ ಹರ ॥ ಅನು. ॥ ವಿಷ್ಣು ಸರ್ವೇಶಂ । ಎನುತಸುಪೋಷಂ । ಕೃಷ್ಣವತಾರಂ । ಕೀರ್ತಿಸಾರಂ ॥ ಜಿಷ್ಣುಪಾಲಚಾ । ಮೂಕರಚೇಲಂ । ಉಷ್ಣಕಿರಣ ಮಿತ । ಭಾಸ ಸುಶೀಲಂ ॥ ಹರ ॥ ೧ ॥ ವಿಭು ವಾಸುದೇವಂ । ಕೌಸ್ತುಭಗ್ರೀವಂ । ಇಭಪತಿ ಯಭಯಂ । ನಭವನತುಭಯಂ ॥ ಶುಭ ವಿಭವಾಸ್ಪದ । ಅಬುಜದಳೇಕ್ಷಣಂ ॥ ಹರ ॥ ೨ ॥ ಪರಬ್ರಹ್ಮ ಬೋಧಂ । ಪಾರ್ಥಪ್ರಮೋದಂ । ಪರಜಿತಕಾಲಂ । ಪ್ರಹಲ್ಲಾದಪಾಲಂ ॥ ವರ ಮೂಲಿಕ ವಳಲಂಕವಿರಾಜಂ । ಗುರು ನರಸಿಂಹ ಮದ್ರಾಜಾಧಿರಾಜಂ ॥ ಹರವಿಧಿ ॥ ೩ ॥ ಶ್ರೀ ॥

॥ ೯೪ ॥ ರಾಗ, ಬೇಗಡೆ [ಧಾಟಿ:- ಭಾವಿಸುವೆ ಸಂಜೀವಿ ನಿನ್ನನು] ಏಕತಾಳ

ತೋರಿಸೈ ದಯಸಾರಸಂಪನ್ನಾ । ಶ್ರೀನಾರಸಿಂಹ । ಭೂರಿಭಾಗ್ಯಮುದಾರ ಗುಣಪೂರ್ಣ ॥ ಪಲ್ಲ ॥ ಚಾರುಚರಿತ ವಿಶಾರದಾಂಕ ಸು । ಸ್ಮೇರ

ವಿಕ್ರಮ ಮೇರು ಮಂದರ । ಧಾರ ದೈತ್ಯಪ್ರಹಾರ ಚಕ್ರವ । ಧಾರ ದೀನೋದ್ಧಾರ ಎನ್ನೊಳು ॥ ತೋರಿಸೈ ॥ ಅನುಪಲ್ಲ ॥ ನಾಗಶಯನ ನತಾಗ್ರಜಾಗ್ರಜ ನಾಗರಿಪುಗಮನಾ । ದುಃಖಿತ । ನಾಗವರದ ಸುನಾಗಜಾಂಬಕ ನಾಗಧರ ಸುಮನಾ । ಸಾರ್ಚಿತ । ಭೋಗಭಾಗ್ಯನಿಯೋಗ ದಯ ಸುರನಾಗನಘ ಶಮನಾ । ವಿಕ್ರಮ ॥ ನಾಗಮುಖಿಯುತ ನಾಗನಾಗ ಸು । ತಾಗಮಾಗಮ ನಾಗಮುಖಿ ಸಂ । ಭೋಗ ಸಂಪದರಾಗರಂಜಿತ । ನೈಗಮೇಶ ಸರಾಗ ಸರ ಹರಿ ॥ ತೋರಿಸೈ ॥ ೧ ॥ ಹಂಸಗಮನೋತ್ತಂಸಪೂಜಿತ ಹಂಸಚಿದ್ರೂಪಾ। ಭ್ರಾಜಿತ । ಹಂಸಕೋಟಿಸುಧಾಂಶು ವಹ್ನಿಪ್ರಶಂಸ ಸುಕಲಾಪಾ । ಸುತ ಪರ। ಹಂಸ ವರ ಸಿತಹಂಸವಾಹನ ಹಂಸಕುಲಭೂಪಾ । ಪಾಲಿತ ॥ ಹಂಸವಿದ್ಯಾ ಹಂಸವಿಸ್ಫುರ । ಹಂಸಲೋಚನ ಹಂಸಹಂಸಕ । ದಾಂಶು ದೈತ್ಯಧ್ವಂಸ ಮಾತುಳ । ಕಂಸಭಂಜನ ಹಂಸ ವೇಂಕಟ ॥ ತೋರಿಸೈ ॥ ೨ ॥ ಮಂದಹಾಸ ಮುಕುಂದ ನಿತ್ಯಾನಂದ ಪರಿಪೂರ್ಣಾ । ಭವ ಭಯ । ಬಂಧಗುಣ ನಿರ್ಬಂಧ ಕುಲಹರ ನಂದಧರ ವರ್ಣಾ । ಅಜ್ಞಾ । ನಾಂಧನಾಶನ ಮಂದರಿಪು ನಮಿತಾಂಧರಿಪು ಪೂರ್ಣಾ । ಸನ್ನುತ ॥ ಸುಂದರಂ ಬಲಿಬಂಧನಾಸತ । ಪ್ರಂದಪಾಲಕ ವಂದಿತಾಮರ । ಕುಂದರದನ ರಾಕೇಂದುವದನಾ । ನಂದ ಸಂಯುತ ಬಿಂದು ಮಾಧವ ॥ ತೋರಿಸೈ ॥ ೩ ॥ ದೇವದೇವನ ಭಾವ ಕೀರ್ತಿಪ್ರಭಾವ ಜಗದೀಶಾ । ಶೋಭಿತ। ಭಾವಜಾಂತಕ ಭಾವರಾಚಿತ ಶ್ರೀವಧೂಕೋಶಾ। ಪ್ರಜ್ವಲ। ಪಾವನಾಂಗ ಕೃಪಾವಲಂಬ ಸ್ವಭಾವ ವಿಶ್ವೇಶಾ । ಜಯ ಜಯ । ರಾವಣಾಂತಕ ಶುಭಾವಲೋಕನ । ಸಾವಧಾನ ವಿಭಾವಸುಜ್ವಲ । ದೈವಮುಕ್ತ್ಯಯುದಾವ ಭಜಕರ । ಕಾವ ಘೋರೆ ಶ್ರೀದೇವ ವಿಠ್ಠಲ ॥ ತೋರಿಸೈ ॥ ೪ ॥ ಗೋಪನಂದನ ಗೋಪವಾಹನ ಗೋಪಸುತ ಚರಣ । ಸಾಹಸ । ಗೋಪಧ್ಯಾನಿತ ಗೋಪದಯ ಸುರಗೋಪ ಸತ್ಕರುಣಾ । ಮನ್ಮಥ । ತಾಪಹರ ನಿರ್ಲೇಪ ನೀರದ ರೂಪಕಾವರಣಾ । ವಿಕಸಿತ ॥ ಗೋಪನೇತ್ರ ಸುಗೋಪ ಕಾಂತಿಪ್ರ । ಲಾಪ ಭಂಜಿತ ಪಾಪಸೇವಿತ । ಗೋಪಕ್ಷಮಿತ ಕೃತಾಪರಾಧ ಪರಾತ್ಪರಾತ್ಪರ ಶ್ರೀಪತೇ ಹರಿ ॥ ತೋರಿಸೈ ॥ ೫ ॥ ಭೀಮ ರಣನಿಸ್ಸೀಮ ತ್ರಿಶಿರ ವಿರಾಮ ಶ್ರೀರಾಮಾ । ಗರ್ವಿತ । ಕಾಮ ಕಾರ್ಯೋದ್ದಾಮ ಕರ ನಿರ್ನಾಮ ಸತ್ಸ್ನೇಮಾ । ರಾಜಿತ । ಭೂಮಿಜಾನನ ಸೋಮ ಕರಕಂಜಾ ಮನೋರಾಮಾ । ತಾರಕ ॥ ನಾಮ ಭಾರ್ಗವರಾಮ ದರ್ಪೋ । ದ್ದಾಮ ಕುಲವಿರಾಮ ವಿರಚಿತ ।

ಸಾಮಗಾನ ಲಲಾಮ ಕಾಂಚನ। ದಾಮ ಧಾರಣ ಶ್ರೀಮಹೀಪತೇ ॥ ತೋರಿ ಸ್ಯೆ ॥ ೬ ॥ ಬಂದೆ ಬಲು ನಿರ್ಬಂಧ ಭವಭಯದಿಂದ ಬಹಳಾಗೀ । ತಾಪದಿ । ನೊಂದು ಕುಂದುತ ಬೆಂದೆ ಕರುಣಾಸಿಂಧು ನೀನಾಗೀ । ಕೈವಿಡಿ।ದಿಂದು ನೀ ಮುಚುಕುಂದಗೊಲಿದಿರುವಂದ ಲೇಸಾಗೀ । ತೋರಿಸಿ ॥ ಚಂದವಲಿ ದಯ ದಿಂದನಾನತ। ಬಂಧು ನಿತ್ಯಾನಂದ ಹೃದಯದ। ನಿಂದು ಪದ್ರಿಪ್ರು ವಂದಗೆಡಿಸಿ ದು। ರಾಂಧಮಿಹಿರ ಮುಕುಂದ ರಕ್ಷಿಸೊ ॥ ತೋರಿಸ್ಯೆ ॥ ೭ ॥ ಪಾತಕಿಯು ಖೀ ಏತಕೆನಗಿನ್ನೀತನೆಂದೆಂಬಾ । ಮನಸಿನ । ರೀತಿಯೋ ದ್ವಿಜಕೇತನುತ ಪುರುಹೂತನಿಕುರುಂಬಾ । ಅಜಮಿಳ । ನೇತರವನು ಪುನೀತನೇ ರಘುಜಾತ ನೀ ಗೊಂಬಾ । ಹಟವಿ ॥ ನ್ಯೀತ ಕೈಬಿಡುನಾತನಲ್ಲರ । ಜಾತದವನಾ ಪಾ। ತಯ ಸಂ। ಭೂತಭೂತಿಯನಾತು ನಾ ನಿ।ಷ್ಪಾತಕಿಯು ಸುಪುನೀತನಹೆನ್ನೆ॥ ॥ ತೋರಿಸ್ಯೆ ॥ ೮ ॥ ದಕ್ಷವರ್ಧಪತಾಕ್ಷ ಮಿತ್ರದಳಾಕ್ಷ ಶ್ರೀರಂಗಾ । ಹಾ ಟಕ । ಕಕ್ಷನಘಕುಲ ಕಕ್ಷಕಾನಳಧ್ಯಕ್ಷ ನೀಲಾಂಗಾ । ನಿರ್ಜರ । ಪಕ್ಷ ಪರ ನಿಖಿಲಾಕ್ಷಸಖ ಸಂರಕ್ಷ ಭವಭಂಗಾ ॥ ಕ್ರೂರಿತ ॥ ತಕ್ಷಕಾಂತಕ ಲಕ್ಷ ದುರ್ಧರ। ಸೀಕ್ಷಿತಾಮಲ ಯಕ್ಷಹಾರ ಮ। ಮುಕ್ಷು ಹೃದ್ಗಮ ಮೋಕ್ಷ ದಾಯಕ।ನೀಕ್ಷಿಸೆನ್ನ ಕಟಾಕ್ಷದಿಂದಲಿ ॥ ತೋರಿಸ್ಯೆ ॥ ೯ ॥ ನಿನ್ನ ಪದಯುಗ ವನ್ನು ನಿತ್ಯದೊಳೆನ್ನ ಪ್ರುತ್ಕುಮುದ । ದಿರಿಸುತ । ಖಿನ್ನನಾಗುತ ಭಿನ್ನ ಗತಿಯೊಳು ಮುನ್ನ ಧ್ರುವವರದಾ । ಧ್ಯಾನಿಸು।ವೆನ್ನ ವಾಂಛಿತವನ್ನು ಪಾಲಿಪು ದಿನ್ನು ನಿರ್ಭೇದಾ । ಮೇನೆನ॥ ಲೆನ್ನ ಹೃದಯೋತ್ಪನ್ನ ಭೀಪ್ಸವ। ನಿನ್ನು ಕೇಳಾ ನೆನುವದೇನ್ ಸಂ । ಪೂರ್ಣರಸವಾದೋನ್ನತದ ನಿ । ತ್ಯಾರ್ಣವವ ಸಂಪನ್ನ ಪಾಲಿಸೊ ॥ ತೋರಿಸ್ಯೆ ॥ ೧೦ ॥ ಮೂಲಪುರುಷ ವಿಶಾಲಮಹಿಮ ಸುಶೀಲ ಸುರರಾಜಾ । ಲಕ್ಷ್ಮೀ । ಲೋಲ ಮಾನುಷಲೀಲ ನಂದನೃಪಾಲ ವರ ತನುಜಾ । ಸುರಮುನಿ । ಜಾಲ ಗೋಪೀಬಾಲ ಸುಂದರ ನೀಲಕರ ನೈಜಾ । ಸದ್ಗುಣ ॥ ಶೀಲ ಶಂಕರಸಾಬಧರ ವನ । ಮಾಲ ದುಃಖಿತ ಬಾಲವರದ ದ । ಯಾಲ ಪಾಲಕ ಕಾಲಕಾಲ ಕ । ರಾಲ ನರಹರಿ ಮೂಲಿಕಾಧಿಪ ॥ ತೋರಿ ಸ್ಯೆ ॥ ೧೧ ॥ ಶ್ರೀಃ ॥

॥ ೯೫ ॥ ರಾಗ, ಸೌರಾಷ್ಟ್ರ [ಧಾಟಿ:- ಶರಣು ಶಂಕರ ಭೂಷಣಾದ್ರಿಗೆ] ತ್ರಿವುಡೆತಾಳ

ಹ್ಯಾಗೆ ಪೋಗಲಿ ಯದುಪನಲ್ಲಿಗೆ । ಯೇನು ಕೊಡಲಿ ಶ್ರೀರಂಗಗೆ ॥ ನಾಗಶಯನನು ನಮ್ಮ ರಕ್ಷಿಪ । ರಿಕ್ತಹಸ್ತದಿ ಹೀಗೆ ನಾ ॥ ಪಲ್ಲ ॥

ಕಾಣಿಕೆಗೆ ಮನೆಯೊಳಗೆ ಯೇನು । ಕಾಣಲಿಲ್ಲವೆ ಜಾಣೆಯೇ ॥ ಜಾಣ ಕೃಷ್ಣಗೆ ಯೇನು ಕೊಟ್ಟರು । ಪ್ರಾಣನಾಥ ಸಂತುಷ್ಟನೆ ॥ ೧ ॥ ದೇವ ದಾನವರಾದಿ ಗುರು ಮೊದ। ಲಾದವರು ಇವರಲ್ಲಿಗೆ ॥ ದಾವನಾದರು ಏನು ಇಲ್ಲದೆ । ಪೋಗುವನೆ ಅವನಲ್ಲಿಗೆ ॥ ೨ ॥ ಬಾಲ್ಯಸಖನಿರುವಲ್ಲಿ ಪೋಗಲು । ಚಲ್ವಪುರುಷನ ಕಾಣಲು ॥ ಯೆಲ್ಲಿ ನಮಗೆ ಯೇನು ತಂದಿರಿ । ಯೆಲ್ಲಿ ಕೊಡು ಯಿಂತೆಂಬನು ॥ ೩ ॥ ಪಟ್ಟದರಸಿಯರೆದ್ದು ಬಂದು । ಥಟ್ಟ ಶ್ರೀ ಗೋಪಾಲಗೆ ॥ ಇಷ್ಟು ಅಷ್ಟಂತೆನೆ ಮಹಿಮೆಯು । ಅಷ್ಟಭಾಗ್ಯ ಸಂಪನ್ನಗೆ ॥ ೪ ॥ ನಾರಸಿಂಹನ ದರುಶನವನೂ । ಯಾರು ಮಾಡಿದರವರಿಗೆ ॥ ಸಾರತರ ಸೌಖ್ಯ ಸುಖಂಗಳು । ಕೊಟ್ಟು ಸಲಹುವ ನಮ್ಮಗೆ ॥ ಹ್ಯಾಗೆ ॥ ೫ ॥ ಶ್ರೀ ॥

॥ ೯೬ ॥ ರಾಗ, ಕಲ್ಯಾಣಿ [ಧಾಟಿ:- ಸಾಕು ಸಾಕು ಮನುಜ] ರೂಪಕತಾಳ

ಮಂಗಳಾಂಗ ಮನ್ನಿಸು ತಪ್ಪನು । ರಂಗನಾಥ । ರಕ್ಷಿಸೈಯ್ಯ ತಂದೆ ಯನ್ನನು ॥ ಪಲ್ಲ ॥ ಮಮತೆಯಿಲ್ಲದ ಮಡದಿ ಯಾತಕೆ । ರಂಗನಾಥ । ಸುಮತಿಯಿಲ್ಲದ ಸುತನು ಯಾತಕೆ ॥ ಕುಮತಿಯುತರ ಸಂಗವೇಕೆ । ಸಮತೆ ಯಿಲ್ಲದ ಬಂಧುವೇಕೆ । ಅಮಿತ ನಿನ್ನ ಚರಣಕಮಲ ರಮಿತನಾಗದ ಮನುಜ ನೇಕೆ ॥ ೧ ॥ ಕಣ್ಣುಯಿಲ್ಲದ ರೂಪು ಯಾತಕೆ । ರಂಗನಾಥ । ಹೊನ್ನು ಇಲ್ಲದ ಬಾಳು ಯಾತಕೆ ॥ ಮುನ್ನ ಮೂಗು ಇಲ್ಲದ ಮೊಗವು । ಮಣ್ಣು ತಿಂದು ಹೋದರೇನು । ಅಣ್ಣ ನಿನ್ನ ಭಕುತಿಯಿಲ್ಲದ । ಸಣ್ಣ ಮನುಜ ಸತ್ತ ರೇನು ॥ ೨ ॥ ದಾನವಿಲ್ಲದ ಧನವಿದ್ಯಾತಕೆ । ರಂಗನಾಥ । ಜ್ಞಾನವಿಲ್ಲದ ವಿದ್ಯೆಯಾತಕೆ ॥ ಆಣೆಯಿಲ್ಲದ ಅರಸು ತಾನು । ಅಡವಿಪಾಲು ಆದರೇನು । ದೀನಬಂಧು ನಿನ್ನ ನಂಬದ । ಮಾನಹೀನ ಮನುಜನೇಕೇ ॥ ೩ ॥ ಮಕ್ಕ ಳಿಲ್ಲದ ಮನೆಯು ಯಾತಕೆ । ರಂಗನಾಥ । ಅಕ್ಕರಿಲ್ಲದ ಊಟ ಯಾತಕೇ। ಸೊಕ್ಕಿ ನಡೆವ ಬಂಟನ್ಯಾಕೆ । ಮಿಕ್ಕು ಮೀರ್ವ ಶಿಷ್ಯನೇಕೆ । ರಕ್ಕಸಾರಿ ನಿನ್ನ ಸೇರದ । ಸೊಕ್ಕು ನರಜನ್ಮವೇಕೆ ॥ ೪ ॥ ಸಾಕು ಸಾಕು ದೀನನಾದೆನು । ರಂಗನಾಥ । ಸಾಕು ಸಾಕೈ ಬೇಗ ಯನ್ನನು ॥ ಕಾಕು ಮಾಡಿಯೆ ವೈಕುಂಠ । ನಗರದೊಡೆಯ ನಾರಸಿಂಹ । ಯೇಕಭಕ್ತಿಯಿಂದಲಿರುವೆ । ನ್ಯಾಕೆ ಕೈಯ್ಯ ಬಿಡುವೆ ಧೊರೆಯೇ ॥ ಮಂಗಳಾಂಗ ॥ ೫ ॥ ಶ್ರೀ ॥

॥ ೯೭ ॥ ರಾಗ, ಘಂಟಾರವ ಅಥವಾ ಆರಬಿ, ಏಕತಾಳ.

ಶ್ರೀಮನೋವಲ್ಲಭ ನಾರಾಯಣಗೇ । ಶುಭಮಂಗಲಂ ॥ ಭೂಮಿಕಾಂತಗೇ ನಿತ್ಯಾನಂದಗೇ । ಜಯಮಂಗಲಂ ॥ ಶ್ರೀಮನೋಹರ ॥ ಪಲ್ಲ ॥ ಉತ್ತಮೋತ್ತಮ ಕೋಮಲಾತ್ಮಗೆ । ಸತ್ಯವಿಭು ಸರ್ವೋತ್ತಮಗೆ । ಘನ ಸತ್ಯಸಂಧಗೆ ಶ್ರೀಮುಕುಂದಗೇ ॥ ಜಯ ಮಂಗಲಂ ॥ ಶ್ರೀಮನೋಹರ ॥ ॥ ೧ ॥ ಕಂಜಬಾಂಧವನಂತ ಭಾಸಗೆ । ಕಂಜನಾಭಗೆ ಕಾಯಜಪಿತಗೆ ॥ ಪ್ರಭಂಜನ ಪ್ರಿಯ ಸತ್ಯಕೀರ್ತಿಗೆ ॥ ಶುಭಮಂಗಲಂ ॥ ಶ್ರೀಮನೋಹರ ॥ ॥ ೨ ॥ ವೇದಸಿದ್ಧ ಅನಂತಶಾಯಿ । ಅನಾದಿಪುರುಷಗೆ ಶಾಂತಮೂರ್ತಿಗೆ ॥ ಬೋಧಸಾಕ್ಷಿಗೆ ಭಕ್ತಪ್ರೇಮಿಗೆ ॥ ಶುಭ ಮಂಗಲಂ ॥ ಶ್ರೀಮನೋಹರ ॥ ॥ ೩ ॥ ಪಂಕಜೋದ್ಭವ ವಂದ್ಯಚರಣಗೆ । ಶಂಖಚಕ್ರ ಗದಾಬ್ಜಧಾರಿಗೆ ॥ ಶಂಕರಪ್ರಿಯ ಸಾರ್ವಭೌಮಗೆ ॥ ಜಯ ಮಂಗಲಂ ॥ ಶ್ರೀಮನೋಹರ ॥ ॥ ೪ ॥ ನಾರದಾದಿ ಮುನೀಂದ್ರನುತ । ಶೋಭಾಕರಗೆ ಗುರು ನಾರಸಿಂಹಗೆ॥ ವೀರ ವರ ಪ್ರಹಲ್ಲಾದಚರಿತಗೆ ॥ ಶುಭ ಮಂಗಲಂ । ಶ್ರೀಮನೋಹರ ॥ ॥ ೫ ॥ ಶ್ರೀಃ ॥

॥ ೯೮ ॥ ರಾಗ [ಧಾಟಿ: - ] ತಾಳ

ಜಯ ಮಂಗಲಂ ನಿತ್ಯ ಶುಭಮಂಗಲಂ ॥ ಪಲ್ಲ ॥ ಗೋಕುಲದಲಿ ಪೊಂಗಳಲಿಸುತಾ । ಗೋಪಿಯರುರ ಕೂಡೆ ನಲಿದಾಡುತಾ ॥ ಮಕುಟವ ತುಳಿದು ಕಾಳಿಂಗನ ಮರ್ದಿಸಿ । ಭಕತರ ಕ್ಕಾವ ಗೋಪಾಲಕೃಷ್ಣಗೆ ॥ ॥ ಜಯ ॥ ೧ ॥ ಅಂಬುಜಪಾಣಿ ಬಿಂಬಾಧರೆಗೆ । ಅಂಬುಜಲೋಚನೆ ಪಾರ್ವತಿಗೆ ॥ ಅಂಬುಜಭವ ಪುರವಾಸನ ರಮಣಿಗೆ । ಅಂಬುಜಗಂಧಿ ಮುಕಾಂಬಿಕೆಗೆ ॥ ಜಯ ॥ ೨ ॥ ಶೇಷಗಿರೀಶಗೆ ಸುಲಲಿತಗೆ । ಶೇಷಶಯನ ಸರ್ವೇಶ್ವರಗೆ ॥ ಭಾಸುರ ವರ ವಳಲಂಕಾಧೀಶಗೆ । ಈಶ ಶ್ರೀಗುರು ನರಸಿಂಹನಿಗೆ ॥ ಜಯ ॥ ೩ ॥ ಶ್ರೀಃ ॥

॥ ಕವಿ ರಾಮಕೃಷ್ಣಕೃತ ಪದಗಳು ಸಂಪೂರ್ಣಂ ॥

॥ ಶ್ರೀಮದ್ಧ್ಯೇಶಾರ್ಪಣಮಸ್ತು ॥



# ತಲಚೇರಿ ವಾಸುದೇವ ಶ್ಯಾನುಭಾಗಕೃತ ಪದಗಳು.

॥ ೯೯ ॥ ರಾಗ, ಮುಖಾರಿ [ಧಾಟಿ:- ಶ್ರೀವಳಲಂಕೇಶಾಯ ನಮೊ] ಏಕತಾಳ

*
ಶ್ರೀ ಭುವನೇಂದ್ರ ದಯಾವನಧಿ । ಸುಜನಾಬ್ಧಿ ಕಲಾನಿಧಿ ॥ ಪಲ್ಲ ॥
ಕಾಶೀಮಠ ಪರಂಪರೆಯೊಳು ಪ್ರಕಾ ।
ಶೀಸಿದ ಸುಮತೀಂದ್ರ ತೀರ್ಥ ಯುಮಿ ನಿಯು ॥
ಮಸೀಲ ಕರಾಂಬುಜಭವ ನಿರತ ಜ ।
ರಾಶಿರವ್ಯಾಸ ರಾಮ ಚರಣಾರ್ಚಕ ॥ ಶ್ರೀ ಭುವನೇಂದ ॥ ೧ ॥
ಧಿಕ್ಕರಿಸುತ್ತ ವಿಷಯಸುಖವನು ತ್ವರೆ ।
ಪಕ್ಕೊಳಗಾಗಿ ಸನ್ಯಾಸ ಧರಿಯಿಂ ಮೂರ್ಖರ ॥
ತಿಕ್ಕುತುದ್ಧರಿಸಲಾಜ್ಞಾನಾರಣಿ ಪುತ ।
ಭುಕ್ಕನಿಸಿದ ದ್ವಿಜಕಮಲ ದಿವಾಕರ ॥ ಶ್ರೀ ಭುವನೇಂದ್ರ ॥ ೨ ॥
ವಂದ್ಯ ನಿಪುಣಕೋಮಲ ರೂವನ ಪದ ।
ನೇಂದುಮುಖರಾಜಿತ ವೈಭವದಿ ಸುರೇಂ ॥
ದ್ರಂ ದಿವನೊಳು ಮೆರೆದಿರುವ್ಪೋಲ್ ದ್ವಿಜರೊಳ ।
ಗುಂ ದಿಗ್ಗಿರಿಪದ ಕೀರ್ತಿಯ ಬೆಳಸಿದ ॥ ಶ್ರೀ ಭುವನೇಂದ್ರ ॥ ೩ ॥
ರತವಿರಕ್ತಿ ಕೀಲಕಾಬ್ದದೊಳಗ ಸ ।
ವೇತ್ರಿಯಾಶ್ರಮ ಕೊಂಡುತಾಲಪಕ್ಷಿಯ ॥
ನತರಾಜನ ಸತ್ಕಾರದೊಳಾತನ ।
ಮಂತದಿಂ ಕಲಿಕಾಲಮಲ್ಲಿ ನೆಲಸಿದ ॥ ಶ್ರೀ ಭುವ ॥ ೪ ॥ ಮುಂದರಿಸಿದೆ.

* ಈ ಮೇಲಿನ ಪದದ ಪ್ರತಿ ಒಂದು ಸೊಲ್ಲಿನ ಆದ್ಯ ಅಕ್ಷರವನ್ನು ಓದಲಾಗಿ "ಶ್ರೀಕಾಶೀಮಠಾಧಿಪತಿ ಭುವನೇಂದ್ರಗುರವೇನಮಃ" ಎಂತ ಆಗುತ್ತದೆ.

ಭೇದದೊಳಿಹ ವಸುಧೇಂದ್ರರ ಚಿತ್ತದ । ಕ್ರೋಧನಿವಾರಿಸಿ ವಿನಯ ಬೆಳಸುತವರ್ ॥ ಮೇದಿನಿಯುಸು ತೊರೆದ ವಾರ್ತೆಯಿಂ ದುಃ । ಖೋದಧಿಯೊಳು ಮುಳುಗಿವ ಯಮಿರತ್ನವೆ ॥ ೫ ॥ ರೌದ್ರಿಯೊಳಲ್ಲಿಂದ ಮಂಜುಳಾಪುರ । ಭದ್ರ ನೃಸಿಂಹನ ಕಾಣಲ್ಕಲ್ಲಿಯ ॥ ಕ್ಷುದ್ರ ವಿವಾದ ನಿವಾರಿಸಿ ಸ್ವಜನಸ । ಮುದ್ರದೊಡನೆ ಮೂಲಿಕೆಗಾಗಮಿಸಿದ ॥ ೬ ॥ ನಂತರ ಶಿಷ್ಯಸಮಾಜದ ಸೇವೆಯ । ಸಂ ತಳೆದಲ್ಲಿಂ ಮುಂದರಿಸ ನಗರ ॥ ಪ್ರಾಂತ್ಯದಿ ಬಿರಿದಿನ ವಾದ ಗೆಲಿದು ಶ್ರೀ । ಮಂತ ರಾಜರಿಂ ಮಾನ್ಯವ ಪಡೆದಿಹ ॥ ೭ ॥ ಗೌಡಸಾರಸ್ವತ ದ್ವಿಜ ಚರಿತವ । ಪ್ರೌಢರರುಹುತ್ತಲ್ಲ್ಯಲ್ಲಿ ಸ್ಥಾಪನೆಯ ॥ ಪಾಡಿನಿಂದ ದೇವಾಲಯ ಮಠಗಳ । ನೊಡೆತ್ತದಂತೆ ಗೈದ ಮಹಾತ್ಮರ ॥ ೮ ॥ ಕಾರಕಳದಿ ದಾರಿಯುಗೋಸುಗ ವ್ಯಪ । ಹಾರ ನಡೆಯಲದ ಜೈಸುತ ಮಂಜುಳ ॥ ಊರಲಿ ಧಾತುಪನೊಳು ವರದೇಂದ್ರರಿ । ಗಾರಾಧ್ಯ ಚತುರ್ಥಾಶ್ರಮವಿತ್ತಿಹ ॥ ೯ ॥ ಮಂಗಳೂರಲಿ ಮಣೇಲಕಾರರ ಪ್ರ । ಸಂಗವೇಳೆ ಗೋಕರ್ಣ ಕಾಶಿಕಲ ॥ ಹಂಗಳೊಳ್ ಜಾತ್ಯಾಧಿಕಾರವ ಸ್ಥಾಪಿಸಿ । ಗಂಗಾಸ್ನಾನಕೆ ಬಿಜಯಂಗೈದಿದ ॥ ೧೦ ॥ ಕಾಶಿಯೊಳಿಪ ಕವಳಿಯ ಮಠವನ್ನರ । ಪಾಶದೊಳಿದ್ದುದ ಬಿಡಿಸುತ ಯಾತ್ರೆಯ ॥ ತೋಷದಿ ಪೂರೈಸುತ ಸನ್ಮಾನದ । ಲೇಸಿನಿಂದ ವಸುಪುರಕ್ಕೈದೊದಗಿದ ॥ ೧೧ ॥ ಮಾರ್ಗಶೀರ್ಷ ಸಿತ ಪಾಡ್ಯ ವ್ಯಯದಲಿ । ವರ್ಗದ ದುರ್ದಶೆ ಈಕ್ಷಿಸಲಾರದೆ ॥ ನಿರ್ಗಮಿಸಿದರೈ ಸಕಲರು ಗೋಳಿಡೆ । ಸ್ವರ್ಗವಾಸಮಂ ತಳೆದ ಸುಗುಣಮಣಿ ॥ ೧೨ ॥ ಹರಿಯೆ ಸರ್ವ ವಿದ್ಯಾಗುಣ ಭಾಗ್ಯದ । ಶಿರಿಯನ್ನೊಯ್ದೆ ವಿಯೋಗದುಃಖ ಮಹ ॥ ಶರಧಿಯೊಳದ್ದು ಕಂಗಾಣದೆಮ್ಮನು । ದ್ಧರಿಸೈ ವರದೇಂದ್ರರಿಂದ ಕರುಣದಿ ॥ ೧೩ ॥ ಸತ್ಯಕ್ಷಮಾಗುಣ ನಿಯತನೀತಿಯಾ । ಗತ್ಯವಾದ ಕ್ರಮಗಳ ಪರ್ಯಾಟವು ॥ ಜಾತ್ಯಭ್ಯುದಯದ ಚಿಂತನೆ ಕೀರ್ತಿಯು । ನಿತ್ಯ ಬೆಳಗಲಿ ಪ್ರಕೃತ ಗುರುಗಳೊಳವು ॥ ೧೪ ॥ ವಾಸುದೇವಶಾಣ್ಣವಿ ಮೂಲಿಕೆಯ ನಿ । ವಾಸಿಯು ಸಕಲರನುಜ್ಞೆಯಿಂದ ರಚಿ ॥ ಸೀ ಸತ್ಕೃತಿ ಸಭೆಯೊಳು ವೊಳಲಂಕಾ । ಧೀಶ ನೃಹರಿ ಶ್ರೀರಮೇಶಗರ್ಪಿಸಿದ ॥ ೧೫ ॥ ಶ್ರೀ ॥

॥ ೧೦೦ ॥ ರಾಗ, ಖಮಾಚ [ಧಾಟಿ:- ] ಅಷ್ಟತಾಳ

ಹಿಂಗದೆ ಮನದಣಿಯೋ । ರಂಗನಾ ಭಜಿಸೊ ॥ ರಂಗನಾ ಭಜಿಸೊ ॥ ರಾಮನ ಪೂಜಿಸೊ ॥ ಹಿಂಗದೆ ಮನದಣಿಯೆ । ರಂಗನಾ ಭಜಿಸೊ ॥ ಪಲ್ಲ ॥

ಹಿಂಗುವದು ಭವಾ । ಮಂಗಲವೀವಾ । ಕಂಗೊಳಿಪುದು ಪದವಾ । ಭಂಗ ಗಳೋಡಿಸುವಾ ॥ ರಂಗನ ಭಜಿಸೋ ॥ ೧ ॥ ಭಕ್ತಿಗೆ ನಂಟು । ಮುಕ್ತಿಗೆ ಗಂಟು । ಶಕ್ತಿಯನೀಂಟು । ಯುಕ್ತಿಯೊಳೇನುಂಟು ॥ ರಂಗನ ಭಜಿಸೋ ॥ ॥ ೨ ॥ ಬಾಳುವೆ ಮೂರಿ । ಕೂಳಿಗೆ ಪಾರಿ । ನಾಳಿಗೆ ದಾರಿ । ಕೇಳಿಲೊ ಚಿತ್ತ ದೋರಿ ॥ ರಂಗನಾ ಭಜಿಸೋ ॥ ೩ ॥ ಕಾಲವ ನೀ ನೋಡೇ । ಪಾಲನೆಯ ನೀ ಬೇಡೇ । ಶೂಲಿಸಖನ ಪಾಡೆ । ನಾಲಿಗೆಗೇನ್ಕೇಡೇ ॥ ರಂಗನಾ ಭಜಿಸೋ ॥ ೪ ॥ ದುಷ್ಟರ ಸೇರಬೇಡ । ಶಿಷ್ಟರ ದೂರಬೇಡ । ನಿಷ್ಠುರವಾಡಬೇಡ । ಕಷ್ಟವು ಹರಿ ನೋಡಾ ॥ ರಂಗನಾ ಭಜಿಸೋ ॥ ೫ ॥ ಕಾಯುವು ಸ್ಥಿರವಲ್ಲ ॥ ಮಾಯೆಯು ಬಿಡದಲ್ಲ । ಆಯುವು ಬೇರಿಲ್ಲ । ಕಾವನು ಲಕ್ಷ್ಮೀನಲ್ಲಾ । ರಂಗನ ಭಜಿಸೋ ॥ ೬ ॥ ಆಶೆಯ ನೀ ಬಿಡು । ದೋಷವನೀಡಾಡು । ಕೇಶವನ ಕೊಂಡಾಡು । ತೋಷದೋಳ್ಮುಳುಗಾಡು ॥ ರಂಗನ ಭಜಿಸೋ ॥ ೭ ॥ ಯೋಚನೆ ಹೋಗದೆ । ನಾಚಿಕೆಯಾಗದೆ । ಯಾಚಿಸಬಾರದೆ । ಮೋಚನೆ ದೋರದಿಹುದೇ ॥ ರಂಗನ ಭಜಿಸೋ ॥ ೮ ॥ ವ್ಯರ್ಥವಿ ಕಾಲ ಕಳಿವೆ । ಅರ್ಥದ ಮೋಹಕ್ಕಳುವೆ । ಕೀರ್ತಿಯ ಬಿಟ್ಟು ಫಲವೇ । ಕೀರ್ತನಯೊಳೇನ್ ಫಲವೆ ॥ ರಂಗನ ಭಜಿಸೋ ॥ ೯ ॥ ಭಾಸುರಸಂಕಾಶ । ವಾಸುದೇವ ರಮೇಶ । ದಾಸರ ಹೃದ್ವಾಸ । ಪೋಷಿಪ ಜಗದೀಶಾ ॥ ರಂಗನ ಭಜಿಸೋ ॥ ॥ ೧೦ ॥ ಶ್ರೀಃ ॥

॥ ೧೨೧ ॥ ರಾಗ, ಕಾಂಬೋಧಿ] **ಏಕಾದಶೀಮಾಹಾತ್ಮ್ಯ.** [ತ್ರಿವುಡೆತಾಳ

ನರಹರಿ ನಾರಾಯಣ ನಮೋ । ನರಹರಿ ನಾರಾಯಣ ನಮೋ । ನರಹರಿ ನಾರಾಯಣ ನಮೋ । ನರಹರಿ ನಾರಾಯಣಂ ॥ ಪಲ್ಲ ॥ ಶ್ರೀ ನೃಸಿಂಹನ ನಾಮ ಮನುಜರ । ಘೋರ ದುರಿತವ ದಹಿಸಿ ಸುಕೃತದ । ದಾರಿಯೊಳು ನಡಸುತ್ತ ಮೋಕ್ಷ । ದ್ವಾರವನು ಹೊಗಿಸುವದು ಧಿಟವಿದು ॥ ನರಹರಿ ನಾರಾಯಣ ॥ ೧ ॥ ಕ್ಷಿತಿಯೊಳತಿಪಾತಕರು ಬಹುತರ । ವ್ರತ ಹರಿಸ್ಮರಣೆಯನು ಗೈದು ಸ । ದ್ಗತಿಯ ಸಾಧಿಸಿ ಜನ್ಮಮೃತಿಯುಪ । ಹತಿ ಭವಾಬ್ಧಿಯನುತ್ತರಿಸುವರೂ ॥ ನರಹರಿ ನಾರಾಯಣ ॥ ೨ ॥ ದೃಷ್ಟಿಸುವ ಫಲಗಳಲಿ ಫಲವಹ । ಶ್ರೇಷ್ಠವಾವುದೆನುತ್ತ ಜನಪ ಯು । ಧಿಷ್ಠಿರನು ಬೆಸ ಗೊಳಲು ಕರುಣದಿ । ಜಿಷ್ಣುಸಖನಾದರದೊಳೆಂದನು ॥ ನರಹರಿ ನಾರಾ

ಯಣ ॥ ೩ ॥ ಈಸು ವ್ರತದಿ ಪವಿತ್ರವಹ ಹರಿ । ವಾಸರೆಂಬೇಕಾದಶಿಯ
ವ್ರತ । ವೇ ಸಕಲ ಪುಣ್ಯಪ್ರದವು ಮಹಾ । ದೋಷಹರ ಇಷ್ಟಾರ್ಥಸಿದ್ಧಿಯು॥
ನರಹರಿ ನಾರಾಯಣ ॥ ೪ ॥ ಎಂದೆನಲು ಕೈಮುಗಿದೆರಗಿ ಸುರ । ವಂದ್ಯ
ನೆನಗದರಾಗಮವನೊಲ । ವಿಂದಲರುಹೆನೆ ದಯದಿ ಕುಂತೀ । ನಂದನಗೆ
ತಕ್ಕೈಸಿ ನುಡಿದನು ॥ ನರಹರಿ ನಾರಾಯಣ ॥ ೫ ॥ ಹಿಂದೆ ಖಳ ಪೃಥು
ಮಾನ್ಯನೆನಿಸುವ । ಮಂದಮತಿಯುದುಭವಿಸಿ ಯೋನಿಜ । ರಿಂದ ಮಡಿಯದ
ವರಗಳನು ಅರ । ವಿಂದಸಂಭವನಿಂದ ಪಡೆದನು ॥ ನರಹರಿ ನಾರಾಯಣ ॥
॥ ೬ ॥ ಕುಟ್ಟಿ ಗೋಬ್ರಾಹ್ಮಣರ ಸುರರನ । ಬೆಟ್ಟುತಮರಾವತಿಯನ್ನಾಳಿ
ಕಂ । ಗೆಟ್ಟು ಭಯದಲಿ ನಿರ್ಜರರು ಪರ । ಮೇಷ್ಠಿಯೊಳು ಪೂರಿದರೆಡರು
ಗಳ ॥ ನರಹರಿ ನಾರಾಯಣ ॥ ೭ ॥ ವೀರದನ್ನಿಂದೆನುತ ವಿಧುಭವ । ವಾರಿ
ಜಾಕ್ಷರ ನೆನೆಯಲವರು ವೈ । ದೋರಿ ನೆರದೊಗ್ಗಾಗಿ ಸರ್ವರು । ಸಾರಿ
ದರು ಗಿರಿತಪ್ಪಲಂಗಳ ॥ ನರಹರಿ ನಾರಾಯಣ ॥ ೮ ॥ ಹಗೆ ಗೆಲುವದೆಂದೆ
ನುತ ನಿಟ್ಟುಸು । ರುಗಳು ಬಿಡಲವರಣುಗಳಿಂ ಝುಗ । ಝುಗಿಪ ಕನ್ಯಾ
ಕೃತಿಯು ಮೂಡಿತು । ಮಿಗೆ ಏಕಾದಶಿ ಎಂಬ ಪೆಸರಲಿ ॥ ನರಹರಿ ನಾರಾ
ಯಣ ॥ ೯ ॥ ಬಟ್ಟೆ ವಸ್ತ್ರಾಭರಣ ಬಗೆಗಳ । ಕೊಟ್ಟು ಸರ್ವರು ಕಳುಹೆ
ಸತಿ ಪೊರ । ಮಟ್ಟು ಘುರದಲಿ ಮಥಿಸ ದೈತ್ಯನ । ಕೊಟ್ಟರತಿ ಹರುಷದಿ
ಪ್ರತಿಜ್ಞೆಯ ॥ ನರಹರಿ ನಾರಾಯಣ ॥ ೧೦ ॥ ಈ ಸುಖವನಿವಳಿತ್ತ ಕಾರಣ ।
ಮಾಸವರ್ಧಕೈಮ್ಮ ಜಾಗರೋ । ಪಾಸಬಿಂಬೇಕೆಯ ವ್ರತವ ಶಶಿ । ನೇಸ
ರುಳ್ಳನಕಾಚರಿಸುವೆವು ॥ ನರಹರಿ ನಾರಾಯಣ ॥ ೧೧ ॥ ಧರೆಯೊಳೀ ವ್ರತ
ವಿಸಗವಿರುತಿಹ । ನರರು ನರಕಕೆ ಬೀಳಲೆಂದಾ । ಗರುಡವಾಹನನಾಜ್ಞೆಯಾ
ಗಲು । ಉರಗವೇಣಿಯದೃಶ್ಯವಾದಳು ॥ ನರಹರಿ ನಾರಾಯಣ ॥ ೧೨ ॥
ಮತ್ತನೇಕಾಬ್ದಗಳ ನಂತರ । ಪೃಥ್ವಿಪತಿ ರುಕ್ಮಾಂಗದನು ಜನಿ । ಸುತ್ತ
ಸುರಮುನಿಯಿಂದ ವ್ರತವ ಸು । ವಿಸ್ತರದಿ ತಿಳಿದಾಚರಿಸಿದನು ॥ ನರಹರಿ
ನಾರಾಯಣ ॥ ೧೩ ॥ ತನ್ನ ರಾಷ್ಟ್ರದಿ ವಾಸಿಸಿಹ ಚತು । ರ್ವರ್ಣ ಜನ ಶಿಶು
ಪಶು ಸಮೇತದಿ । ಭಿನ್ನವಿಲ್ಲದೆ ನಡಸಿ ವ್ರತವನು । ಮುನ್ನತದ ಪುಣ್ಯಗಳ
ಲಭಿಸಿದ ॥ ನರಹರಿ ನಾರಾಯಣ ॥ ೧೪ ॥ ಇಂತೆಸಗೆ ಮಾನುಷರು ಕಿಲ್ಬಿಷ ।
ವಂ ತೊರೆದು ವೈಕುಂಠ ಸಾರೆ ಕೃ । ತಾಂತಪುರ ಬರಿದಾಗಲಾ ಯಮ ।
ಚಿಂತಿಸಲು ಮೊರೆ ಇಟ್ಟು ವೃಷಿಣಗೆ ॥ ನರಹರಿ ನಾರಾಯಣ ॥ ೧೫ ॥ ಬ್ರಹ್ಮ

ಮೋಹಿನಿ ಎಂಬ ತರುಣಿಯು । ನಿರ್ಮಿಸುತ ರುಕ್ಮಾಂಗದನ ವ್ರತ । ವಂಮರಸಿ ಬಾ ಎಂದು ಕಳುಹಲು । ಪಸ್ಮಿತಿಸುತ್ತೈತಂವಳಿಕೆಯೊಳು ॥ ನರಹರಿ ನಾರಾಯಣ ॥ ೧೬ ॥ ಮಂದರಾದ್ರಿಯೊಳ್ಸುಂದರವ ಸ । ನ್ಮಂದಿರವ ವಿರಚಿಸುತ ವೀಣಾ । ಚಂದಗಾನವನೆಸಗೆ ದೂತರು । ಬಂದು ತಿಳಿಸಿದ ರವನಿಪಾಲಗೆ ॥ ನರಹರಿ ನಾರಾಯಣ ॥ ೧೭ ॥ ಬಾಲ ಧರ್ಮಾಂಗದನ ಬರಿಸ ನೀ । ಪಾಲಿಸಿನ್ನೀ ವ್ರತವ ಬಿಡದೆ ಆ । ಲೋಲಲೋಚನೆಯಿರವ ನೀಕ್ಷಿಸಿ । ಲೀಲೆಯಿಂ ಮಹನೆಂದು ಪೊರಟನು ॥ ನರಹರಿ ನಾರಾಯಣ ॥ ॥ ೧೮ ॥ ಕಂಡವಳ ಲಾವಣ್ಯ ಮೂರ್ತಿಸಿ । ಎಂದುಗೆಡಲಾ ಗಜಗಮನೆ ಕರ । ಪುಂಡರೀಕದೊಳೆತ್ತಿ ನಿಲಿಸುತ । ಮಂಡಲಾಧಿಪನೊಡನುಸುರ್ದಳು ॥ ॥ ನರಹರಿ ನಾರಾಯಣ ॥ ೧೯ ॥ ಸಪ್ಪಳಕ್ಲ ಮುಯಿಚ್ಛೆ ಸಲಿಸಲು । ತಪ್ಪಿದರೆ ತವ ಸುತನ ಶಿರವನ । ಗೊಪ್ಪಿಸುವೆನೆಂದಭಯವಿತ್ತರೆ । ಒಪ್ಪಿ ನಿನ್ನಯ ರಮಣಿಯಾಪೆನು ॥ ನರಹರಿ ನಾರಾಯಣ ॥ ೨೦ ॥ ಆಗ ಭಾಷೆಯನಿತ್ತು ಲಗ್ನವ । ಸಾಗಿಸುತ ಸತಿ ಸಹಿತಲೈತಂ । ದಾಗಲಂತಃಪುರದ ಬಹು ದಿನ । ಭೋಗವ್ಯಾಪ್ತಿಯೊಳಿರ್ದ ನೃಪತಿಯು ॥ ನರಹರಿ ನಾರಾಯಣ ॥ ೨೧ ॥ ಒಂದು ದಿನ ಕಾರ್ತಿಕ ಏಕಾದಶೀ । ಎಂದು ಸಾರಿಸೆ ಕೇಳಿದಾ ವ್ರತ । ವಂಧರಿಪೆನೆನೆ ಲಲನೆ ಕೇಳದೆ । ರಂದು ವಿಸ್ಮೃತಿಯಾಂತು ಬಿದ್ದನು ॥ ನರಹರಿ ನಾರಾಯಣ ॥ ೨೨ ॥ ಹಿರಿಯರಸಿ ಸಂಧ್ಯಾವಳಿಯು ಸತಿ । ಇರವ ಮುಗಗರುಹಲ್ಕೆ ವ್ರತವನು । ಕರಿಸಲೆನ್ನಯ ತಲೆಯ ಕಡಿಯೆಂ । ದೆರಗೆ ಸುರರೈತಂದು ತಡೆದರು ॥ ನರಹರಿ ನಾರಾಯಣ ॥ ೨೩ ॥ ಮೋಹಿನಿಯು ಬೀಳ್ಕೊಡುತ ಭೂಪನ । ಸಾಹಸಕೆ ಮೆಚ್ಚುತ್ತ ಶಕ್ರನು । ಪಾವನ ವಿಮಾನದಲಿ ಕುಳಿಸುತ । ದೇವಲೋಕಕ್ಕೊಯ್ದ ಸನಾತನ ॥ ನರಹರಿ ನಾರಾಯಣ ॥ ೨೪ ॥ ಪುತ್ರ ಪರಿಜನ ಸಹಿತಲವನಿಗೆ । ಉತ್ತಮವ್ರತದಿಂದ ಮೋಕ್ಷವ । ನಿತ್ತು ಪಾಲಿಸಿದೊಡೆಯನಘ ಪುರು । ಷೋತ್ತಮನ ಭಕ್ತಿಯಲಿ ಭಜಿಸಿರೋ ॥ ನರಹರಿ ನಾರಾಯಣ ॥ ೨೫ ॥ ಏಳಿಕ ನರ್ಮದ ನದಿಯ ತೀರದಿ । ನೆಲಸಿರುವ ಗಾಲವ ಋಷಿಗೆ ನಿ । ರ್ಮಲ ಗುಣಾಂಬುಧಿ ಭದ್ರಶೀಲನೆಂ । ಬಲಗು ಮತಿ ಜನಿಸಿದ ಕುಮಾರನು ॥ ನರಹರಿ ನಾರಾಯಣ ॥ ೨೬ ॥ ಅರ್ಥಿಯಿಂ ಬಾಲ್ಯದೊಳು ಗಂಗಾ । ತೀರ್ಥಸ್ನಾನವ ಗೈಯ್ಯುತಚ್ಯುತ । ಮೂರ್ತಿಯಂ ಪೂಜಿಸುತಲೀ ವ್ರತ । ವರ್ತಿಸಲು ಪಿತ ಕೇಳ್ದನವನೊಳು ॥ ನರಹರಿ ನಾರಾ

ಯಣ ॥ ೨೭ ॥ ಹೇ ತರಳ ನೀ ರೀತಿ ಗೈವಡೆ । ಹೇತುವಾವುದೆನುತ್ತ ಕೇಳ ಲು । ತಾತ ಪುದಸ್ತ್ರಾಶ್ ಜನ್ಮವಿವರವ । ನಾ ತಿಳಿದು ರಚಿಸುವೆನಿದನು ಕೇಳ್ ॥ ನರಹರಿ ನಾರಾಯಣ ॥ ೨೮ ॥ ಇಂದುಕುಲದಲಿ ಧರ್ಮಕೀರ್ತಿ ಯೆಂ । ಬೊಂದರಸು ಆ ಪೂರ್ವದಲಿ ಮುದ । ದಿಂದನೇಕದ ವ್ರತವ ಮಾಡಲು । ಕುಂದಿತಾ ಫಲದಿಂದ ರಾಜ್ಯವು ॥ ನರಹರಿ ನಾರಾಯಣ ॥ ॥ ೨೯ ॥ ಇಂತಿರಲು ಮೃಗವ್ಯಸನದಲಿ ಮುನ । ವಾಂತು ಸೈನ್ಯ ಸಮೇತ ಪೋಗೆ ಪ । ಥಾಂತರದಿ ತಾನೊಬ್ಬ ಹಸುತೃಷೆ । ಯಂ ತೊರೆದು ಸುರ ನದಿಯ ಸಾರ್ವನು ॥ ನರಹರಿ ನಾರಾಯಣ ॥ ೩೦ ॥ ಮಿಂದು ಜಲವನು ಕುಡಿದು ತಿನಲೀ । ನೊಂದು ಸಿಕ್ಕದೆ ಬಳಲಿ ತೀರದಿ । ನೊಂದು ಮಲಗಿರೆ ಜಾಗರದಿ ಧ್ವಜ । ಸಂದಣಿಯ ಕೀರ್ತನೆಯ ಕಂಡೆನು ॥ ನರಹರಿ ನಾರಾ ಯಣ ॥ ೩೧ ॥ ಚಿತ್ರಗುಪ್ತರು ಎನ್ನ ಪಾಪ ನಿ । ವೃತ್ತಿಸಿತು ಹರಿದಿನದ ವ್ರತದೊ । ಳೆನುತ್ತರುಹಿ ಉತ್ತಮ ವಿಮಾನದಿ । ಹತ್ತಿ ಸಾಲೋಕಕ್ಕೆ ಗಮಿ ಸಿದೆ ॥ ನರಹರಿ ನಾರಾಯಣ ॥ ೩೨ ॥ ನೆಲಸಿ ಬಹು ಕಲ್ಪಾಂತದಲಿ ಮುನ । ವೆಳಸಿ ಸ್ವರ್ಗಕೆ ಬಂದು ಭೋಗವ । ಘಳಿಪ ಕರ್ಮವನಳವಡಿಸಲೀ । ಇಳೆ ಯೊಳಗೆ ನಿನ್ನಲ್ಲಿ ಜನಿಸಿದೆ ॥ ನರಹರಿ ನಾರಾಯಣ ॥ ೩೩ ॥ ಆದರಿನ್ನೆಲೆ ಮುಜ್ಜನಕ ವೈಷ್ಣವ । ಸದಮಲ ವ್ರತ ಪೂಜೆಗೈಯ್ಯುತ । ಪದುಳದಿಂ ಪರತ್ರ ಸಾಧನ । ಮೊದಗಿಸಲು ನಾ ಮಾಳ್ಪೆ ಧಿಟವಿದು ॥ ನರಹರಿ ನಾರಾಯಣ ॥ ॥ ೩೪ ॥ ಚಂದ್ರಹಾಸ ಮಹೀಶ ಕಷ್ಟದಿ । ಬೆಂದು ಬಳಿಕೀ ವ್ರತವೆಸಗಲಾ । ನಂದ ರಾಜೈಶ್ವರ್ಯ ಸೌಖ್ಯಗ । ಳಂದಳದು ಸಾಯುಜ್ಯ ಪಡೆದನು ॥ ನರಹರಿ ನಾರಾಯಣ ॥ ೩೫ ॥ ಎಂದೊರೆದನೀ ಕಥೆಯ ಮುರರಿಪು । ಚಂದದಿಂ ಧರ್ಮಜಗೆ ಪೇಳ್ದುದ । ರಂದವನು ವಿಸ್ತರಿಸಿದುದ ಶ್ರವ । ಣಂದೆರೆದು ಲಾಲಿ ಪುದು ಸುಜನರು ॥ ನರಹರಿ ನಾರಾಯಣ ॥ ೩೬ ॥ ವಿದ್ಧವಿಲ್ಲದೆ ಶುದ್ಧ ದಶಮಿಯೊ । ಳಿದ್ದು ಏಕಾಂತದಲಿ ರಾತ್ರಿಯೊ । ಳೆದ್ದು ತ್ರೈಯಾಮದಲಿ ನಿರ । ವದ್ಯನನು ಸ್ಮರಿಸುತ್ತಲಿರುವದು ॥ ನರಹರಿ ನಾರಾಯಣ ॥ ೩೭ ॥ ಮರುದಿನ ಪ್ರಭಾತದೊಳು ಸ್ನಾನವ । ಕರಿಸಿ ತೀರ್ಥವ ಕೊಂಡು ಭಕ್ತಿ ಯೊ । ಳ್ನಿರಶನದಿ ದೇವಾಲಯದಿ ಜಾ । ಗರದಿ ಭಜಿಸುತ ಕಳದು ನಿಶಿ ಯನು ॥ ನರಹರಿ ನಾರಾಯಣ ॥ ೩೮ ॥ ಮಿಂದು ಇನನುದಯದಿ ಕ್ಷೀರಾ ಬ್ಧಿಯ । ಚಂದದಿಂದರ್ಚಿಸಿ ಪ್ರಸಾದದೊ । ಳೊಂದು ಭೋಜನದಿಂದ ನುತಿಸಿ

ಮು । ಕುಂದಗುತ್ಸಾಸವನು ವಿರಚಿಸು ॥ ನರಹರಿ ನಾರಾಯಣ ॥ ೩೯ ॥ ನೇಮದಿಂ ಪೂಜಿಸುತಲೈದನೆ । ಯಾಮದೊಳು ನಿದ್ರೆಯನು ಗೈವೀ । ಯಾಮ ಪದಿನಾಲ್ಕರ ವ್ರತದ ಮಹಿ । ಮಾವಳಿಯು ಸಾಯುಜ್ಯವೀವುದು ॥ ನರಹರಿ ನಾರಾಯಣ ॥ ೪೦ ॥ ಅನ್ನಪಾನ ಸುಗಂಧ ತಾಂಬುಲ । ಕನ್ನಡಿಯಲಂಕಾರ ಮೈಥುನ । ರನ್ನದುಪಭೋಗಗಳ ವ್ರತದೊಳು । ಮನ್ನಿಸುವನಿಗೆ ನರಕ ತಪ್ಪದು ॥ ನರಹರಿ ನಾರಾಯಣ ॥ ೪೧ ॥ ಶ್ರೀಯುಗುತ್ತಮಗತಿ ಸುಕೃತ ಪರ । ಮಾಯುಪ್ರಾಪ್ತಿಗುಪಾಯುವೆನೆ ಕೌಂ । ತೇಯನೀ ವ್ರತವಾಚರಿಸಿ ಜಗತೀ ವಲಯುದಿ ಪವಿತ್ರನಾದನು ॥ ನರಹರಿ ನಾರಾಯಣ ॥೪೨॥ ಆವನೀ ಮಹಿಮೆಯನು ಕೇಳುವ । ಸಾವಧಾನದಿ ವ್ರತವಗೈವನ । ಕಾವವಳಲಂಕೇಶನೆನುತಲಿ । ಭಾವಿಸುತ ಸ್ಮರಿಸಿರೊ ನಿರಂತರ ॥ ನರಹರಿ ನಾರಾಯಣ ॥ ೪೩ ॥ ನಿಗಮಚೋರನ ಮಡುಹಿ ಬೆನ್ನಿಲಿ । ನಗವನಾಂತವನಿಯನು ದಾಡೆಯೊ । ಳ್ನೆಗಹಿ ನರಮೃಗನಾಗಿ ಧರೆಯಳೆ । ದಘಹರಗೆ ಜಯಜಯತು ಮಂಗಲ ॥ ನರಹರಿ ನಾರಾಯಣ ॥ ೪೪ ॥ ಝುಡಿದು ಕ್ಷತ್ರಿಯರನು ದಶಾಸ್ಯನ । ಕೆಡಹಿ ಕಂಸನ ಬಡಿದು ತ್ರಿಪುರದ । ಮಡದಿಯರ ವ್ರತಗೆಡಿಸಿ ತುರಗವ । ನಡರಿದಗೆ ಜಯಜಯತು ಮಂಗಲ ॥ ೪೫ ॥ ಪ್ರಾಸುಗಣಮಾತ್ರಾರ್ಥವಿಸಮಗ । ಳೀಸು ತಿದ್ದುತ ಕ್ಷಮಿಸಿ ರಕ್ಷಿಸು । ದಾಸನನು ವಾಂಛಿತವನಿತ್ತು ಶ್ರೀ । ವಾಸುದೇವ ರಮೇಶ ಕರುಣದಿ ॥ ನರಹರಿ ನಾರಾಯಣ ॥ ೪೬ ॥ ಶ್ರೀಃ ॥

॥ ೧೦೨ ॥ ರಾಗ, ಮುಖಾರಿ [ಧಾಟಿ:- ಶ್ರೀಭುವನೇಂದ್ರ ದಯಾನಿಧಿ] ಏಕತಾಳ

ಶ್ರೀ ಪೊಳಲಂಕೇಶಾಯ ನಮಃ । ದುರಿತೌಘನಿವಾರಕ । ಶ್ರೀ ॥ ಪಲ್ಲ ॥ ಭಟ್ಟಕಳದಿ ಪೊರಟಲ್ಲಿಗೆ ಬಂದಿಹ । ಶ್ರೇಷ್ಠ ಗೌಡಸಾರಸ್ವತದ್ವಿಜಂಗ ॥ ಭೀಷ್ಟ ಪಾಲಿಸಲ್ ಗುರುಗಳೀಯಲು ಪ್ರ । ತಿಷ್ಠೆಯೊಂದಿರುವ ವಿಠ್ಠಲಮೂರುತಿ ॥ ॥ ಶ್ರೀ ಪೊಳ ॥ ೧ ॥ ಕಾಶಿಮಠಾಧಿಪ ವಿಜಯೀಂದ್ರರ ಸಹ । ವಾಸದಿ ಕ್ರೋಧನಗರದಿಂ ದಿನರ ॥ ಪೋಷಿಪ ತಪಕದಿ ಗಮಿಸೀ ಪುರದೊಳು । ವಾಸಿಸಿಹ ನರಮೃಗೇಶ ದಯಾರ್ಣವ । ಶ್ರೀ ಪೊಳ ॥ ೨ ॥ ಕಾರಕಳದಿ ತೊಡಗಲವಾಂತರ ಜನ । ವಾರ ಸಹಿತ ಬಿಜಯಂಗೈದಿಲ್ಲಿಯ ॥ ಊರವರನು ಪೊರೆಯಲು ನೆಲೆಗೊಂಡಿಹ । ವೀರ ವೇಂಕಟನಪಾರಸುಖಪ್ರದ ॥ ಶ್ರೀ ಪೊಳ ॥ ೩ ॥ ವಾರಣಾಸಿ ಸಂಯಮಿಗಳಿಗಂಗಾ । ತೀರದಿ ಸ್ನಾನಸಮಯ ಮೈದೋರುತ ॥

ಕಾರುಣ್ಯದೊಳಿಲ್ಲಿಯರ್ಪಿಸುತ್ತಿಹ । ಭೂರಿ ವಿಭವಪಡೆವ ಬಂಧುವಾಧವ ॥ ॥ ಶ್ರೀ ವ್ರೊಳ ॥ ೪ ॥ ಭಾಗೀರಥಿಯಿಂ ವೇಂಕಟಾದ್ರಿಯೆಡೆ । ಗ್ಹೋಗಿಹ ಕಾಲ ಭೈರವಂಗೀ ಸ್ಥಳ ॥ ದಾಗಮ ವೃದ್ಧಿಸಿ ಕಾಣಿಕೆಕೊಳುವವ್ರು । ದ್ಯೋಗವಿತ್ತು ಸೇವೆಯ ಕೈಕೊಳ್ಳುವ ॥ ಶ್ರೀ ವ್ರೊಳ ॥ ೫ ॥ ದ್ವಾರದಿ ಜಯವಿಜಯರುಗಳಾ ಗ್ನೇಯದಿ । ಮಾರುತಸುತ ನೈಋತ್ಯದಿ ವಿಘ್ನನಿ ॥ ವಾರಕ ವಾಯುವ್ಯದಿ ಲಕ್ಷ್ಮಿಯು ನಾ । ಗಾರೀಶಾನ್ಯದಿ ಒಲ್ಮೆಸುತ್ತಿಹ ॥ ಶ್ರೀ ವ್ರೊಳ ॥ ೬ ॥ ಛತ್ರ ಠಕ್ಕೆ ಚಾಮರಧ್ವಜ ತೋರಣ । ವೇತ್ರವ್ಯಜನವಿಚಿತ್ರಯಾನಗಳ್ ॥ ಮಿತ್ರ ಜ್ಯೋತಿ ದೀವಟಕೆ ಖಜಿನಿ ಬಿರು । ಸಿತ್ವಾದಿಗಳಿಂ ನಿತ್ಯದಿ ವಿಹರಿಪ ॥ ಶ್ರೀ ವ್ರೊಳ ॥ ೭ ॥ ವಾದ್ಯಭೇರಿ ಕಹಳೆ ನಗಾರಿಯು ಶಂ । ಖಧ್ವನಿ ಶ್ರುತಿಶಾಸ್ತ್ರ ಸಾಮಗಾನವ್ರು ॥ ಗದ್ಯವೇಣುವೀಣಾನರ್ತನದಿಂ । ಪದ್ಯಗೀತ ಶ್ರುತಿಗಳನಾ ಕರ್ಣಿಪ ॥ ಶ್ರೀ ವ್ರೊಳ ॥ ೮ ॥ ರಾಮನವಮಿ ದಿನ ಬ್ರಹ್ಮರಥೋತ್ಸವ । ಪ್ರೇಮದಿ ಮಾರ್ಗಶೀರ್ಷ ಪೌರ್ಣಮಿಯೊಳು ॥ ಭೂಮಿಗಧಿಕ ನೃಹರಿಯ ವರ್ಧಂತಿಯ । ನೇಮದಿ ಬಹು ನಿತ್ಯೋತ್ಸವ ಕೊಳ್ಳುವ ॥ ಶ್ರೀ ವ್ರೊಳ ॥ ೯ ॥ ದುಷ್ಕರ ಕಾರ್ಯಕೆ ಕೈಗೊಟ್ಟವ್ರೊಲೊಡ । ಬಟ್ಟಂತೋರುತ ಪ್ರೋತ್ಸಾಹಿಸಿ ಕಡೆ ॥ ಗೊಟ್ಟು ದೋಷಬಾಧಕದಿಂ ಗರ್ವವ । ಕುಟ್ಟಿ ಕಳೆವ ಶಿಷ್ಟರಿಷ್ಟಪ್ರದಾಯಕ ॥ ॥ ಶ್ರೀ ವ್ರೊಳ ॥ ೧೦ ॥ ಜಂಬುದ್ವೀಪದ ಭರತಖಂಡವೆಂ । ದೆಂಬೀ ಭಾರತ ವರ್ಷದಿ ಪ್ರವಹಿಪ ॥ ಶಾಂಭವಿತಟ ಮೂಲಿಕೆಯೊಳು ಶರಣರ । ಬೆಂಬಿಡದಿಹ ವಾಸುದೇವ ಮಾಧವ ॥ ಶ್ರೀ ವ್ರೊಳಲಂಕೇಶಾಯ ನಮಃ ॥ ೧೧ ॥ ಶ್ರೀಃ ॥

॥ ೧೦೩ ॥ ರಾಗ, ಹಿಂದುಸ್ಥಾನಿಭೈರವಿ [ಧಾಟಿ:- ಸರಸೀರುಹಾಂಬಕ ನಿನ್ನ] ಅಷ್ಟತಾಳ

ಕರುಣಿಸೆಮ್ಮನು ನರಹರಿಯೆ । ತವ । ಶರಣರ ಪೊರೆಯಲು ಮರೆವುದು ಸರಿಯೆ ॥ ಪಲ್ಲ ॥ ವರ ವೇದಶಾಸ್ತ್ರ ಪುರಾಣಗಳೊದರುವ । ಪರಿಮಾಜಿಸುವುದಚ್ಚರಿ ಜಗವರಿಯೆ ॥ ಕರುಣಿ ॥ ಅನುಪಲ್ಲ ॥ ಪರಮಪುರುಷನೆ ಸಜ್ಜನರು । ನಿನ್ನ । ಚರಣವ ಭಜಿಸುತ್ತಾಪದೆಯ ನೀಗುವರು ॥ ಪರತರ ಸುಖ ಪಡೆಯುವರು । ನೀ । ನ್ಹೊರತನ್ಯ ದೈವ ಜಗದೊಳಿಲ್ಲೆನ್ನುವರು ॥ ಪರಿಕಿಸಲೀಗವರಂಕೆಯಾಲಿಸಲು ಬೇ । ಸರವಾಂತಿರುವದು ಥರವೆಯೆಂದೆಂಬರು ॥ ಕರುಣಿ ॥ ೧ ॥ ನತರ ರಕ್ಷಿಸುತ್ತಲಸಿದೆಯೊ । ದೋಷ । ತತಿಯ ಸಂತತ ನಿವಾರಿಸಿ ಶ್ರಮಿಸಿದೆಯೊ ॥ ಪತಿತಪಾಲನವ ತೊರದೆಯೊ । ಕಾಲ ।

ಗತಿಸಿ ಶೌರ್ಯಕೆ ಶಿಥಿಲತೆ ಎಣಿಸಿದೆಯೊ ॥ ಸುತಿಪರ ಕಾರ್ಯದಹಿತರಿಗೊಲಿವ ಕಾಲೋ । ಚಿತವೊ ಸತುವುಡುಗಿಹುದೆಂದು ಒಗೆದೆಯೊ ॥ ಕರುಣಿ ॥ ೨ ॥ ಸಮಯದಂತೆಸಗಿಸಬಹುದೇ । ಜಗ । ದಮಿತಾಪವಾದಾಸ್ಪದವಾಗದಿಹುದೇ ॥ ಅಮಮ ಕಾಪಟ್ಯಕೊಪ್ಪುವುದೇ । ಭಕ್ತ । ಸಮುದಾಯದ ನಂಬಿಕೆಯು ನಿಲಲಹುದೇ ॥ ಸಮತೆಯ ತೊರವುತಕ್ರಮಕೆಳಸುವರೆ ಹೇ । ಕಮಲಾಂಬಕನೆ ಮಹಿಮೆಯು ಮರೆಯುವುದೇ ॥ ಕರುಣಿ ॥ ೩ ॥ ಲೋಕನಡತೆಗಳ ನೋಡಿ । ಮಾಡ । ಬೇಕಾದ ಕಾರ್ಯಕುಪೇಕ್ಷೆಯ ಮಾಡಿ ॥ ಕಾಕುಗೊಳಿಸುವದೀ ರೂಢಿ । ಸಾಕು । ಸಾಕು ಮಾಡಯ್ಯ ತಡೆಯದು ನಿನ್ನ ಮೋಡಿ ॥ ವ್ಯಾಕುಲವೆಲ್ಲ ಹೋಗಾಡಿಸಿ ಸುಖವೀಯೊ । ಶ್ರೀಕಾಂತನೆ ಪಾಲಿಸೆಮ್ಮ ಕೈನೀಡಿ ॥ ಕರುಣಿ ॥ ೪ ॥ ಅಲ್ಪಜನರ ಪರಿಯಲ್ಲ । ಫಣಿ । ತಲ್ಪನೆ ದಯದಿ ಪಾಲಿಪುದೆಮ್ಮ ಸೊಲ್ಲಾ । ಕಲ್ಪಾಂತವು ಬಂದುದಿಲ್ಲಾ । ಇನ್ನು । ಬಲ್ಪಿಂದ ಸಲಹೊ ನಂಬಿರುವರಿಗೆಲ್ಲಾ ॥ ನೋಳ್ಪುದೇನೈ ವಾಸುದೇವ ರಮೇಶ ನಿ । ನ್ನೊಳ್ಪಾರ್ಥಿಪೆ ವ್ಯವಧಾನವು ಸಲ್ಲಾ ॥ ಕರುಣಿ ॥ ೫ ॥ ಶ್ರೀ ॥

॥ ೧೦೪ ॥ ರಾಗ, ಕುರುಂಜಿ [ಧಾಟಿ:- ಭಜನೆಯ ಮಾಡಬಾರದೆ । ಶ್ರೀಹರಿ ।] ಆದಿತಾಳ

ವರ್ಣಿಸಲೆನ್ನಳವೆ । ಸಂಪೂರ್ಣನ । ವರ್ಣಿಸಲೆನ್ನಳವೆ ॥ ಪಲ್ಲ ॥ ವರ್ಣಿಸಲಳವೆ ಕ್ಷೀ । ರಾರ್ಣವದೊಳು ವಟ । ಪರ್ಣಶಾಯಿ ನೀಲ । ವರ್ಣನ ಚರಿತವ ॥ ವರ್ಣಿಸ ॥ ೧ ॥ ಕಲ್ಮಷಚಿತ್ತವ । ನೊಲ್ಮೆಯಿಂ ತಿದ್ದುವ । ಬಲ್ಮೆಯ ತಾಳ್ದಿಹ । ನಾಲ್ಮೊಗನಯ್ಯನ ॥ ವರ್ಣಿಸ ॥ ೨ ॥ ವಾಸುದೇವ ಲ । ಕ್ಷ್ಮೀಶನೆ ಅನುದಿನ । ಕ್ಲೇಶ ಬಿಡಿಸಿ ಮನ । ದಾಶೆ ಸಲಿಸು ಹರಿ ॥ ॥ ವರ್ಣಿಸ ॥ ೩ ॥ ಶ್ರೀ ॥

॥ ೧೦೫ ॥ ರಾಗ, ಕಾಂಬೋಧಿ [ಧಾಟಿ:- ದೂರದಿರು ಹರಿ ಮಾನ ರಂಗಾ] ತ್ರಿಪುಟತಾಳ

ತಾಳಲೆಂತೈ ಹರಿಯೆ । ಭವಬಾಧೆ ॥ ರಮಾಕಾಂತ ಅನಂತ ಗುಣವಂತ ರಕ್ಷಿಸು ॥ ತಾಳಲೆಂತೈ ಹರಿಯೆ । ಭವಬಾಧೆ ॥ ಪಲ್ಲ ॥ ವರ ಘೋರದುರಿತ ಪಾರಾವಾರಾ । ದಯಸಾರಾ ಉದಾರಾ ಎನ್ನ ಪಾರಗಾಣಿಸು ॥ ತಾಳಲೆಂತೈ ॥ ॥ ೧ ॥ ಕಾಪಟ್ಯರೈ ನೀನೊಲಿದಿಹಪರರು । ಕೃಪೆದೋರೈ ನೀ ಬಾರೈ ನಿನ್ನೊಳ್ ಸೇರೈಸಿ ಮನ ॥ ತಾಳಲೆಂತೈ ॥ ೨ ॥ ವಾಸುದೇವ ರಮೇಶ ದೀನಬಂಧು । ಜಗಜ್ಜೀವ ಕೇಶವ ಎನ್ನ ಕಾವ ಪಾಲಿಸು ॥ ತಾಳಲೆಂತೈ ॥ ೩ ॥ ಶ್ರೀ ॥

॥ ೧೦೭ ॥ ರಾಗ, ಸೌರಾಷ್ಟ್ರ [ಧಾಟಿ:- ಕೆಂಪುಮೂಗಿನ ಪಕ್ಷಿ] ಅಷ್ಟತಾಳ

ಬಪ್ಪ ಶುಭಾಶುಭ । ತಪ್ಪದಾದರೆ ನಿನ್ನಿಂ । ದಪ್ಪುದೇನಪ್ಪ ಹರಿ ॥ ಬಂದಾಪತ್ತನೀಗುತ್ತಾ।ನಂದ ಪ್ರಾಪ್ತಿಸಲು ಗೋ । ವಿಂದ ನಿನ್ನ ಸೇವ್ಯರ್ಗದು ॥ ೧ ॥ ಮುದ್ದಿನ ವರ ಲಿಪಿ । ತಿದ್ದಿ ಕ್ಯಾದುದರಿಂದ । ಹೊದ್ದಿ ನಾನಿದ್ದೇ ನಿನ್ನಾ ॥ ಕೈಯ್ಯ ಮುಗಿವೆ ಜಗ । ದಯ್ಯ ದಮ್ಮಯ್ಯ ಪಾಲಿ । ಸಯ್ಯ ನೀ ಸೈಯೆನಿಸಿ ॥ ॥ ೨ ॥ ಪ್ರಾರಬ್ಧಫಲ ವಿೂರ । ಬಾರದೆಂಬರಿವಿಂ । ದೂರ ನೀ ತಪ್ಪಿಸುವೆ ॥ ವಾಸುದೇವ ರಮೇಶ । ದೋಷ ಕ್ಷಮಿಸಿ ತವ । ದಾಸನ ರಕ್ಷಿಸಯ್ಯ ॥ ೩ ॥

॥ ೧೦೭ ॥ ರಾಗ, ಪೂರ್ವಿ [ಧಾಟಿ:- ಯಾದವೇಂದ್ರ ಪಾಲಿಸಯ್ಯ] ರೂಪಕತಾಳ

ಇಂಥಾ ಸುಖವಾಂತುವಂತೆ । ಸಂತತ ಪಾಲಿಸು ಹರಿ ॥ ಚಿಂತೆಯ ತೊರೆದು ರಮಾ । ಕಾಂತನಡಿ ಧ್ಯಾನಿಸುವ ॥ ಪಲ್ಲ ॥ ಮುಂಚಿನಿಹ ಸಂಚಿತದಿ । ಹೊಂಚಿದ ಪ್ರಸಂಚದೊಳು ॥ ಪಂಚಬಾಣನೈಯ್ಯನನು । ವಂಚಿಸದೆ ಧ್ಯಾನಿಸುವ ॥ ೧ ॥ ಯುಕ್ತವಹ ವಿಷಯ ವಿ । ರಕ್ತಿಯಿಂದ ಹೃದಯದಿ ॥ ಮುಕ್ತಿದಾಯಕನ ಪದ । ಭಕ್ತಿಯಿಂದ ಭಜಿಸುವ ॥ ೨ ॥ ಪಾವನದ ಠಾವನೀವ । ಭಾವಜಜನಕ ವಾಸು ॥ ದೇವ ರಮಾಧವನಡಿ । ದಾವರೆಗೆ ನಮಿಸುವ ॥ ೩ ॥ ಶ್ರೀಃ ॥

॥ ೧೦೮ ॥ ರಾಗ, ಕೇತಾರಗೌಳ [ಧಾಟಿ:- ಜಯ ಜಯ ಜಗತ್ಪ್ರಾಣ] ರೂಪಕತಾಳ

ಸಾಕು ಸಾಕು ನರಹರಿಯೆ ನಿ । ರಾಕರಿಸದೆ ನಮ್ಮನೆ । ಯಾಕುದಾಶಿಸುವೆ ಕರುಣಾದಿ । ನೀ ಕಾಯದೆ ಸುಮ್ಮನೆ ॥ ಪಲ್ಲ ॥ ಸದ್ಯದಿ ಪಾಪಾಂಬುಧಿಯೊಳು । ಬಿದ್ದವೈಯಜ್ಞಾನಪು ॥ ತ್ವದ್ಧ್ಯಾನದ ಬುದ್ಧಿಲಿ ತಡ । ಹೊದ್ದಿದೆವು ಸುಮ್ಮಾನದಿ ॥ ೧ ॥ ಅಲ್ಪಮತಿಯೊಳಿಹ ಠಕ್ಕಿನ । ಕಲ್ಪನೆ ತಡೆಗೈವುದು ॥ ಬಲ್ಪಿಂದ ನಿವಾರಿಸಿ ಘಣಿ । ತಲ್ಪನೆ ಕೈಗ್ಯಾವುದು ॥ ೨ ॥ ಸಮಯದಂತೆ ನಡಸುವ ತವ । ಕ್ರಮವಿದೇನಾಶ್ಚರ್ಯವು ॥ ಮಮತೆಯಿಂ ನತರ ಪೊರವುದ । ರಮೆಯರಸನ ಕಾರ್ಯವೈ ॥ ೩ ॥ ದಾತನೀರ್ದು ಭಜಕರ ಮನ । ಕಾತರಿಪುದು ನೀತಿಯೋ ॥ ಹೇ ತಾರ್ಕ್ಷ್ಯಧ್ವಜ ನಮ್ಮನು । ಚೇತರಿಪುದರೀತಿಯೆ ॥ ೪ ॥ ಲಕ್ಷದೋಷವ ಕ್ಷಮಿಸುತು । ಪೇಕ್ಷಿಸದೇ ಸಾಮಿಾ ॥ ರಕ್ಷಿಸೈ ಶ್ರೀವಾಸುದೇವ । ಲಕ್ಷ್ಮಿಯರಸ ಪ್ರೇಮದಿ ॥ ೫ ॥ ಶ್ರೀಃ ॥

॥ ೧೦೯ ॥ ರಾಗ, ರೇಗುಪ್ತಿ [ಧಾಟಿ:- ಚಿಕ್ಕವನೇ ಇವನು । ನಮ್ಮ] ಅಷ್ಟತಾಳ

ಮಂದರಧರನ ನೋಡಿ । ಯಶೋದೆಯ । ಕಂದ ಕೃಷ್ಣನ ಕೊಂಡಾಡಿ ॥ ಹಿಂದೆ ದೇವಕಿರುಗ್ಮಿಣಿಯರರ್ಥಿಗೋಸುಗ । ಚಂದದಿಂದ ಬಾಲರಂದವ ತಾಳ್ದಿಹ ॥ ಮಂದರ ॥ ಅನುಪಲ್ಲ ॥ ಹಡಗನೇರುತಲಿ ಬಂದಾ । ಕಾರುಣ್ಯದಿಂ । ದುಡುಪಿ ಪಟ್ಟಣದಿ ನಿಂದಾ ॥ ಪಡಭಾಂಡದೊಳು ಬಲಗಿಡಿಸಿ ರಜತಪೀಠೆ । ಯಡರಿ ಮೆರೆವುತಿಪ್ಪ ಕಡಗೋಲ ಪಿಡಿದಿಹ ॥ ಮಂದರ ॥ ೧ ॥ ಆನಂದತೀರ್ಥರಿಂದ । ಸ್ಥಾಪಿತವಾಗಿ । ತಾ ನೆಲಸಿಹ ಗೋವಿಂದಾ ॥ ಪ್ರಾಣದೇವನ ಸ್ವಾತಂತ್ರ್ಯಾನುಸಾರ ಜನ । ಶ್ರೇಣಿಯ ಸಲಹುವ ವೇಣುನಾದಪ್ರಿಯ ॥ ಮಂದರ ॥ ೨ ॥ ಅಷ್ಟಮಠಾಧಿಪರಾ । ಅರ್ಚನೆಗೆ ಸಂ। ತುಷ್ಟನಾಗುತಲವರಾ ॥ ದೃಷ್ಟಿಪಾವನವಾಗಿ ಕಷ್ಟಬಿಡಿಸುವಂಥಾ । ಸೃಷ್ಟಿಗೊಡೆಯ ಪರಮೇಷ್ಠಿ ಜನಕನಾದ ॥ ಮಂದರ ॥ ೩ ॥ ನಿತ್ಯನಿಗಮಸಾರದಿ । ಕೈಕೊಳುವನೊಂ । ಭತ್ತು ಪೂಜೆಯ ಪ್ರೇಮದಿ ॥ ಅತ್ಯಾತುರದಿ ಪದವುತ್ತುವ ಸುಜನರ । ವೊತ್ತದಿಷ್ಟಾರ್ಥವನಿತ್ತು ತಾ ಪೊರೆಯುವ ॥ ಮಂದರ॥ ೪ ॥ ರವಿಯು ಮಕರ ಸಾರುವಾ । ದಿನದೊಳು ವಾ। ಧವನು ರಥವನೇರುವಾ ॥ ವಿವಿಧ ವೈಭವ ಜನನಿವಹದೊಡನೆ ಭೇರಿ । ರವ ವಾದ್ಯಘೋಷದಿ ಭವನ ಸುತ್ತಲು ಬಾಹ ॥ ಮಂದರ ॥ ೫ ॥ ನೆರೆ ದ್ವಯವತ್ಸರದಿ । ಪೂಜಕರನ್ನು । ಪರಿಯಾಯದಾ ಕ್ರಮದಿ ॥ ಇರಿಸಲ್ಕೆಸವ ಬಹುತರದ ಮಹೋತ್ಸವ। ನೆರವೇರಿಸುವ ಜಗದ್ಭರಿತ ಮಹಿಮೆಯುಳ್ಳ ॥ ಮಂದರ ॥ ೬ ॥ ಸಾಸಿರಸಂಖ್ಯೆಯಲಿ । ನೆರವ ದ್ವಿಜ । ರಾಶಿ ಮೃಷ್ಟಾನ್ನದಲೀ ॥ ತೋಷಿಸಿ ಪ್ರತಿದಿನ ಪೋಷಣೆಯನು ಗೈವ । ವಾಸುದೇವ ಕ್ಲೇಶನಾಶಮುಂಬಿರೇಶ ॥ ಮಂದರ ॥ ೭ ॥

॥ ೧೧೦ ॥ ರಾಗ, [ಧಾಟಿ:- ಶ್ರೀಮೋಹನ್ನಾ ! ರಕ್ಷೀಸನ್ನಾ] ತಾಳ

ಶ್ರೀಶಾ ಸರ್ವೇಶಾ। ನಮಿಪೆ ಜಗದೀಶಾ ॥ ಪಲ್ಲ ॥ ಸತತ ನಿನ್ನಯ ಪದ। ನುತಿಸುವ ಶರಣಗೀ । ವ್ಯಥೆಯನೀಯುವದೊಳಿತಲ್ಲಲ್ಲಲ್ಲಲ್ಲ ॥ ೧ ॥ ಯೇಸು ಜನ್ಮದಿ ಭಾಗ್ಯ । ದಾಸೆ ಗೈವವಂಗೆ । ಲೇಸ ಪಾಲಿಪ ದೇವ ಸೈ ಸೈ ಸೈ ಸೈ ॥ ॥ ೨ ॥ ಶರಣನಪರಾಧವ । ಮರೆಯೊ ಶ್ರೀರಮಾಧವ । ಕರುಣದಿಂದಭಯವ ತಾ ತಾ ತಾ ತಾ ॥ ೩ ॥ ಶ್ರೀಶ ॥

॥ ೧೧೧ ॥ ರಾಗ [ಧಾಟಿ:- ಭಜ ಭಜ ಘನ ಜಲಧಿ ಮಾರ್ಗು] ತಾಳ

ಮಂಗಲಂ ರಥಾಂಗಪಾಣಿ ಶಾರ್ಙ್ಗಧರನಿಗೇ । ಜಯ ಮಂಗಲಂ ॥ ॥ ಪಲ್ಲ ॥ ಶಿವಕರ ಶಿವಪ್ರಿಯ ಶಿವಧರ ಶಿವಜಾಕ್ಷನಿಗೆ । ಸದಾಶಿವದಾಯಕ ಶಿವಭಂಜನ ಶಿವರಕ್ಷನಿಗೆ ॥ ಜಯ ಮಂಗಲಂ ॥ ೧ ॥ ಇಂದಿರೇಶ ಸುಂದರಾಸ್ಯ ನಂದಕಂದಗೆ । ಸದಾನಂದ ಸಿಂಧುಬಂಧನ ಭವಬಂಧಮೋಕ್ಷಗೆ ॥ ಜಯ ಮಂಗಲಂ ॥ ೨ ॥ ಶ್ರುತಿತತಿನುತ ರತಿಪತಿಪಿತನತಿಮತಿಯುತಗೆ । ನತಾಶ್ರಿತ ಶತಕ್ರತುಸುತ ಹಿತಕ್ಷಿತಿಧೃತ ಸುಚರಿತಗೆ ॥ ಜಯ ಮಂಗಲಂ ॥ ॥ ೩ ॥ ತುಂಗಬಲ ವಿಹಂಗರೂಢ ಸಂಗರಹಿತಗೆ । ವರ ಭುಜಂಗಶಯನ ಗಂಗೆಯ ಪಡೆದಂಗಜಪಿತಗೇ ॥ ಜಯ ಮಂಗಲಂ ॥ ೪ ॥ ಪ್ರಾಸುವಿಪಮುಗಳ ಕ್ಷಮಿಸುವ ಭಾಸುರಾಂಘ್ರಿಗೆ । ಹೃದ್ವಾಸ ವಾಸುದೇವ ಶ್ರೀರಮೇಶ ನೃಹರಿಗೇ ॥ ಜಯ ಮಂಗಲಂ ॥ ೫ ॥ ಶ್ರೀ ॥

## ಬಂಗ್ಲೆ ನಾರಾಯಣಕಾಮತ್ ಕೃತ ಪದಗಳು.

॥ ೧೧೨ ॥ ರಾಗ, ಮುಖಾರಿ [ಧಾಟಿ:- ಕಲಿಯುಗದ ಮಹಿಮೆಯ] ಝಂಪೆತಾಳ

ಕಂಡುದನು ಪೇಳ್ವೆ ಬ್ರಹ್ಮಾಂಡನಾಯಕನೆ । ಕೊಂಡೆಯವಿದಲ್ಲ ಗ್ರಹಕುಂಡಲವ ಶೋಧಿಸುತ ॥ ಪಲ್ಲ ॥ ಜಲಜಾಕ್ಷ ನಿನ್ನ ನಾಮಕೆ ಶ್ರವಣ ತಾರೆ ಕೇ । ಮೇ॰ ಮಕರಲಗ್ನ ರಾಶಿಯು ಮಕರವು ॥ ಸಲೆ ಲಗ್ನದಲ್ಲೀರ್ಪ ಜಲತಾರಕೇಂದುದಶೆ । ಯಲಿ ನಿನಗೆ ಜಲದೊಳಾವಾಸವಾಯಿತು ಹರಿಯೇ ॥ ॥ ೧ ॥ ಮನುಮಥನ ತಾತ ಕೇಳಿನಸುತನು ನಾಲ್ಕನೆಯ । ಮನೆಯೊಳಿರುವನು ಲಗ್ನಕಧಿಪನೆನಿಸಿ ॥ ಮನದಿ ಯೋಚಿಸಲಿಕಾ ಶನಿದೆಸೆಯೊಳಾ ಕುಧರ । ವನು ಪೊತ್ತು ದಣಿದೆ ನೀ ವನಧಿಯೊಳು ಹರಿಯೇ ॥ ೨ ॥ ಮಂಗಳನೆ ಸುಖಕಧಿಪ ಮಂಗಳನು ಸಿಂಗರದಿ । ಸಿಂಗರಾಶಿಯೊಳು ತಾ ಕಂಗೊಳಿಸುತಾ ॥ ತುಂಗವಿಕ್ರಮನವನೆ ಸಂಘಟಿಸಿದನು ವನದಿ । ಹಿಂಗದಲೆ ಬೇರು ಮೆಲುವಂಗವನು ಹರಿಯೇ ॥ ೩ ॥ ವಾರಿಜಾಸನಪಿತನೆ ಕ್ರೂರಕ್ಷೇತ್ರದಿ ರಾಹು । ಸಾರೀರ್ಪ ರಾಶಿ ವೃಶ್ಚಿಕವೆಣಿಸಲು ॥ ಕಾರುಣಿಕನವನ ದೆಸೆಯಾರಂಭದಲಿ ನಿನಗೆ । ಘೋರರೂಪವ ತಾಳಲ್ಮಾತು ನರಹರಿಯೇ ॥ ೪ ॥ ಮಂದರೋದ್ಧರ ಕೇಳು

ಚಂದಿರನ ರಾಶಿಗಾ । ನಂದದಧಿಪತಿ ಸೂರ್ಯನಂದನನು ತಾ ॥ ನಿಂದು ಮೇಷದೊಳತ್ರಿಕಂದನ ನಿರೀಕ್ಷಿಸಲು । ಬಂದುದೈ ಭಿಕ್ಷೆಯುಪರಿಂದ ನಿನಗೆಲೆ ಹರಿಯೇ ॥ ೫ ॥ ಅಂಬುಜಾಸನ ಕೇಳು ಒಂಭತ್ತರಧಿಪ ಶಶಿ । ಸಂಭವನು ಪಾಪದಿಂ ತುಂಬಿರ್ಪನೂ ॥ ಸಂಭವಿಸಲವನ ದೆಸೆಯಿಂದ ನೀ ಕ್ಷತ್ರಿಯಕ । ದಂಬ ಮರ್ದಿಸಿ ಧರ್ಮವುಂ ಬಿಟ್ಟೆ ಹರಿಯೇ ॥ ೬ ॥ ಸಿರಿಯರಸ ಕೇಳಿನ್ನು ದುರಿತಸ್ಥಾನಾಧಪತಿ । ಗುರುವೇಳನೆಯ ಮನೆಯೊಳಿರುವನದರಿಂ ॥ ಹಿರಿಯರುಪದೇಶವಿಂದಿರದೆ ಭಾರ್ಯೆಯನಗಲಿ । ಚರಿಸಿದೆಯರಣ್ಯದೊಳಗಿರುತ ನೀ ಹರಿಯೇ ॥ ೭ ॥ ಘೋರ ಪಾಪವಿನಾಶ ನಾರಿರಾಶಿಯ ನವಮ । ಕಾರವಿಯು ಸಾರಿ ನಿಂದಿರ್ಪನದರಿಂ ॥ ಜೋರ ವ್ಯಾಪಾರ ಪರನಾರಿಯರ ಕೂಡೆ ವ್ಯಭಿ । ಚಾರ ನಿನಗಾಯಿತು ರಮಾರಮಣ ಹರಿಯೇ ॥ ೮ ॥ ಜಾತ ಮೃತಿರಹಿತ ತವ ಜಾತಕವಿ ತೋರುತಿಹ । ಕೇತು ಕೈವಲ್ಯ ತಾರಕನಾಥನೂ । ಪೂತಬುದ್ಧಿಸ್ಥಾನವಾದನದರಿಂದಲಿಂ । ಭೂತಲದಿ ಸ್ಥಾಪಿಸಿದೆ ನೂತನ ಮತವ ಹರಿಯೇ ॥ ೯ ॥ ಪಾರವರ್ಜಿತ ಕವಿಯು ಸಾರಿರ್ಪ ದಶಮದೊಳ । ಗಾರವನಿಗಣೆಯುಂಟು ಧೀರನೆನಿಸೀ ॥ ಭೂರಿ ಮ್ಲೇಂಛರನು ಸಂಹಾರಗೈಯ್ಯುತ ತೇಜಿ । ಯೇರಿ ಮೆರೆಯುತ್ತಿರುವ ನಾರಾಯಣ ಹರಿಯೇ ॥ ೧೦ ॥ ಶ್ರೀಃ ॥

॥ ೧೧೩ ॥ ರಾಗ [ಧಾಟಿ:– ಹೇಳಲದೇಂ ಲೀಲೆಯು] ತಾಳ

ನರಹರಿಯಾ ನೋಡಿರೈ ॥ ಪ. ॥ ಸರಸಿಜನಾಭನ । ನಿರುಕಿಸಲೀಕ್ಷಣ ಮನದಣಿಯಾ ನೋಡಿರೈ ॥ ಮನವೊರೆಯಾ ಬೇಡಿರೈ ॥ ಅನುಪ. ॥ ತರಳ ಪ್ರಹ್ಲಾದನ ಮೊರೆಯನು ಕೇಳಿ । ಭರದಿಂ ನರಮೃಗ ರೂಪವ ತಾಳಿ ॥ ದುರುಳ ಹಿರಣ್ಯಕಶ್ಯಪನನು ಸೀಳಿದ । ಹರಿಯಾ ನೋಡಿರೈ ॥ ೧ ॥ ಭವಪಿತ ಭವನುತ ಭವತಾಪರಹಿತ । ಭವನಾಮಾಂಕಿತ ಭವಭವವಂದಿತ ॥ ನವ ಮನ್ಮಥಶತ ಧೃತಮೃತನೊಳು । ಮಿತಶಿರಿಯಾ ಬೇಡಿರೈ ॥ ೨ ॥ ಸುರನರ ಕಿನ್ನರನುತ ವಿಶ್ವಂಭರ । ಮಾರಹರವಂದಿತ ವಳಲಂಕಾಪುರ ॥ ವರ ಶ್ರೀಕರ ನಾರಾಯಣ ನರ । ಕೇಸರಿಯ ನೋಡಿರೈ ॥ ೩ ॥ ಶ್ರೀಃ ॥

॥ ೧೧೪ ॥ ರಾಗ, ಹಿಂದುಸ್ಥಾನಿಭೈರವಿ [ಧಾಟಿ:– ಸರಸೀರುಹಾಂಬಕಿ ನಿನ್ನ ।] ಅಷ್ಟತಾಳ

ಪೊರೆಯುವದೆಮ್ಮನು । ನರಹರಿ ನೀನು ॥ ಸ್ಮರಿಪೆವು ತವ ಪದ । ಸರಸಿಜಗಳನು ॥ ೧ ॥ ತರಳ ಪ್ರಹ್ಲಾದನು । ಮೊರೆಯಿಟ್ಟು ತಾನು । ಕರೆಯ

ಲಾಕ್ಷಣ ಬಂದೆ । ತ್ವರಿತದಿ ನೀನು ॥ ೨ ॥ ದುರುಳ ಹಿರಣ್ಯಾಕ್ಷ । ಸುರವಸು ಸೀಳಿ । ಸುರರನ್ನು ಸಲಹಿದೇ । ಕರುಣವ ತಾಳಿ ॥ ೩ ॥ ಮಿತ್ರಮಂಡಳಿ ಶತಪತ್ರಕೆ ನೀನು । ಮಿತ್ರನಂತೆಸಗುವಿ ಮಿತ್ರತೆಯನ್ನು ॥ ೪ ॥ ಕಾರುಣ್ಯಾ ಮೃತ ವಾರಿಧಿಮೂರ್ತೆ । ನಾರಾಯಣ ಅವತಾರ ಸತ್ಕೀರ್ತೆ ॥ ೫ ॥ ಶ್ರೀ ॥

॥ ೧೧೫ ॥ ರಾಗ [ಧಾಟಿ:- ] ತಾಳ

ಪಾಲಿಸು ಕರುಣದಿ ಲಾಲಿಸಿ ನುಡಿಯಾ । ಮಾಲೋಲನೆ ನಂಬಿದೆ ನಿನ್ನಡಿಯಾ ॥ ಪಲ್ಲ ॥ ಆದಿಪುರುಷ ಕೇಶವ ನಾರಾಯಣ । ಮಾಧವ ಶ್ರೀ ಗೋವಿಂದ ವಿಷ್ಣು ಮಧು ॥ ಸೂದನ ತ್ರೈವಿಕ್ರಮ ವಾಮನ ಘನ । ಶ್ರೀಧರ ಹೃಷಿಕೇಶನೆಯೆನಗಸುದಿನ ॥ ೧ ॥ ಪದುಮನಾಭ ದಾಮೋದರ ದೇವಾ । ಬುದನುತ ಸಂಕರ್ಷಣ ವಾಸುದೇವಾ ॥ ಉದಧಿಶಯನ ಪ್ರದ್ಯುಮ್ನನನಿರುದ್ಧ। ಪದುಮಜಪಿತ ಪುರುಷೋತ್ತಮ ತವ ಪದ ॥ ೨ ॥ ಧೀರಾಧೋಕ್ಷಜ ನಾರ ಸಿಂಹ ಗಂ । ಭೀರಚ್ಯುತ ಸುಜನಾರ್ದನ ವರಶ್ರೃಂ ॥ ಗಾರ ಉಪೇಂದ್ರ ಹರೀ ಶ್ರೀಕೃಷ್ಣಾ । ಪಾರಾವಾರ ವಿಹಾರ ನಾರಾಯಣ ॥ ೩ ॥ ಶ್ರೀ ॥

॥ ೧೧೬ ॥ ರಾಗ [ಧಾಟಿ:- ] ತಾಳ

ಕ್ಷೀರಸಾಗರಶಯನಾ । ವಾರಿಜದಳನಯನಾ ॥ ಹರಕೇಯೂರಾಭರಣಾ । ಶ್ರೀರಮಾನಾರಾಯಣಾ ॥ ಪಲ್ಲ ॥ ಸಗುಣಚರಿತಾ । ಜಗದ್ಭರಿತಾ । ಖಗಸಂಚರಿತಾ । ಅಘಸಂಹರಿತಾ ॥ ೧ ॥ ಬಾಲನಾ ತಪಸಿನಾ । ಜ್ವಾಲೆಯು ಅತಿಘನಾ ॥ ಊಳಿಗವಿದ ನೀ । ನಾಲಿಸು ಸುಮನಾ ॥ ೨ ॥ ಭಂಗಿಸಲ್ಪೋ ದೆವು । ಕಂಗೆಡುತ ಬಂದೆವು । ಹಿಂಗದ ವಸಂತ । ರಂಗದ ದೃಢವು ॥ ೩ ॥ ಆರೊಳು ನೂರ್ವೆವು । ಆರೊಳು ಸಾರ್ವೆವು । ತೋರು ಕರುಣ । ಸುರ ವಾರಕೀದಿನಾ ॥ ೪ ॥ ಬಾಲನು ಬಾಳಿದಾ । ಉರೆ ರೂಪ ತಾಳಿದಾ। ದುರುಳ ಹಿರಣ್ಯಕ । ಸುರವಸು ಸೀಳಿದ ॥ ೫ ॥ ಬಲಿರಾಜನ ಬಾಗಿಲ । ನೆಲೆಗೈದು ನೇಗಿಲ । ಛಲದಿ ಪಿಡಿದು ನೆಲ । ಕಳುಹಿ ದಶಗಳ ॥ ೬ ॥ ಸುರುಚಿರ ಪೀತಾಂ ಬರ । ಧರ ವರದಿಗಂಬರ । ತುರಗವನೇರಿದ । ವರ ಮೂಲಿಕೆ ವರ ॥ ೭ ॥

॥ ೧೧೭ ॥ ರಾಗ [ಧಾಟಿ:- ಶ್ರೀಶ ಪದ್ಮನಾಭ ಪ್ರಾಣೇಶ ಪಾಲಿಸೊ] ತಾಳ

ಶ್ರೀಶ ಸುರಾಧೀಶ ನರಮೃಗೇಶ ಪಾಹಿಮಾಂ ॥ ಜಯ ಜಯ ॥ಪಲ್ಲ॥ ವೇದವೇದ್ಯನೇ। ನಿಖಿಲ ಭೇದಭೇದ್ಯನೇ । ಆದಿಮೂರ್ತಿ ಪುಣ್ಯಕೀರ್ತಿ ಮೋದ

ದಾತನೆ ॥ ೧ ॥ ಶಂಕರಪ್ರಿಯಾ । ನಿಶ್ಶಂಕಚಿನ್ಮಯಾ ॥ ಪಂಕಜಾಕ್ಷ ಪಾಪ ರಹಿತ । ಕಿಂಕರಾಭಯಾ ॥ ೨ ॥ ರಾಕ್ಷಸಾರಿಯು ನೀ । ಸಾಕ್ಷಕಾರಿಯೇ ॥ ತಕ್ಷಕಾರಿವಾಹ ವಿಬುಧ । ಪಕ್ಷ ರಕ್ಷಿಸೈ ॥ ೩ ॥ ಶಾಂತನಾಗೆಲೊ । ಲಕ್ಷ್ಮೀ ಕಾಂತನೀಗೆಲೋ ॥ ಶಾಂತ ಮುಷ್ಪವದೆಂದು ಕ್ರೋಧಕ್ರಾಂವ್ಯಾಕೆಲೋ ॥ ॥ ೪ ॥ ತಾಳಲಾರೆನೈ । ತಾಪ ಕೇಳಲಾರೆನೈ ॥ ಮೂಲಿಕಾಂಗಲೋಲ ಜೀವ । ಶೌರಿ ಪಾಲಿಸೈ ॥ ೫ ॥ ನಾರಾಯಣಾ । ಉಗ್ರರುನೀಕ್ಷಣಾ ॥ ತೋರು ಶಾಂತವನ್ನು ಭಕ್ತೋದ್ಧಾರ ಗುಣಗಣಾ ॥ ೬ ॥ ಶ್ರೀ ॥

॥ ೧೧೮ ॥ ರಾಗ, ಭೀಮ [ಧಾಟಿ:- ಬುಧಶೃಂಗನನೇ] ತಾಳ

ದೀನೋದ್ಧಾರೀ । ನೃಹರೀ । ಜೀನೋದ್ಧಾರೀ ॥ ಪಲ್ಲ ॥ ಮಂದರಧರ ಪೂರ್ಣೇಂದುವದನ ಸುರವೃಂದವಂದ್ಯ ನರನಾಟಕಧಾರೀ ॥ ೧ ॥ ವೇದ ವಿನುತ ಸನ್ಮೋದದಾತ ಬಿಂ । ಬಾಧರ ವರ ದೈತ್ಯಾಸ್ಯಯುವೈರಿ ॥ ೨ ॥ ಘೋರ ಕಲುಷಸಂಹಾರಕ ವರ ಶ್ರೀ । ನಾರಾಯಣ ಸುವಿಚಾರ ವಿಚಾರೀ ॥ ॥ ೩ ॥ ಶ್ರೀ ॥

॥ ೧೧೯ ॥ ರಾಗ, ಕಲ್ಯಾಣಿ [ಧಾಟಿ:- ಸ್ಮರಣೆ ಒಂದೇ ಸಾಲದೇ। ಗೋವಿಂದನ] ಅಷ್ಟತಾಳ

ದಕ್ಷಸುತಾತನಯಾ । ಶ್ರೀಗಣಾ । ಧ್ಯಕ್ಷ ಸ್ವಪಕ್ಷನಯಾ ॥ ಪಲ್ಲ ॥ ರಕ್ಷರಕ್ಷವೈರಿ ಕ್ಷಯಾಕ್ಷಯಾ । ಇಕ್ಷುದಂಡ ತಿಲಭಕ್ಷಣಪ್ರಿಯ ॥ ಅ. ಪ. ॥ ಮೂಷಿಕವರಯಾನಾ । ಕರಧೃತ । ಪಾಶಾಂಕುಶ ನಾನಾ ॥ ಕ್ಲೇಶವರ್ಜಿತ ಗಿರೀಶಪ್ರಿಯಸುತ । ಶೇಷವಿಭೂಷಿತ ದೋಷವಿರಹಿತ ॥ ೧ ॥ ಸಿದ್ಧಿವಿನಾ ಯಕನೆ । ವಿದ್ಯಾ । ಬುದ್ಧಿಪ್ರದಾಯಕನೆ ॥ ಮುದ್ದು ಗಣೇಶನೆ ಸದ್ಯಕೆ ಯನ್ನೊಡ । ನಿದ್ದು ಸಲಹೊ ಸುರಸಿದ್ಧಸೇವ್ಯನೆ ॥ ೨ ॥ ಕುವಲಯ ಸನ್ಮಿ ತ್ರಾ । ವಂಶೋ । ದ್ಭವನವ ಸುಚರಿತ್ರಾ । ಭುವನಾಧಿಪನುತ್ತಾನಪಾದ ತನುಭ । ಧ್ರುವ ಚರಿತೆಯ ವಿವರಿಪೊಲಿಸಗ್ಯೆ ॥ ೩ ॥ ಕ್ಷೀರಾರ್ಣವಜಾಲಾ । ಪ್ರಿಯ ಶ್ರೀ । ಗಾರಗಾನಲೋಲಾ ॥ ಘೋರದೈತ್ಯ ಸಂಹಾರಕ ಕಾಲಾ । ನಾರಾಯಣ ಅವತಾರ ಸುಶೀಲಾ ॥ ೪ ॥ ಶ್ರೀ ॥

॥ ೧೨೦ ॥ ರಾಗ, ಕೇತಾರಗೌಳ [ಧಾಟಿ:- ಪಾಲಿಸೈ ತ್ರಿಶೂಲಿಯೆ ಮುದದಿಂ] ಏಕತಾಳ

ಪಾಲಿಸೈ ತ್ರಿಶೂಲಿಯೇ ಮುದದಿಂ । ಕಲಿಕಾಲರುದ್ರನೇ ॥ ಪಲ್ಲ ॥ ವಂದಿಸುವೆ ನಯ । ಯಿಂದುವರ ದಯಾ । ಸಿಂಧು ಎನ್ನಯ । ಬಂಧ ಬಿಡಿ

ಸೈಯ್ಯ ॥ ಅಂದುಪಾಲ ಮುದ ಚಂದ ನಿಂತ ಧರೀ ॥ ಆಪದ್ಬಂಧುವೇ ನೀ ಬೇಗ । ಬಂದೀಗಲಿನ್ನನು ॥ ೧ ॥ ವ್ಯೋಮಕೇಶ ನಿನ್ನ । ನಾಮುವನುದಿನ । ನಾ ಮರೆಯೆ ಗುಣ । ಧಾಮ ಮುನಿಜನ ॥ ಸ್ತೋಮವಂದ್ಯ ಬಿಲ್ವಪ್ರೇಮಿ ಯೆ ರಿಪುಕುಲದೀ ॥ ಭೀಮಾ ವಿರೂಪಾಕ್ಷ । ಕಾಮಾರಿ ನಂಬಿದೇ ॥ ೨ ॥ ಕ್ಲೇಶಹರ ಜಗ । ದೀಶನುತುರಗ । ನಾಶ ಭೂಪ ಗ । ಣೇಶ ಪನ್ನಗ ॥ ಶೇಷ ಶಾಯಿ ವೆಂಕಟೇಶ ವಿಠ್ಠಲ ಪ್ರಿಯರೀ ॥ ದಾಸರ ಕಾಯ್ವು ಕೈ । ಲಾಸನಿವಾ ಸನೆ ॥ ೩ ॥ ಶ್ರೀ ॥

॥ ೧೨೧ ॥ ರಾಗ, ಕೇತಾರಗೌಳ [ಧಾಟಿ:– ಸಾಕು ಸಾಕು ನರಹರಿಯೆ] ರೂಪಕತಾಳ

ಕಾಯಬೇಕು ದೇವದೇವ । ತೋಯಜಾಕ್ಷ ಮಾಧವ ॥ ಪ್ರೀಯ ನೆನ್ನ ಮನ್ನಿಸುತ । ನ್ಯಾಯುದಪರಾಧವ ॥ ೧ ॥ ವೇದಚೋರನನು ವಿ । ನೋದ ದಿಂದಲಿ ಕೊಂದು ॥ ಮೇದಿನಿಯುನ್ನು ಪೊತ್ತ । ಆದಿಸೂಕರ ವರ ॥ ೨ ॥ ತರಳ ಪ್ರಹ್ಲಾದನ । ಮೊರೆ ಕೇಳಿದಾಕ್ಷಣ ॥ ದುರುಳ ಹಿರಣ್ಯಕನ । ಕರುಳ ಕೊರಳ ಹರಿ ॥ ೩ ॥ ಪೊಡವಿ ದಾನವ ಬೇಡಿ । ಕೊಡಲಿ ಕದನ ಮಾಡಿ ॥ ಜಡಧಿಯು ನಡಹಿದ । ಕಡು ವ್ಯಭಿಚಾರಿ ಹರಿ ॥ ೪ ॥ ಬಾಲಕಿಯರ ಮಾನ । ಶೀಲವಿನಾಶನ ॥ ಮೂಲ ಶ್ರೀನಾರಾಯಣ । ಕಲ್ಕ್ಯಪರಾಯಣ ॥ ೫ ॥ ಶ್ರೀ

॥ ೧೨೨ ॥ ರಾಗ, [ಧಾಟಿ:– ಮಂಗಲಂ ರಥಾಂಗಪಾಣೆ] ತಾಳ

ಜಗದಂಬೆ ಭಗವತೀ ಮಯೂರವಾಹಿನೀ । ತ್ರಿಜಗ ಪೊರೆ ವಿಮಲ ಭಾಸೆ ವಿಶ್ವಮೋಹಿನೀ ॥ ೧ ॥ ವಾಣಿ ಸರ್ಪವೇಣಿ ಸುಕಲ್ಯಾಣಿ ಶಾರದೆ । ಗೀರ್ವಾಣಿ ಬ್ರಹ್ಮರಾಣಿ ವೀಣಾಪಾಣಿ ಸುವರದೆ ॥ ೨ ॥ ಇಂದುವದನೆ ಕುಂದರದನೆ ಮಂದಗಾಮಿನಿ । ಆನಂದದಿಂದ ಬಂದು ಪೊರೆ ವಿರಿಂಚಿ ಕಾಮಿನಿ ॥ ೩ ॥ ಚಂದ್ರಕಿರಣ ಕೋಟಿ ವಿಭ್ರಾಜ ರಾಜಿತೆ । ಭೂಮಂಡ ಲಾದಿನಾಯಕೀ ಬ್ರಹ್ಮಾಂಡಪೂಜಿತೆ ॥ ೪ ॥ ಅಜ್ಞರೆಸಗುವಜ್ಞಾನದ ಕೃತಿ ಯ ಲಾಲಿಸ । ಸುಜ್ಞಾನವಿತ್ತು ಪ್ರಾಜ್ಞರೆನಿಸಿ ಯೆಮ್ಮ ಪಾಲಿಸ ॥ ೫ ॥ ಘೋರ ಪಾಪ ಅಂಧಕಾರವವಿನಾಶಿನೀ । ಶ್ರೀರಮೇಶ ನಾರಾಯಣ ಸೊಸೆ ವಿಲಾಸಿನೀ ॥ ೬ ॥ ಶ್ರೀ ॥

॥ ೧೨೩ ॥ ರಾಗ, [ಧಾಟಿ:– ] ತಾಳ

ಓಂ ನಮೋ ಭಗವತೇ ವಾಸುದೇವಾಯ । ನಮೋ ಭಗವತೇ ವಾಸುದೇವಾಯ ॥ ಪಲ್ಲ ॥ ವೇದೋದ್ಧರಾಯ ಭೂಧರಧರಾಯ । ಮೇದಿನಿ

ಧೃತ ಪ್ರಹ್ಲಾದರಕ್ಷ ಓಂ ॥ ೧ ॥ ವಟುರೂಪಾಯ ಪ್ರಕಟ ಕೋಪಾಯ । ಪಟುವಿಕ್ರಮ ಮರ್ಕಟದಲಾಯ ಓಂ ॥ ೨ ॥ ನಗವರಧರಾಯ ದಿಗಂಬರಾಯ । ದಿಕ್ಪಾಲಕ ತುರಗಾರೂಢಾಯ ಓಂ ॥ ೩ ॥ ಶ್ರೀ ॥

॥ ೧೨೪ ॥ ರಾಗ, ಶಂಕರಾಭರಣ[ಧಾಟಿ:- ಹರಿ ಸಿರ್ನ್ನೋಲುಮೆಯು ಆಗುವ] ಆದಿತಾಳ

ಶ್ರೀರಮಾವರ ಸುರಚಿರ ಕರುಣಾಕರ ಪರಿಪಾಲಯ ಮಾಂ ॥ ಪಲ್ಲ ॥ ನಾರದಾದಿ ಸುರ । ವಾರವಿನುತ ಚರ । ಣಾರವಿಂದ ಮುಹಿ । ನಾರಿ ಮನೋಹರ ॥ ಘೋರ ದೈತ್ಯಸಂ । ಹಾರಕ ಭಕ್ತೋ । ದ್ಧಾರಕ ಅಘಸಂ । ಹಾರಕ ಪರತರ ॥ ೧ ॥ ಘೋರದುರಿತ । ಪರಿಹಾರಕ ಶೌರೇ । ಪಾರಮುಹಿಮ ಗಂ । ಭೀರ ನರಹರೆ ॥ ಶರಣಾಗತರಂ । ಪೊರೆ ಶ್ರೀಹರಿಯೇ । ಸ್ಮರಿಸುತಲಿರುವೆವು । ನಿರುತವು ದೊರೆಯೇ ॥ ೨ ॥ ಶ್ರೀ ॥



# ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯಕೃತ ಪದಗಳು.

॥ ೧೨೫ ॥ ರಾಗ, ಮೋಹನ [ಧಾಟಿ:- ತೋರೆರೇ ಬೇಗನೆ ತೋಯಜನಯನೇ] ಆದಿತಾಳ

ಸಿದ್ಧ ಸಾಧ್ಯಾರಾಧ್ಯಂ । ವಂದೇ ಗಣನಾಥಂ ॥ ಸಿದ್ಧ ಸಾಧ್ಯಾರಾಧ್ಯಂ ॥ ಪಲ್ಲ ॥ ಬುದ್ಧಿ ಜ್ಞಾನ ವೈರಾಗ್ಯಭಾಗ್ಯದಂ । ಮಧ್ವಾಂತರ್ಗತ ವ್ಯಾಸಪದನತಂ ॥ ಸಿದ್ಧ ಸಾಧ್ಯಾರಾಧ್ಯಂ ॥ ಅನುಪಲ್ಲ ॥ ಭಾರತಾರ್ಥ ಪರಿಚರ್ಯ ಕೋವಿದಂ । ಭಾನುಶತಾಭಂ । ಭಕ್ತಸುಲ್ಲಭಂ ॥ ಸಿದ್ಧ ಸಾಧ್ಯಾರಾಧ್ಯಂ ॥ ॥ ೧ ॥ ಶರ್ವಾನೇಕರ ಭೂಷಣಂ ವರಂ । ದುರ್ವಾರದುರಿತ ದುರ್ಗಭಂಜನಂ ॥ ಸಿದ್ಧ ಸಾಧ್ಯಾರಾಧ್ಯಂ ॥ ೨ ॥ ವಿಶ್ವಗುಣರೂಪ ವಿಶ್ವಾಸಪರಂ । ವಿಶ್ವವಂದಿತಂ ವೈಷ್ಣವಂ ವರಂ ॥ ಸಿದ್ಧ ಸಾಧ್ಯಾರಾಧ್ಯಂ ॥ ೩ ॥ ಲಕ್ಷ್ಮೀನಾರಾಯಣ ಪದಾಶ್ರಿತಂ । ಸುಕ್ಷೇಮಪ್ರದಂ । ಸುಜನೌಘ ಮುದಂ ॥ ಸಿದ್ಧ ಸಾಧ್ಯಾರಾಧ್ಯಂ ॥ ೪ ॥ ಶ್ರೀ ॥

॥ ೧೨೬ ॥ ರಾಗ, ಖಮಾಚ [ಧಾಟಿ:- ಸಾರಸಸಮಮುಖಿ ಪರಮಾನಮಾ] ಆದಿತಾಳ

ಶ್ರೀಗಜವಕ್ತ್ರ ಪವಿತ್ರ ನಮೋ । ಮನುಮಥಜಿತ ಸುತನಯ ॥ ಶ್ರೀಗಜವಕ್ತ್ರ ॥ ಪಲ್ಲ ॥ ಬಾಗುವೆ ಶಿರಶರಣಾಗು ಶರಣ್ಯ ಸುರೌಘಸನ್ನುತ ಮಹಾಗುಣಸಾಗರ ॥ ಶ್ರೀಗಜವಕ್ತ್ರ ॥ ಅನುಪಲ್ಲ ॥ ಸಿದ್ಧ ಸಮೂಹಾರಾಧ್ಯ

ಪದದ್ವಯ ಶೋಭಾ । ಸೂರ್ಯಾಭಾ । ಶುದ್ಧಾತ್ಮಭಣಿಪ ಬದ್ಧಕಟ ವಿಗತ ಲೋಭಾ ॥ ಹೃದ್ಯಜನದುರಿತ ಭಿದ್ಯವಿನಾಯಕ । ವಿದ್ಯಾದಿ ಸಕಲ ಬುದ್ಧಿ ಪ್ರದಾಯಕ ॥ ಶ್ರೀಗಜವಕ್ತ್ರ ॥ ೧ ॥ ಏಕದಂತ ಚಾಮೀಕರ ಖಚಿತವಿಭೂಷಾ। ಗಣೇಶಾ । ಪಾಕಹಪ್ರಮುಖ ದಿವೌಕಸ ಪೂಜ್ಯವಿಲಾಸಾ ॥ ಶೋಕರಹಿತ ವಿವ್ಯಾಕುಲ ಮಾನಸ । ಲೇಖಕಾಗ್ರಣಿ ಪರಾಕೆನ್ನಬನ್ನಪ ॥ ಶ್ರೀಗಜವಕ್ತ್ರ ॥ ॥ ೨ ॥ ವರ ಮಂಗಲಪುರ ಶರಭ ಗಣೇಶ್ವರ ಧೀರಾ । ಉದಾರಾ । ಸುರುಚಿರ ಶುಕ್ಲಾಂಬರಧರ ವಿಘ್ನವಿದಾರಾ ॥ ಹರಿ ಲಕ್ಷ್ಮೀನಾರಾಯಣ ಶರಣರ ಗುರು ಗುಹಾಗ್ರಜ ಮನೋಹರ ಸುಚರಿತ ॥ ಶ್ರೀಗಜವಕ್ತ್ರ ॥ ೩ ॥ ಶ್ರೀ ॥

॥ ೧೨೭ ॥ ಶ್ರೀರಾಗ. [ಧಾಟಿ:- ವನಜಾಸನ ವಿನುತಾನತ] ರೂಪಕತಾಳ

ನಲಿದಾಡಿದಳ್ ನಳಿನಾಂಬಕಿ । ನಲಿದೆಮ್ಮನು ಸಲಹಲ್ಕೋಸುಗ ॥ ॥ ನಲಿದಾಡಿದಳ್ ॥ ಪಲ್ಲ ॥ ಸುಲಲಿತ ವೀಣಾಪಾಣೆ । ಜಲಜೋದ್ಭವ ರಮಣೀ । ಸುಗುಣೀ ॥ ನಲಿದಾಡಿದಳ್ ನಳಿನಾಂಬಕಿ ॥ ಅನುಪಲ್ಲ ॥ ಕೃತಿನುತೆ ಕೃಪಾನ್ವಿತೇ । ಶ್ರುತಿಸಮ್ಮತ ಗೀತೆ ॥ ಪ್ರತಿರಹಿತೇ ಸತಿಪೂಜಿತೆ । ರತಿಯಾಮಿತ ಶೋಭಿತೆ । ಧೃತಿಸಂಭೃತಿ ಮತಿದಾಯಕಿ ॥ ನಲಿದಾಡಿದಳ್ ॥ ॥ ೧ ॥ ಇಭೇಂದ್ರಗಮೆ । ವಿಧುಮಂಡಲ । ನಿಭಮುಖಿ ಶಿಖಿಯಾನೆ ॥ ಅಭಯಪ್ರದೆ ಅಖಿಳೇಶ್ವರಿ । ಸುಭುಜೆ ಶುಭದೆ ವಿಭುದೆ । ಯುಭವೆ ಸದ್ವಿಭವಾಸ್ಪದ ॥ ॥ ನಲಿದಾಡಿದಳ್ ॥ ೨ ॥ ಪರಾಂಬರಿಸು ಪದಾಶ್ರಿತನ । ಪ್ರಭಾಕರ ಶತಾಭೇ ॥ ಹರಿ ಲಕ್ಷ್ಮೀನಾರಾಯಣೆ । ಶರಣೇ ರತ್ನಾಭರಣೇ । ಕರುಣಾರಸ ವರುಣಾಲಯೇ ॥ ನಲಿದಾಡಿದಳ್ ॥ ೩ ॥

॥ ೧೨೮ ॥ ರಾಗ ಕಲ್ಯಾಣಿ [ಧಾಟಿ:- ಕರಿವರದಾ ಬೇಗ ಬಾ] ಆದಿತಾಳ

ದಯಮಾಡಿ ನಡಿಸು । ಶಾರದೇ । ದಯಮಾಡಿ ನಡಿಸೇ ॥ ಪಲ್ಲ ॥ ಹೃದಯಾಂಗಣದಲಿ ಸದನವ ಮಾಡುತ । ವಿಧವಿಧ ನವರಸದುದಯಿಸುವದನಕ ॥ ॥ ದಯಮಾಡೀ ನಡಿಸೆ ॥ ೧ ॥ ಭೃಂಗಕುಂತಳೆ ಕೃಪಾಪಾಂಗೆ ಬ್ರಹ್ಮಾಣಿ । ಕುರಂಗನಯನೆ ಶ್ರೀರಂಗಭಕ್ತಿಯಾ ॥ ದಯಮಾಡೀ ॥ ೨ ॥ ಭೂರಿ ಶಾಸ್ತ್ರ ವಿಚಾರವ ಪಾಲಿಸೆ । ಧೀರ ಲಕ್ಷ್ಮೀನಾರಾಯಣನ ಪೋಷೆ ॥ ದಯಮಾಡಿ ನಡಿಸೆ । ಶಾರದೆ ॥ ೧ ॥

॥ ೧೨೯ ॥ ರಾಗ, ಆನಂದಭೈರವಿ [ಧಾಟಿ:- ॥ ಕೃತಿ ॥ ] ಆದಿತಾಳ

ಸುಬ್ರಹ್ಮಣ್ಯ ಸ್ವಾಮಿತೇ ನಮೋ । ಶರಣಾಗತರ್ಗೆ ನಿರ್ಭಯವ ಪಾಲಿಸೊ ಪ್ರೇಮಿಯೊ ॥ ಪಲ್ಲ ॥ ಅಭ್ರವಾಹನಾದಿ ದೇವ । ಸಭ್ಯ ಸಂಭವಿತ ಜಗ । ದಭ್ಯುದಯಾ । ತೇಜೋಮಯಾ । ಕರ್ಬುರಾಂತಕ ನಿಶ್ಶೋಕ ॥ ಸುಬ್ರಹ್ಮಣ್ಯ ॥ ॥ ಅನುಪಲ್ಲ ॥ ಭಾವ ಭಕ್ತಿಭಾಗ್ಯಶೂನ್ಯರು । ನಿನ್ನಯ ಪಾದ । ಸೇವೆಗಾಲಸ್ಯವ ಮಾಳ್ಪರು । ಕೇವಲ ದುರ್ಜನರು ಬಾರರು । ದೇವದೇವ ನಿನ್ನ ಕರುಣಾವಲಂಬಿಗಳನ್ನೆಲ್ಲ । ಕಾವನೇ ಮಹಾನುಭಾವನೇ ॥ ಸುಬ್ರಹ್ಮಣ್ಯ ಸ್ವಾಮಿತೇ ॥ ॥ ೧ ॥ ಚಂದ್ರಸೂರ್ಯರಿರುವ ತನಕ । ಶಿವಬ್ರಾಹ್ಮಣ । ರಿಂದ ಪೂಜೆಗೊಳ್ಳೊ ಷಣ್ಮುಖ । ವಂದನೀಯ ಪಾರ್ವತೀಯ । ನಂದನ ನಳಿನಾಯತಾಕ್ಷ । ಇಂದುಶೇಖರ ಕುಮಾರ ಸ್ಕಂದನೇ । ನಿತ್ಯಾನಂದನೇ ॥ ಸುಬ್ರಹ್ಮಣ್ಯ ಸ್ವಾಮಿತೇ ॥ ೨ ॥ ಪಾವಂಜಾಖ್ಯ ಸುಕ್ಷೇತ್ರವಾಸ । ಪೊರೆಯೊ ಪರಮೇಶಾ । ಕೇವಲ ವಿಜ್ಞಾನ ಪ್ರಕಾಶ । ಭಾವಜೋಪಮ ಲಾವಣ್ಯಾ । ಕೋವಿದಾಗ್ರಗಣ್ಯಾ । ಮಹದೇವ ಲಕ್ಷ್ಮೀನಾರಾಯಣನ । ಸೇವಕಬುದ್ಧಿದಾಯಕಾ ॥ ಸುಬ್ರಹ್ಮಣ್ಯ ಸ್ವಾಮಿತೇ ॥ ೩ ॥ ಶ್ರೀಃ ॥

॥ ೧೩೦ ॥ ರಾಗ, ಕಲ್ಯಾಣಿ [ಧಾಟಿ:- ಹರಿ ಕೃಷ್ಣ ಎನಬಾರದೇ] ಅಷ್ಟತಾಳ

ಕೈಯ್ಯ ಮುಗಿವೆ ಗುರುರಾಯಾ । ಶರಣು ಜಗ । ದಯ್ಯನೇ ಬಾಹುಲ್ಲೇಯಾ ॥ ಪಲ್ಲ ॥ ವಯ್ಯನೆ ಬಿನ್ನಪಗೈಯುವೆ ಕರುಣಾಳು । ಧೈರ್ಯ ಸಾಹಸ ಗುಣ । ಧುರ್ಯನೆ ಜಯ ಜಯ ॥ ಕೈಯ್ಯ ಮುಗಿವೆ ॥ ಅನುಪಲ್ಲ ॥ ವ್ಯರ್ಥ ಜನ್ಮವಾಯಿತು । ಹರಿಯ ಸ್ಮರಣೆ । ಗೊತ್ತು ಇಲ್ಲದೆ ಹೋಯಿತು ॥ ಉತ್ತಮೋತ್ತಮ ಗುಣವ ಪಾಲಿಸು । ಭೃತ್ಯವತ್ಸಲ ಭಯನಿವಾರಣ । ಸತ್ಯಮಾರ್ಗದಿ ನಡಸು ಶಂಕರ । ಪುತ್ರ ಪುಣ್ಯಚರಿತ್ರ ಭರ್ತನೆ ॥ ಕೈಯ್ಯ ಮುಗಿವೆ ॥ ೧ ॥ ತಾಮಸ ಗುಣಗಳನೂ । ಪರಿಹರಿಸು ನಿ । ಸ್ಸೀಮಮಹಿಮನೆ ನೀನೂ ॥ ಶ್ರೀಮನೋಹರ ನಿಷ್ಠೆ ಸಜ್ಜನ । ಸ್ತೋಮ ಸಂಘವನಿತ್ತು ದುರ್ಜನ । ಸೀಮೆಯೊಳು ಪೊಕ್ಕಿಸಿದರೆನ್ನ ಸು । ಧಾಮಯೂಖಾಸ್ಯನೆ ಮಹೇಶನೆ ॥ ಕೈಯ್ಯ ಮುಗಿವೆ ॥ ೨ ॥ ಭೂಮಿಗಧಿಕವೆನಿಪಾ । ಪಾವಂಜಾಖ್ಯ । ಗ್ರಾಮಾಧಿಪತಿ ನಿಷ್ಪಾಪಾ ॥ ಕಾಮಿತಾರ್ಥವನೀವ ಯೋಗಿಲ । ಲಾಮ ಲಕ್ಷ್ಮೀನಾರಾಯಣನ ಮ । ಹಾಮಹಿಮೆಗಳ ಪೊಗಳಿ ಹಿಗ್ಗುವ । ಕೋಮಲಾಂಗ ಸುಮಂಗಲಪ್ರದ ॥ ॥ ಕೈಯ್ಯ ಮುಗಿವೆ ॥ ೩ ॥ ಶ್ರೀಃ ॥

॥ ೧೩೧ ॥ ರಾಗ, ಹಂಸಧ್ವನಿ [ಸೋಟು, ಬ್ಯಾಂಡುಚಾಲು] ದಾವರತಾಳ

ವಲ್ಲೀದೇವಿಯ ವಲ್ಲಭನೇ । ಬಲ್ಲಿದ ಭಕ್ತಗೆ ಸುಲ್ಲಭನೇ ॥ ಸಲ್ಲಲಿತ ಪಾದ । ಪಲ್ಲವ ಭಜಿಸುವ । ರೆಲ್ಲರ ಮನಸಿನೊಳುಲ್ಲಸನೇ ॥ ವಲ್ಲಿದೇವಿಯ ॥ ೧ ॥ ವೃಂದಾರಕ ಮುನಿ ವಂದಿತನೇ । ಕಂದರ್ಪಾಮಿತ ಸುಂದರನೇ ॥ ಸ್ಕಂದನೆ ಸಚ್ಚಿದಾ । ನಂದನೆ ಪಾರ್ವತಿ । ನಂದನ ಸದ್ಗುಣ ಮಂದರನೇ ॥ ವಲ್ಲೀದೇವಿಯ ॥ ೨ ॥ ತಾರಕದೈತ್ಯ ಸಂಹಾರಕನೇ । ಸೇರಿದ ಭಕ್ತೋದ್ಧಾರಕನೇ ॥ ಮಾರಾರಿಯ ಸುಕುಮಾರನೆ ಧೀರನೆ । ಚಾರು ಮಯೂರ ತುರಂಗಮನೇ ॥ ವಲ್ಲೀದೇವಿಯ ॥ ೩ ॥ ಲಕ್ಷ್ಮೀನಾರಾಯಣ ಪ್ರಿಯನೇ । ರಕ್ಷಿಸರಿಂಗತಿ ದುಃಖದನೇ ॥ ಕುಕ್ಕುಟ ವಜ್ರಾಭಯ ಶಕ್ತಿಹಸ್ತನೇ । ಪ್ರಖ್ಯಾತ ಪಾವಂಜಾಖ್ಯಪುರನರನೇ ॥ ವಲ್ಲೀದೇವಿಯ ವಲ್ಲಭನೇ । ಬಲ್ಲಿದ ಭಕ್ತಗೆ ಸುಲ್ಲಭನೇ ॥ ೪ ॥ ಶ್ರೀ ॥

॥ ೧೩೨ ॥ ರಾಗ, ಭೈರವಿ [ಧಾಟಿ:- ಪಿಡಿಯೆನ್ನ ಕೈಯ । ರಂಗಯ್ಯ] ಅಷ್ಟತಾಳ

ಪಿಡಿಯೆನ್ನ ಕೈಯ್ಯ । ಜಗನ್ಮಯ । ಪಿಡಿಯೆನ್ನ ಕೈಯ್ಯ ॥ ಪಲ್ಲ ॥ ಪಿಡಿಯೆನ್ನ ಕೈಯ್ಯ ನಿ । ಸ್ಸಡಿದಾವರೆಯಲ್ಲಿ । ದೃಢವಾದ ಮನವ ಬೇಂ । ಬಿಡದೆನಗೀಯಯ್ಯ ॥ ಪಿಡಿಯೆನ್ನ ॥ ಅನುಪಲ್ಲ ॥ ಪಾಮರಮತಿಯಾ । ಪಾಪಾತ್ಮರ । ಸ್ತೋಮಾಧಿಪತಿಯಾ ॥ ಕಾಮುಖ ಪರದಾರಾ । ಭ್ರಾಮಕತಾಮಸ । ಧಾಮನ ಕಪಟಪ । ಶ್ರಾಮ ಕುಧೀಮನ ॥ ವ್ಯೋಮಕೇಶ ಭವತ್ಪದಾಶ್ರಿತ । ನಾಮಮತ್ಕಾರದಲಿ ಪಾಲಿಸು । ಹೈಮವತಿಪತಿ ಕಾಮಹರ ಸು । ತ್ರಾಮವಂದಿತ ಸೋಮಶೇಖರ ॥ ಪಿಡಿಯೆನ್ನ ಕೈಯ್ಯ ॥ ೧ ॥ ದುಷ್ಟದುರ್ಜನನಾ । ದುರಾಚಾರ । ಭ್ರಷ್ಟಜೀವನನಾ ॥ ನುಟ್ಟಿದ ನೆಲ ಮುನಿ । ಯುವನ ಕೃತಘ್ನ ಕ । ನಿಷ್ಟ ಕಾಲುಷ್ಯದ । ಘಟ್ಟ ಚೇತನನೆನ್ನ ॥ ಥಟ್ಟನೇ ದಯವಿಟ್ಟು ಸರ್ವಾ । ಭೀಷ್ಟದಾಯಕನಾಗಿ ಕರುಣಾ । ದೃಷ್ಟಿಯಿಂದಲಿ ನೋಡು ಸನ್ಮನ । ಏಷ್ಟರಸ್ಥ ಶಿವಾಷ್ಟಮೂರುತಿ ॥ ಪಿಡಿಯೆನ್ನ ಕೈಯ್ಯ ॥ ೨ ॥ ಸತ್ಯಬಾಹಿರನಾ । ಪ್ರಪಂಚಪ್ರ । ವೃತ್ತಿಯೊಳಿಹನಾ ॥ ಅತ್ಯಂತಪಾಪಿ ಕು । ಚಿತ್ತ ಮದಾಂಧ । ನುನ್ಮತ್ತಮಾತಂಗ ಪ । ರಕ್ತಿವಿಹೀನನ ॥ ಎತ್ತ ಎನ್ನತ್ತಿತ್ತ ನೋಡದೆ । ಮತ್ತೆ ಕಾವ ಸಮರ್ಥರ್‍ಯಾರೈ । ಸತ್ವನಿಧಿ ಸುರಮೊತ್ತ ಪೂಜಿತ । ಮೃತ್ಯುಹರ ಶ್ರೀಕೃತ್ತಿವಾಸನೆ ॥ ಪಿಡಿಯೆನ್ನ ಕೈಯ್ಯ ॥ ೩ ॥ ಎಣಿಸಲುಬ್ಯಾಡಾ । ಎನ್ನಪರಾಧ । ಗಣಿತಕ್ಕೆ ಕೂಡಾ ॥ ಗುಣಗಣನಿಧಿ ಲಕ್ಷ್ಮೀ । ನಾರಾಯಣ ಸಖ । ದಣಿಯ

ಲೊಲ್ಲೆ ದಯ। ಮಾಡೆನಗೀಗಲೆ ॥ ಫಣಿಪ ಕುಂಡಲ ಪಾರ್ವತೀಪತಿ । ಪ್ರಣತ ಜನ ಮಂದಾರ ನಿರ್ಮಲ । ಪ್ರಣವರೂಪನೆ ಮಾತಿಕಾಪುರ । ಮಣಿ ಮಹಾ ಲಿಂಗೇಶ ಬೇಗನೇ ॥ ಪಿಡಿಯೆನ್ನ ಕೈಯ್ಯ ॥ ೪ ॥ ಶ್ರೀ ॥

॥ ೧೩೩ ॥ ರಾಗ, ಸುರುಟ [ಧಾಟಿ:- ಪಾಲಿಸು ಶ್ರೀಹರಿಯೇ] ಆದಿತಾಳ

ಪಾಲಿಸು ಮಹಮ್ಮಾಯೆ । ಕರುಣ ಕ। ಟಾಕ್ಷದಿಂದಲಿ ತಾಯೆ ॥ಪಲ್ಲ॥ ದಾಕ್ಷಾಯಣಿ ದೈತ್ಯಾಂತಕಿ ವರ ನಿ। ಲಾಕ್ಷನ ರಾಣಿ ನಿರೀಕ್ಷಿಸು ಜನನೀ ॥ ರಕ್ಷಿಸು ಮಹಮಾಯೇ ॥ ಅನುಪಲ್ಲ ॥ ವಾಸವಮುಖವಿನುತೆ । ರವಿಸಂ। ಕಾಶೆ ಸುಗುಣಯೂಥೇ ॥ ಭಾಸುರ ಮಣಿಗಣಭೂಷೆ ತ್ರಿಲೋಕಾ । ಧೀಶೆ ಭಕ್ತ ಜನಪೋಷೆ ಪರೇಶೇ ॥ ಪಾಲಿಸು ಮಹಮ್ಮಾಯೇ ॥ ೧ ॥ ಗುಹಗಣಪರ ಮಾತೆ । ದುರಿತಾ । ಪಹೆ ಮರ್ಜನಘಾತೆ ॥ ಬಹು ಕಾಮಿತಪ್ರದೆ ಭಜಕ ಜನೋರ್ಚಿತೆ । ಮಹಿತೆ ಯೋಗಿಹೃದ್ಗುಹನಿವಾಸಿನಿಯೆ ॥ ಪಾಲಿಸೆ ಮಹ ಮ್ಮಾಯೆ ॥ ೨ ॥ ಶುಂಭಾಸುರಮಥನೀ । ಸುರನಿಕು। ರುಂಬಾರ್ಚಿತೆ ಸುಮ ನೀ ॥ ರಂಭಾದಿ ಸುರನಿತಂಬಿನಿ ಜನಕ । ದಂಬ ಸೇವಿತ ಪದಾಂಬುಜೆ ಗಿರಿಜೇ ॥ ಪಾಲಿಸು ಮಹಮ್ಮಾಯೆ ॥ ೩ ॥ ಅಷ್ಟಾಯುಧಪಾಣೆ । ಸದಾ ಸಂ । ತುಷ್ಟೆ ಸರಸವಾಣೀ ॥ ಸೃಷ್ಟಿಲಯೋದಯಕಾರಿಣಿ ರುದ್ರನ । ಪಟ್ಟದ ರಾಣಿ ಪರಾಕು ಕಲ್ಯಾಣೀ ॥ ಪಾಲಿಸು ಮಹಮ್ಮಾಯೆ ॥ ೪ ॥ ನೇತ್ರಾ ವತಿ ತಟದಾ । ಏಟಪುರ । ಕ್ಷೇತ್ರ ಮಂದಿರೆ ಶುಭದಾ ॥ ಸುತ್ರಾಣಿ ಲಕ್ಷ್ಮೀ ನಾರಾಯಣ ಸ। ರ್ವತ್ರಭರಿತೆ ಲೋಕತ್ರಯನಾಯಕಿ ॥ ಪಾಲಿಸು ಮಹ ಮ್ಮಾಯೆ ॥ ೫ ॥ ಶ್ರೀ ॥

॥ ೧೩೪ ॥ ರಾಗ, ಭೈರವಿ [ಧಾಟಿ:- ಕರುಣದಿ ಕಾಯೋ । ಮಹಾ] ಅಷ್ಟತಾಳ

ದಯಮಾಡೆ ಬ್ಯಾಗೇ । ಶ್ರೀ ಪಂಚದುರ್ಗೆ । ದಯಮಾಡೆ ಬ್ಯಾಗೇ ॥ ॥ ಪಲ್ಲ ॥ ದಯಮಾಡದೆ ಕೇವಲ ಭಯವಿಹ್ವಲನಲ್ಲಿ । ದಯಸಾಗರೆ ಸೌಭಾಗ್ಯ ಸಂಪದವ ನೀ ॥ ದಯಮಾಡೆ ॥ ಅನುಪಲ್ಲ ॥ ವೇದಾಂತವೇದ್ಯೇ । ನಿಖಿಲ ಜಗ । ದಾದಿವಿನೋದೇ ॥ ಭೂಧರಾತ್ಮಜೆ ಸರ್ವಾಧಾರೆ ಶಕ್ತಿ ಕ । ಲಾಧರೆ ಮಧುರ ಬಿಂಬಾಧರೆ ನಿನ್ನಯ ॥ ಪಾದವನು ಮರೆಹೊಕ್ಕೆ ಮನಸಿನ । ಭೇದ ವನು ಪರಿಹರಿಸಿ ಸರ್ವಪ । ರಾಧಗಳ ಕ್ಷಮಿಸಮ್ಮ ಕೈಟಭ । ಸೂದನನ ಸೋದರಿ ಮಹೇಶ್ವರಿ ॥ ದಯಮಾಡೆ ಬ್ಯಾಗೇ ॥ ೧ ॥ ಅಂಬುಜಚರಣೇ । ಮಾಧುರ್ಯೋರು । ರಂಭ ಸಮಾನೇ ॥ ಗಂಭೀರೆ ಮೇರುನಿತಂಬೆ ಸಿಂಹ

ಮಧ್ಯೇ । ಲಂಬೋದರ ಪರಿರಂಭ ಕರಾಂಬುಜೆ ॥ ಕುಂಭಿಕುಂಭಪಯೋಜೆ ಶೋಭಿಪ । ಕಂಬುಕಂಠೆ ಮುಖೇಂದು ಪದ್ಮದ । ಳಾಂಬಕಿಯೆ ಎನಗಿಂಬು ದೋರೆ ರೋ । ಲಂಬಕುಂತಳೆ ಶುಂಭಮರ್ದನಿ ॥ ದಯುಮಾಡೆ ಬ್ಯಾಗೇ ॥ ॥ ೨ ॥ ಸಿಂಧೂರಗಮನೆ । ನಿಖಿಳಾಮರ । ವಂದಿತ ಚರಣೆ ॥ ಸುಂದರಾಂಗಿ ಸುಮಗಂಧಿ ವಿಬುಧಮುನಿ । ವೃಂದಸೇವಿತೆ ನಿತ್ಯಾನಂದ ಪ್ರಕಾಶಿನೀ ॥ ಅಂಧಕಾಸುರ ವೈರಿ ಹೃದಯಾ । ನಂದ ಪಾರಾವಾರೆ ಪೂರ್ಣಮಿ । ಚಂದ್ರೆ ಸದ್ಗುಣಸಾಂದ್ರೆ ಸುರತ ನ । ರೇಂದ್ರವರದೆ ಮೃಗೇಂದ್ರವಾಹಿನಿ ॥ ದಯು ಮಾಡೆ ಬ್ಯಾಗೇ ॥ ೩ ॥ ರಜತಾದ್ರಿವಾಸೇ । ಚಂಪಕನಾಸೆ । ಸುಜನೌಘಪೋಷೆ ॥ ನಿಜದಿ ನಿನ್ನಯು ಪಾದಾಂಬುಜವನ್ನು ನಂಬಿದೆ । ತ್ರಿಜಗವಂದಿತೆ ಮಹಾ ಗಜ ಗೌರಿ ಶಂಕರಿ ॥ ತ್ರಿಜಗಜನನಿ ಭವಾನಿ ಪಾರ್ವತಿ । ಭುಜಗಭೂಷಣ ರಾಣಿ ಕಲುಷ । ವ್ರಜವಿದಾರಿ ಮೌನೀಂದ್ರಮನ ನೀ । ರಜದಿವಾಕರೆ ಮಾನಿತೋದ್ಧರೆ ॥ ದಯುಮಾಡೆ ಬ್ಯಾಗೇ ॥೪॥ ತಪ್ಪುಸಹಸ್ರ । ವಿಪ್ಪರು ಮನದೊ । ಳಿಪ್ಪುದಜಸ್ರ ॥ ಸರ್ಪಶಯುನ ಲಕ್ಷ್ಮೀನಾರಾಯುಣ ಪ್ರೀತಿ । ಯುಪ್ಪಂತೆ ದಯುಗೈಯ್ಯೆ ಜಗ ದಾದಿಮಾಯೆ ॥ ಕಪ್ಪುಕಂಠನ ಪ್ರೀಯೆ ವರ ಕಂ । ದರ್ಪ ಧಿಃಕೃತರೂಪೆ ಸಾಧುಪ । ದಪ್ರಸಾದವ ಪಾಲಿಸೆನ್ನಲಿ । ಬಪ್ಪನಾಡಿನ ಭದ್ರದಾಯುಕಿ ॥ ದಯು ಮಾಡೆ ಬ್ಯಾಗೆ ॥ ೫ ॥ ಶ್ರೀಃ ॥

॥ ೧೩೫ ॥ ರಾಗ, ಮೋಹನ [ಧಾಟಿ:- ಗುರುಕೃಪಾ ಅಂಜನ ಪಾಯೊ] ಆದಿತಾಳ

ಭಕ್ತಸಂಸಾರಿ ಹರಿ ಶಕಟಸಂಹಾರಿ । ಸಕಲಾಂತರ್ಯಾತ್ಮಕ ವರ ಗಿರಿಧಾರಿ ॥ ಪಲ್ಲ ॥ ಅಂತರ್ಬಹಿರ್ವ್ಯಾಪ್ತಾನಂತವತಾರಿ । ಸಂತಜನರ ಮನೋಭ್ರಾಂತಿನಿವಾರಿ ॥ ಭಕ್ತ ಸಂಸಾರಿ ॥ ೧ ॥ ನಿಖಿಲ ಬ್ರಹ್ಮಾದಿ ಸುರನಿಕರ ಕೈವಾರಿ । ಪ್ರಕೃತಿ ನಿಯಾಮಕ ಪ್ರಭು ಕಂಸಾರಿ ॥ ಭಕ್ತ ಸಂಸಾರಿ ॥ ೨ ॥ ಘನ ಕೃಪಾಸಾಗರ ಪ್ರಣತಾರ್ತಿಹಾರಿ । ಅನಘ ಲಕ್ಷ್ಮೀ ನಾರಾಯುಣ ನಿರ್ವಿಕಾರಿ ॥ ಭಕ್ತ ಸಂಸಾರಿ ॥ ೩ ॥

॥ ೧೩೬ ॥ ರಾಗ, ಧನಾಸರಿ [ಧಾಟಿ:- ಕರುಣಾಕರ ನೀನೆಂಬುವದ್ಯಾಕೋ] ಆದಿತಾಳ

ದಂಡಿಸದೆನ್ನನು ದಯುದೋರ್ಕೈ ಕರ । ದಂಡದಳಾಂಬಕನೇ ॥ ಪಲ್ಲ ॥ ಚಂಡೀಶವಿನುತ ಬ್ರಹ್ಮಾಂಡಪಾಲ ಮಾ । ರ್ತಾಂಡ ಮಂಡಲಗ ಶುಂಡಾಲವರದ ॥ ॥ ಅನುಪಲ್ಲ ॥ ಕ್ಷೇಮದಿ ಶ್ರೀಹರಿ ನಾಮವ ವರ್ಣಿಸಿ । ನೇಮಾನುಷ್ಠಾನದೊ ಳಿರಲೂ ॥ ನಾ ಮಾಡಿದ ನಾನಾವಿಧ ಪಾಪದ । ತಾಮಸಗೊಳಿಸುವ ಕಾಮ

ಕ್ರೋಧಗಳಿಂ ॥ ದಂಡಿಸ ॥ ೧ ॥ ಗೀರ್ವಾಣನುಡಿಯೊಳೀರ್ವಾರ್ಥಗಳನ್ನು । ಸರ್ವಾರ್ಥವೆಂದು ನಾ ಪಠಿಸಿರಲು ॥ ಪೂರ್ವಾರ್ಜಿತಗಳ ದೂರ್ವೆಂದೆನ್ನಯ । ನಿರ್ವಹವಿಲ್ಲಾ ದುರ್ವ್ಯಸನಗಳಿಂ ॥ ದಂಡಿಸ ॥ ೨ ॥ ಶಿಷ್ಟಾಚಾರದೊಳಿಷ್ಟನಾಗಿ ಪರ । ಮೋಕ್ಷ ಜನಕ ಜಯ ಜಯವೆನಲು ॥ ಧೃಷ್ಟಾಲೋಚನೆ ಪುಟ್ಟಿಸಿ ಪಾಪದ । ಬಟ್ಟೆಯ ಹೊದ್ದಿಪ ದುಷ್ಟಸಂಘದಿಂ ॥ ದಂಡಿಸ ॥ ೩ ॥ ನಾರಾಯಣ ನರಹರಿ ಎನ್ನುವ ವ್ಯಾ । ಪಾರವ ನಾ ಮಾಡುತ್ತಿರಲು ॥ ಆರೋಪಣ ಅವರೋಹಣನಾದ ವಿ । ಕಾರಗೊಳಿಪ ಶ್ಯಾರೀರಪ್ರಕೃತಿಯಿಂ ॥ ದಂಡಿಸ ॥ ೪ ॥ ಆರ್ಕಾರಣ ರಿಪುಗಳಿಗೈ ಸರ್ವದೇ । ವರ್ಕಳ ಮಸ್ತಕಮಣಿ ನೀನೇ ॥ ತರ್ಕಾಗಮ್ಯ ಲಕ್ಷ್ಮೀನಾರಾಯಣ । ಅರ್ಕಾಮಿತಭಾಸ ಕಾರ್ಕಳ ಪುರವರ ॥ ॥ ದಂಡಿಸ ॥ ೫ ॥ ಶ್ರೀಃ ॥

॥ ೧೩೭ ॥ ರಾಗ, ಧನಾಸರಿ [ಧಾಟಿ:- ಕರುಣಾಕರ ನೀನೆಂಬುವದ್ಯಾಕೊ] ಏಕತಾಳ

ಕರುಣಿಸಬಾರದೆ ಕಂಜನಾಭನೆ । ಕೈಯ್ಯ ಮುಗಿವೆನಯ್ಯಾ ॥ ವರ ಫಣಿಗಿರಿ ಸುಸ್ಥಿರಮಂದಿರ ಶ್ರೀ । ಗುರು ಜನಾರ್ದನ ಅಮರಾರ್ಚಿತ ಪದ ॥ ॥ ಪಲ್ಲ ॥ ಅಪರಾಧಗಳಾಲೋಚಿಸುವರೆ ಸರಿ । ನೃಪರಾಜನಿಗಳವೇ ॥ ಕೃಪೆಯಿಂದಲಿ ಸಂರಕ್ಷಿಸದಿರ್ದಡೆ । ಅಪಕೀರ್ತಿಯು ನಿನಗಲ್ಲವೆ ಶ್ರೀಹರಿ ॥ ಕರುಣಿಸ ॥ ೧ ॥ ಕನಕ ಪುರಂದರ ಮುಖ್ಯ ದಾಸರಂತೆ । ಗುಣವೆನಗಿನಿತಿಲ್ಲಾ ॥ ಜನರ ವಿಡಂಬಕೆ ದಾಸನಾದರೂ । ಘನ ಮಹಿಮಾರ್ಣವ ಕನಕಾಂಬರಧರ ॥ ॥ ಕರುಣಿಸ ॥ ೨ ॥ ಲಕ್ಷಮಹಾತ್ಮ್ಯಾತಕೆ ಲಕ್ಷ್ಮೀನಾರಾಯಣ । ರಕ್ಷಾಮಣಿ ನೀನೂ ॥ ಪಕ್ಷೀಂದ್ರವಾಹನ ಪಾಪವಿಮೋಚನ । ತ್ರ್ಯಕ್ಷಮಿತ್ರನೆನ್ನಕ್ಷಿ ಗೋಚರನಾಗಿ ॥ ಕರುಣಿಸಬಾರದೆ ॥ ೩ ॥ ಶ್ರೀಃ ॥

॥ ೧೩೮ ॥ ರಾಗ, ಭೈರವಿ [ಧಾಟಿ:- ಕರುಣಾಕರ ಧೀರ ಭವಾಸಿಶಂಕರ] ಅಷ್ಟತಾಳ

ತಪ್ಪುಗಳೆಲ್ಲವ ಒಪ್ಪಿಗೊಳ್ಳಯ್ಯ ಶ್ರೀ । ಚಪ್ಪರ ಶ್ರೀನಿವಾಸಾ ॥ ಸರ್ಪರಾಜ ಗಿರಿಯಪ್ಪ ತಿಮ್ಮಪ್ಪ ಕಂ। ದರ್ಪಕತಾತನೇತಾ । ಸಜ್ಜನಪ್ರೀತಾ ॥ ॥ ಪ ॥ ಮಾಧವ ನಿನ್ನಯ ಮಹಿಮೆಯನರಿದಪ । ರಾಧವ ಮಾಡಿದೇ ದಾರಿದ್ರದಾ ॥ ಬಾಧೆಯಿಂದ ತವ ಪಾದದರುಶನದ । ಹಾದಿಯ ಕಾಣದಾದೇ। ನಾ ದ್ರೋಹಿಯಾದೇ ॥ ತಪ್ಪು ॥ ೧ ॥ ತ್ರಾಣವಿರೂವಾಗ ಕಾಣಿಕೆ ಹಾಕಿದೆ । ದೀನ ದಾರಿದ್ರ್ಯದ ಹೊತ್ತಿನಲೀ ॥ ಮೋಣದರಿಂದಲಿ ತೆಗೆದು ತೆಗೆದು ಪಂಜೆ ।

ಪ್ರಾಣಗಾಹುತಿಯ ಕೊಟ್ಟೆ। ಅಪರಾಧಪಟ್ಟೆ ॥ ತಪ್ಪು ॥ ೨ ॥ ಮಂದವಾರ ದಿನ ಕ್ಕೊಂದೂಟವನುಂಡು । ಸ್ವಸ್ಥದಿಂದಿರುವಾಗ ನೇಮವಿಟ್ಟೇ ॥ ಮಂದಭಾಗ್ಯ ಜ್ವರದಿಂದ ಪೀಡಿತನಾಗಿ । ಅಂದೆರಡೂಟವನೂ। ಮಾಡಿದೆ ನಾನೂ ॥ ತಪ್ಪು ॥ ॥ ೩ ॥ ಶನಿವಾರಕ್ಕೊಂದಾಣೆ ಕಾಣಿಕೆ ಹಾಕುತ । ಮಿನುಗುವ ಡಬ್ಬಿಯ ಮಾಡಿದೆನು ॥ ಎನಗೆ ದಾರಿದ್ರವು ಕೊಟ್ಟ ಕಾರಣದಿಂದ । ಹಣವೆಲ್ಲ ಗುಣ ನುಂಗಿತು । ಪಾದಕೆ ಗೊತ್ತು ॥ ತಪ್ಪು ॥ ೪ ॥ ಭಂಡಾರದ್ರೋಹ ಬ್ರಹ್ಮಾಂಡ ಶೋಕಾಗ್ನಿಯು । ಮಂಡೆಯೊಳುರಿವುದು ಖಂಡಿತದೀ ॥ ಪುಂಡರೀಕಾಕ್ಷ ಸತ್ಕರುಣಾಮೃತರಸ । ಕುಂಡದೊಳ್ಮೀಯಿಸಯ್ಯಾ । ವೆಂಕಟರಾಯಾ ॥ ॥ ತಪ್ಪು ॥ ೫ ॥ ದೊಡ್ಡ ದಾರಿದ್ರದ ಗುಡ್ಡೆ ಬಿದ್ದುದರಿಂದ । ದುಡ್ಡೆಲ್ಲ ತೆಗದೆ ನಾ ದಡ್ಡನಾಗೀ ॥ ಅಡ್ಡಬಿದ್ದು ಕೈಯೊಡ್ಡಿ ಬೇಡುವೆ ಸ್ವರ್ಣ । ಗುಡ್ಡೆಯ ಮೇಲಿರುವಾ । ಮಹಾನುಭಾವಾ ॥ ತಪ್ಪು ॥ ೬ ॥ ದೃಢಭಕ್ತಿಯನು ಕೊಟ್ಟು ಸಲಹಬೇಕಲ್ಲದೆ । ಕೆಡಕು ಮಾಡುವರೇನೋ ಜಡಜನಾಭಾ ॥ ಕಡಲಶಯನ ಲಕ್ಷ್ಮೀನಾರಾಯಣ ನ। ಮ್ಮೊಡೆಯ ಶ್ರೀ ತಿರುಪತೀಶಾ। ರವಿಕೋಟಿಭಾಸಾ ॥ ॥ ತಪ್ಪು ॥ ೭ ॥ ಶ್ರೀಃ ॥

॥ ೧೩೯ ॥ ರಾಗ, ಭೈರವಿ [ಧಾಟಿ:- ಪಾಹಿ ಹರೇ ಸುಗುಣಸಾಂದ್ರ] ರೂಪಕತಾಳ

ಬಂದೆ ಭವತ್ಪದಯುಗಾರವಿಂದಕೇ । ಮಿಳಿಂದನಾಗೀ ॥ ಪಲ್ಲ ॥ ವಂದ ನೀಯರೆ । ಯತಿಕುಲಾಬ್ಧಿಚಂದ್ರರೇ । ಸುಕೃತೀಂದ್ರರೇ ॥ ಅ.ಪ. ॥ ಪರಮ ಪಾವನ ಭುವನೇಂದ್ರರ। ಕರಸಂಜಾತ ವರದೇಂದ್ರರ। ಕರಸರೋರುಹಭವರೇ ಮಹಾ। ಕರುಣಾಂತಃಕರಣಧೀರರೇ ॥ ಬಂದೆ ॥ ೧ ॥ ಸುಮತೀಂದ್ರಾದ್ಯತಿ ಇಂದ್ರರ । ವಿಮಲ ಹೃದಯಕಮಲ ಭಾಸ್ಕರ । ಅಮಮ ನಿಮ್ಮ ಕಾಂಬ ಯೋಗ । ಅಮಿತ ಸುಕೃತ ಭೋಗಪೂಗ ॥ ಬಂದೆ ॥ ೨ ॥ ಪೂರ್ಣಪ್ರಜ್ಞಾ ಚಾರ್ಯವರ್ಯ । ಸನ್ನುತ ಗುಣಧೈರ್ಯಧೂರ್ಯ । ಧನ್ಯನಾದೆನಿನ್ನ ನಾನು। ಸನ್ನಿಧಾನವನ್ನು ಕಂಡೆನು ॥ ಬಂದೆ ॥ ೩ ॥ ಶ್ರೀಶಲಕ್ಷ್ಮೀನಾರಾಯಣ । ವ್ಯಾಸ ರಘುಪತಿಯ ಚರಣೋ । ಪಾಸಕರೆ ಪಾವನರೆ । ಕಾಶಿಮಠಾಧೀಶ್ವ ರರೆ ॥ ಬಂದೆ ॥ ೪ ॥ ಶ್ರೀಃ ॥

॥ ೧೪೦ ॥ ರಾಗ, ಕಲ್ಯಾಣಿ [ಧಾಟಿ:- ಏನನುಸುರುವೆನು । ಸದ್ಗುರು] ಅಷ್ಟತಾಳ

ಜನನೀ ರುದ್ರಾಣೀ । ರಕ್ಷಿಸು ಎನ್ನ । ಜಗದೀಶನ ರಾಣೀ ॥ ವನಜ ಭವ ಸುರಮುನಿಕುಲಾರ್ಚಿತೆ। ಕನಕವರ್ಣ ಶರೀರೆ ಕಮಲಾ । ನನೆ ಕರುಣ

ಸಾಗರೆ ನಮಜ್ಜನ। ಮನಮುದಾಕರೆ ಮಾನಿತೋದ್ಧರೆ ॥ ಪಲ್ಲ ॥ ಆದಿ ಕೃತಾಯುಗದೀ। ಪ್ರತಿಷ್ಠಿತೆ। ಯಾದೆ ಧರಾತಳದೀ ॥ ಆದಿತೇಯರ ಬಾಧಿಸುವ ದಿತಿ। ಜಾಧಮರ ಛೇದಿಸಿದೆ ಸಜ್ಜನ। ರಾದವರ ರಕ್ಷಿಸಿದೆ ತ್ರೈಜಗ। ದಾದಿಮಾಯೆ ವಿನೋದಪೂರಿಣಿ ॥ ಜನನೀ ॥ ೧ ॥ ಸಿಂಧೂರಸಮಯಾನೇ। ಸಾರಸ ಗುಣ। ವೃಂದೆ ಕೋಕಿಲಗಾನೇ ॥ ಸುಂದರಾಂಗಿ ಮೃಗೇಂದ್ರ ವಾಹಿನಿ। ಚಂದ್ರಚೂಡ ಮನೋಜ್ಞೆ ಸತತಾ। ನಂದ ಪೂರ್ಣ ಮುನೀಂದ್ರ ನುತೆ ಸುಮ। ಗಂಧಿ ಗೌರಿಶ್ರೀವಭವಾನೀ ॥ ಜನನೀ ॥ ೨ ॥ ಲಂಬೋದರ ಮಾತೆ। ಲಲಿತೆ ಜಗ। ದಂಬಿಕೆ ಗಿರಿಜಾತೇ ॥ ಕಂಬುಕಂಠಿ ಕದಂಬಿನೀನಿಕು। ರುಂಬಜಿತೆ ಧಮ್ಮಿಲ್ಲೆ ತವ ಪಾ। ದಾಂಬುಜವ ನಾ ನಂಬಿದೆನು ಎನ। ಗಿಂಬು ಪಾಲಿಸೆ ಶುಂಭಮರ್ದಿನಿ ॥ ಜನನೀ ॥ ೩ ॥ ಖಂಡಪರಶು ಪ್ರೀತೇ। ನಿಖಿಳ ಬ್ರ। ಹ್ಮಾಂಡೋದರಭರಿತೇ ॥ ಚಂಡಮುಂಡ ವೇತಾಂಡಧರನೋ। ದ್ದಂಡ ಸಿಂಹೆಯೆ ಖಂಡಲಾರ್ಚಿತೆ। ಪಾಂಡುತನುಜ ಕೋದಂಡವಿತರಣೆ। ಚಂಡಿಕೇ ಕರದಂಡಲೋಚನಿ ॥ ಜನನೀ ॥ ೪ ॥ ಘನ ವೇಣುಪುರವಾಸೆ। ಸರ್ವಾರ್ಥದಾ। ಯಿನಿ ತ್ರೈಜಗದೀಶೇ ॥ ಸನಕನುತ ಶ್ರೀಲಕ್ಷ್ಮೀನಾರಾ। ಯಣ ಭಗಿನಿ ಶ್ರೀಮಹಿಷಮರ್ದಿನಿ। ಮಸುಮಥಾಮಿತರೂಪೆ ಕಾತ್ಯಾ। ಯಿನಿ ನಿರಾಮಯ ಮಂಜುಭಾಷಿಣಿ ॥ ಜನನೀ ॥ ೫ ॥ ಶ್ರೀ ॥

॥ ೧೪೧ ॥ ರಾಗ, ಮಾರವಿ [ಧಾಟಿ:- ಸಾಕು ಸಾಕು ನರಹರಿಯೆ] ಅಷ್ಟತಾಳ

ಬಾರಮ್ಮ ಸರಸ್ವತಿ। ಬಾ ದ್ರುಹಿಣಯುವತಿ। ಬಾ ನಿರ್ಮಲಮತಿ। ತೋರಿ ಭಾರತಿ ॥ ಪಲ್ಲ ॥ ಅಜನ ಪಟ್ಟದ ರಾಣಿ। ಭುಜಗ ಸದೃಶವೇಣಿ। ಭಜಕರ ಚಿಂತಾಮಣೀ। ಕೀರವಾಣೀ ॥ ಬಾರಮ್ಮ ॥ ೧ ॥ ವೇದಾಂತರಂಗಿಣಿ। ನಾದಸ್ವರೂಪಿಣಿ। ಪ್ರಾದುರ್ಭವಳಾಗು। ಸಾಧ್ವಿಕಲ್ಯಾಣೀ ॥ ॥ ಬಾರಮ್ಮ ॥ ೨ ॥ ಅಕ್ಷಯ ಸುಖಭಾಷೆ। ಆಶ್ರಿತಜನಪೋಷೆ। ಲಕ್ಷ್ಮೀನಾರಾಯಣನ ಸೊಸೆ। ಸುವಿಲಾಸೇ ॥ ಬಾರಮ್ಮ ॥ ೩ ॥ ಶ್ರೀ ॥

॥ ೧೪೨ ॥ ರಾಗ, ಕಲ್ಯಾಣಿ [ಧಾಟಿ:- ಜನನೀ ರುದ್ರಾಣಿ। ರಕ್ಷಿಸು] ಅಷ್ಟತಾಳ

ಜಯತು ಜಯ ನೃಹರಿ। ಬ್ರಹ್ಮಾದಿ ನಿರ್ಜರ। ಜಯತು ಜಾತ ಕೈವಾರೀ॥ ॥ಪಲ್ಲ॥ ಜಯ ನಮೋ ಜಗದಾದಿ ಮಾಯಾ। ಶ್ರಯ ಚರಿತ್ರ ಪವಿತ್ರ ವಿಗತಾ। ಮಯ ಸದಾನಂದೈಕನಿಧಿ ಚಿ। ನ್ಮಯ ದಯಾರ್ಣವ ಭಯನಿವಾರಣ ॥ ॥ ಅನುಪಲ್ಲ ॥ ಸುಕುಮಾರ ಪ್ರಹಲ್ಲಾದನ। ಬಾಧಿಸೆ ಭಯಾ। ನಕರೂಪ

ತಾಳ್ದಾಕ್ಷಣಾ ॥ ಸಕಲ ಲೋಕಾಲೋಕ ಭೀಷಣ । ಪ್ರಕಟ ನಖ ಮುಖ ಕ್ರೋಧವೈಷಿನಿ । ಪ್ರಕರ ಜ್ವಾಲಾಮಾಲ ಬದ್ಧ । ಭ್ರುಕುಟ ಲಾಲಿತ ಭಕತ ವತ್ಸಲ ॥ ಜಯತು ॥ ೧ ॥ ಪಾರಮೇಷ್ಟಿರುದ್ರರೇ । ಮುಖ್ಯಸ್ಥ ವೃಂ। ದಾರಕ ರಿಹರುಮರೇ ॥ ವೀರಭದ್ರ ಸುಭದ್ರ ನಂದಿಪ್ರ। ವೀರ ಭೈರವ ಭೃಂಗಿ ಮುಖ್ಯ ರು । ಶ್ರೀರಮಣ ಕುರುಕರುಣ ಪಾರಾ । ವಾರ ಸಮ ಗಂಭೀರನೆಂಬರು ॥ ॥ ಜಯತು ॥ ೨ ॥ ಶಾಂತವಾಗದು ಕ್ರೋಧ । ಮಾಡಿದುದಾ । ನಂತ ಸಂ ಖ್ಯಾಪರಾಧ ॥ ಎಂತು ನಿಷ್ಕೃತಿ ಎಂದು ಚಿಂತಾ । ಕ್ರಾಂತರಾಗಿ ಪಿತಾಮಹಾ ದ್ಯರು । ಕಂತುಜನನಿಯು ಬೇಡಿಕೊಳ । ಲತ್ಯಂತ ಪರುಷವನಾಂತು ಬಂದಳು॥ ॥ ಜಯತು ॥ ೩ ॥ ಪಟ್ಟದರಸನ ರೂಪ । ಕಾಣುತ ಭಯ । ಪಟ್ಟಳಪೂರ್ವ ಕೋಪ ॥ ಶ್ರೀಷ್ಠಭಕ್ತಶಿಖಾಮಣಿಯು ಮುಂ । ದಿಟ್ಟೆರಗಿ ಸಂಸ್ತುತಿಸೆ ದನುಜ ಘ। ರಟ್ಟ ಹೃದಯನಿವಿಷ್ಟ ಕರುಣಾ । ದೃಷ್ಟಿಯಿಂದ ಸಂತುಷ್ಟಿಗೊಳಿಸಿದ ॥ ಜಯತು ॥ ೪ ॥ ಶ್ರೀಲಕ್ಷ್ಮೀನಾರಾಯಣ । ದೈತ್ಯೇಂದ್ರ ಪೃ । ತ್ಸ್ವಾಲ ಅಖಿಲ ಕಾರಣ ॥ ಕಾಲಕಾಲಾಂತಕ ತಮಾಲಸು । ನೀಲನಿಭ ನಿತ್ಯಾತ್ಮ ಸುರಮುನಿ। ಜಾಲಪಾಲ ವಿಶಾಲ ಗುಣನಿಧಿ । ಮೂಲಿಕಾಲಯ ಲೋಲ ನರಹರಿ ॥ ಜಯತು ॥ ೫ ॥ ಶ್ರೀಃ ॥

॥ ೧೪೩ ॥ ರಾಗ, ನಾಯಕಿ [ಧಾಟಿ:- ಕಾಂತೇ ಶ್ರೀಮಂತೇ] ಏಕತಾಳ

ರಕ್ಷಿಸು ಮನದಾ । ಪೇಕ್ಷೆಯ ಸಲಿಸುತ । ಲಕ್ಷ್ಮೀನರಹರಿ । ರಾಕ್ಷಸ ವೈರೀ ॥ ಪಲ್ಲ ॥ ಅಕ್ಷಮ ದುಸ್ಸೀಲ । ದುರ್ವ್ಯಾಪಾರದಿ । ಕುಕ್ಷಿಂಭರನೆಂದು। ಪೇಕ್ಷೆಯ ಮಾಡದೆ ॥ ಅನುಪಲ್ಲ ॥ ಉಭಯ ಶುಚಿತ್ವವು । ಊರ್ಜಿತವೆನೆ ಜಗ । ದ್ವಿಭು ವಿಶ್ವಂಭರ ವಿಬುಧಾರಾಧ್ಯ ॥ ಶುಭಮತಿ ಸಂಸ್ಥಿತಿ । ಯಭಯವ ಪಾಲಿಸೊ । ತ್ರಿಭುವನ ಮೋಹನ ಪ್ರಭು ನೀನನುದಿನ ॥ ರಕ್ಷಿಸು ॥ ೧ ॥ ತಂದೆಯು ಮುನಿಸಿನ । ಕಂದನ ಸಲಹಿದ । ಸಿಂಧುಶಯನ ನಿತ್ಯಾನಂದ ಗುಣಾಬ್ಧೇ ॥ ಹಿಂದಣ ಪಾಪವು । ಮುಂದೆಸಗದ ರೀತಿ । ಮಂದರಾದ್ರಿಧರ ಮಾನುನ ಮುಮುಕರ ॥ ರಕ್ಷಿಸು ॥ ೨ ॥ ಪಾಪಾತ್ಮನುರಲಿ । ಭೂಪಾಲಕನು ನಾ । ಶ್ರೀಪತಿ ಕರುಣದಿ ಕಾಪಾಡುವದು ॥ ಗೋಪೀರಂಜನ । ಗೋದ್ವಿಜ ರಕ್ಷಣ । ಕಾಪುರುಷರ ಭಯ ನೀ ಪರಿಹರಿಸಯ್ಯ ॥ ರಕ್ಷಿಸು ॥ ೩ ॥ ಸರ್ವೇಂ ದ್ರಿಯ ಬಲ । ತುಷ್ಟಿಪುಷ್ಟಿಯನಿತ್ತು। ಸರ್ವಾಂತರ್ಯಾಮಿದೊಳೀರ್ವನೆ ಸಲಹೋ ॥ ದುರ್ವಾರರಾಮಿತ । ದುರ್ವಿಷಯದಿ ಜೇ । ಸರ್ವೇಸು ಪನ್ನಗಪರ್ವತವಾಸನೇ ॥

॥ ರಕ್ಷಿಸು ॥ ೪ ॥ ಶರಣಾಗತನಾಗಿ । ಶರಗೊಡ್ಡಿಬೇಡುವೆ । ವರ ಮೂಲಿಕಪ್ರರ ಧೊರೆ ನರಹರಿಯೇ ॥ ಹರಿ ಲಕ್ಷ್ಮೀನಾರಾಯಣ । ತ್ರಿಜಗದ್ಭರಿತ ಮು । ತ್ತೇರಕ ಸ್ಥಿರಭಕ್ತಿಯನಿತ್ತು ॥ ರಕ್ಷಿಸು ॥ ೫ ॥ ಶ್ರೀ ॥

॥ ೧೪೪ ॥ ರಾಗ, ಶಂಕರಾಭರಣ [ಧಾಟಿ:- ಭಕ್ತಿಭಿಕ್ಷವಿಯುವೇ] ರೂಪಕತಾಳ

ಪಾಹಿ ಪಾರ್ಥಸಾರಥೇ । ಪಕ್ಷಿರಾಟ್ಪರೂಥೇ । ಪಾಹಿ ಪಾರ್ಥಸಾರಥೇ॥ ॥ ಪಲ್ಲ ॥ ದೇಹಿದಾಸ್ಯ ಸದ್ಭಕ್ತಿಂ । ದೇವರಾಜವಿನುತ ಮಾಂ ॥ ಅನುಪಲ್ಲ ॥ ಮಂದರಧಾರೀ ಮುರಾರಿ । ಮುಕುಂದಾತ್ಮರೂಪ ಶೌರಿ । ಸಿಂಧುಶಯನ ಶೇಷಾಚಲ । ಮಂದಿರವರ ಮಧುಮುದಾರಿ ॥ ಸುಂದರ ಲಕ್ಷ್ಮೀನಾರಾಯಣ । ನಿರ್ಗುಣ ನಿರ್ವಿಕಾರಿ । ನಂದನಂದನಾಚ್ಯುತ ಗೋವಿಂದಾನತ ಮನವಿಹಾರಿ॥ ॥ ಪಾಹಿ ॥ ೧ ॥ ಶ್ರೀ ॥

॥ ೧೪೫ ॥ ರಾಗ, ಮೋಹನ [ಧಾಟಿ:- ಹರೇ ವೆಂಕಟಾ । ಶೈಲವಲ್ಲಭಾ] ಏಕತಾಳ

ಹರೇ ಶಂಕರಾ ಪಾರ್ವತೀವರಾ । ಪಾಲಿಸೊ ನೀ ಎನ್ನಾ ॥ ಪಲ್ಲ ॥ ದುರಿತರಾಶಿಗಳ ದೂರಮಾಡು ಗಿರಿವರ ಮಹಾನುಭಾವಾ । ಶಿವಾಶ್ಶಿವ ॥ ॥ ಅನುಪಲ್ಲ ॥ ತ್ರಿಗುಣಾತ್ಮಕ ತ್ರಿದಶಾಲಯ ಪೂಜಿತ । ನಿಗಮಾಗಮ ವಿನುತಾ ॥ ಅಗಜಾಲಿಂಗಿತ ಆಶೀವಿಶಧರ ಮೃಗಧರಾಂಕಜೂಟಾ । ಹೃದ್ಗೂಡಾ ॥ ಹರೇ ॥ ೧ ॥ ಸರ್ವೋತ್ತಮ ಹರಿಯಹುದೆಂಬ ಜ್ಞಾನವ್ರ । ಸರ್ವಕಾಲಕ್ಕೀಯೋ ॥ ದುರ್ಮತಗಳನ್ನೆಲ್ಲ ದೂರಮಾಡೊ ಹರಿ । ಚರ್ಮಾಂಬರ ಧಾರಾ । ಪ್ರವೀರಾ ॥ ಹರೇ ॥ ೨ ॥ ಸಂಜೀವನ ಲಕ್ಷ್ಮೀನಾರಾಯಣಮಣಿ । ರಂಜಿತ ನಿರ್ಲೇಪಾ ॥ ಮಂಜುಳ ಕದರೆಯ ಮಂಜುನಾಥ ಭವ । ಭಂಜನ ಹರಿಪ್ರಿಯಾ । ಜಯಾಜಯ ॥ ಹರೇ ॥ ೩ ॥ ಶ್ರೀ ॥

॥ ೧೪೬ ॥ ಶ್ರೀರಾಗ [ಧಾಟಿ:- ವನಜಾಸನ ವಿನುತಾನತ] ರೂಪಕತಾಳ

ಪರಮೇಶ್ವರಿ ಪಾರ್ವತಿ ಸತಿ । ವರದೆ ಶ್ರೀ ವನದುರ್ಗೆ ॥ ಪಲ್ಲ ॥ ತರುಣಾರುಣ ಶತಕೋಟಿ । ಕಿರಣಾನನೆ ಮಾಂ ಪಾಹಿ ॥ ಅನುಪಲ್ಲ ॥ ಜಗದ್ಭರಿತೆ ಜನಾರ್ದನೆ । ಜಗದೇಕನುತ ಶರಣ್ಯೇ ॥ ನಿಗಮಾಗಮ ಶಿರೋರತುನೆ । ವಿಗೆ ಕೈಯುಗವಂ ಮುಗಿವೆ । ಅಗಜೇ ಶ್ರೀಜಗದಂಬಿಕೆ ॥ ಪರ ॥ ॥ ೧ ॥ ಸದಾನಂದೆ ಸರೋಜಾಕ್ಷಿ । ಸದಾವಳೀವಿನುತೇ ॥ ತ್ರಿದಶಾಲಯೆ ತ್ರಿಗುಣಾತ್ಮಕಿ । ಸದಯೇ ಹೃದಯೇ ಮುದದಿಂ । ಪದ ನಂಬಿದೆ ಪದುಮಾ

ಲಯೆ ॥ ಪರ ॥ ೨ ॥ ವಿರಾಜಿಸುವ ವಿಶ್ವೋತ್ತಮೆ । ವರ ಚಿತ್ರ ಪುರೇಶ್ವರೀ ॥ ಹರಿ ಲಕ್ಷ್ಮೀನಾರಾಯಣ । ಕರುಣಾಭರಣೆ ಶರಣೋದ್ಧರಣೆ । ಶ್ರೀಚರಣಾಂಬುಜೆ ॥ ಪರಮೇಶ್ವರಿ ॥ ೩ ॥ ಶ್ರೀ ॥

॥ ೧೪೭ ॥ ರಾಗ, ತೋಡಿ [ಧಾಟಿ:- ಕರುಣಿಸೆನ್ನ । ಹರಿಯು ರಮಣಿ] ರೂಪಕತಾಳ

ನಂಬಿದೆ ನಿನ್ನ । ನಿಂಬಿದೆ ಎಂದು । ಅಂಬುಜಾಯತಾಂಬಕ । ತ್ರ್ಯಂಬಕ ಸನ್ನುತ ॥ ಖಂಬದಿಂದ ಕಾಣಿಸಿದವ । ಗಂಭೀರ ಗುಣಾಂಭೋನಿಧಿ । ಡಿಂಬೋದ್ಧರ ನರಮೃಗ ವರ ॥ ಪಲ್ಲ ॥ ಭಾನುಕೋಟೀ ಭಾಸ್ಕರ ಪವ । ಮಾನನಯ್ಯ ಪ್ರಾಣದ ಸುತ್ರಾಣ ಸುಗುಣ ॥ ದೀನಜನ ಸಂತಾನಮಾನದ । ಆನಂದ ಗುಣಾನಂತ ವಿತಾನಾಬ್ಧಿ ಶಯನ ಹರಿ ॥ ನಂಬಿದೆ ॥ ೧ ॥ ಎಷ್ಟೊ ಪಾಪಿಕನಿಷ್ಟನೆಂದು । ಬಿಟ್ಟರೇನೊ ಬಿರಿದು ಹಿರಿದು ಬರುವದು ॥ ಸೃಷ್ಟಿಕರ್ತಾ ಅಷ್ಟಹರ್ತಾ । ಮುಷ್ಟಿಕಭಿದ ತುಷ್ಟಿಪ್ರದ ವಿಟ್ಠಲ ಕೈಗೊಟ್ಟುಳುಹೊ ॥ ನಂಬಿದೆ ॥ ೨ ॥ ಚಿತ್ತಸಾಕ್ಷಿ ಚಿನುಮಯಾತ್ಮ । ಸತ್ಯರೂಪ ಸದಯೋದಯ ಸದುಪಾಶ್ರಯ ॥ ದೈತ್ಯಭಂಜನ ಸತ್ಯರಂಜನ । ಕ್ಷೇತ್ರಜ್ಞಪವಿತ್ರ ಕಥಾ । ಸ್ತೋತ್ರಾರ್ಹ ಶ್ರೀವತ್ಸಾಂಕಿತ ॥ ನಂಬಿದೆ ॥ ೩ ॥ ಮೂಲಿಕಾಪುರ ಮೌಳಿರತುನ । ನೀಲೇಂದೀವರಶ್ಯಾಮಲ ಕಲಿಮಲಭೀಷಣ ॥ ಕಾಲಕಾಲ ವಿಶಾಲ ಭುಜಬಲ । ಮೂಲೇಶ ಮುನೀಂದ್ರಾರ್ಚಿತ । ಶ್ರೀಲಕ್ಷ್ಮೀನಾರಾಯಣ ॥ ನಂಬಿದೆ ॥ ೪ ॥

॥ ೧೪೮ ॥ ರಾಗ, ನವರೋಜು [ಧಾಟಿ:- ] ರೂಪಕತಾಳ

ನಮೋನಮಸ್ತೇ । ಉಮಾತನಯ ಕುಮಾರಾಗ್ರಜ । ನಮೋನಮಸ್ತೇ ॥ ॥ ಪಲ್ಲ ॥ ಅಮೋಘ ಶಮ । ದಮಾದಿ ಗುಣ । ಸಮೂಹಗತ । ವಿಮೋಹ ಸದಾ ॥ ನಮೋ ॥ ಅನುಪಲ್ಲ ॥ ಭಾರತವಾ । ಮಹಾಭಾರತವಾ । ಬಾದರಾಯಣನು ಪೇಳಿದಂತೆ ಬರೆದೆ । ಭಾರತವಾ ॥ ಮಾರಜಭ್ರಮೆಯು ದೂರಗೈದ ಸುಖಿ । ಚಾರ ಧೀರ ಸುರ । ವಾರವಿನುತ ಪದ ॥ ನಮೋ ॥ ೧ ॥ ವಂದಿಸುವೇ । ನಾನೊಂದಿಸುವೇ । ವೃಂದಾರಕೇಂದ್ರ ಯೋಗೀಂದ್ರ ತವ ಚರಣಕ್ಕೆ । ವಂದಿಸುವೇ ॥ ವಂದಾರು ಮಂದಾರ ಚಂದನಚರ್ಚಿತ । ಚಂದ್ರಚೂಡಮನೋ । ನಂದ ಮೂರುತಿಯೆ ॥ ನಮೋ ॥ ೨ ॥ ಸುಕ್ಷೇಮದಾ । ಸುಜನ ಸುಕ್ಷೇಮದಾ । ಪಕ್ಷ ಪಾವನ ಮುಮುಕ್ಷುಜನಪ್ರಿಯ । ಸುಕ್ಷೇಮದಾ ॥ ಲಕ್ಷ್ಮೀನಾರಾಯಣನೆ ಲಕ್ಷಿತಾತ್ಮನೆ ವಿ । ಪಕ್ಷ ರಕ್ಷೋಗಣ । ಶೀಕ್ಷ ಸೂಕ್ಷ್ಮಮತೆ ॥ ನಮೋ ॥ ೩ ॥ ಶ್ರೀ ॥

॥ ೧೪೯ ॥ ರಾಗ, ನವರೋಜು [ಧಾಟಿ:- ಧವವ ಘಳಿಸಬೇಕಿಂಥಾದಾ।] ಏಕತಾಳ

ಪ್ರಾಣಾಂತರ್ಗತ ಪ್ರಾಣಾ। ಅಣು। ರೇಣು ಚರಾಚರ ಪೂರ್ಣಾ॥ ಪಲ್ಲ ॥ ಕಾಣೆನು ನಿನ್ನ ಸಮಾನ ಮಾನದ ಪು। ರಾಣಪುರುಷ ಸುತ್ರಾಣ ವರೇಣ್ಯಾ॥ ॥ ಅನುಪಲ್ಲ ॥ ಪಾಪಿಯು ನಾನೀ ಪಾಪಹ ಪಾವನ । ರೂಪು ದಯಾಪರ ಗೋಪಾಲಾ ॥ ಕಾಪಾಡೆನ್ನ ಸಮೀಪಕನಾಗಿ ದ।ಯಾಪತಿ ಗೋಪತಿ ಶ್ರೀಪತಿ ನೀ ಗತಿ ॥ ಪ್ರಾಣಾಂ ॥ ೧ ॥ ಪಂಕಜನಾಭ ಶ್ರೀವೆಂಕಟರಮಣನೆ । ಕಿಂಕರ ಹೃದ್ಮುದಪ್ರೇರಕನೇ ॥ ಶಂಕರಪ್ರಿಯ ವಳಲಂಕಾಧಿಪ ಗುರು । ಶಂಖಚಕ್ರ ಗದಪದ್ಮಾಬ್ಜಹಸ್ತನೇ ॥ ಪ್ರಾಣಾಂ ॥ ೨ ॥ ಚಟುಲ ನೇತ್ರಾವತಿತಟ ನಿಕಟ ಪ್ರಕಟ । ಭಟಪುರ ವರ ವೇಂಕಟಧಾಮಾ ॥ ವಟುವಾಮನ ಲಕ್ಷ್ಮೀನಾರಾಯಣ । ಪಟುವೀರ್ಯ ತಮೋಪಟಲ ನಿವಾರಣ ॥ ಪ್ರಾಣಾಂತರ್ಗತ ॥ ೩ ॥

॥ ೧೫೦ ॥ ರಾಗ, ಬೇಹಾಗ [ಧಾಟಿ:- ಝಾಲಿ ಜ್ಯಾಚೀ ಉಪವರ] ಏಕತಾಳ

ಮನವೆ ಶ್ರೀನಾರಾಯಣನನು ಸ್ಮರಿಸದೆ । ಮಾಯಾಪಾಶಕೆ ಸಿಲುಕುವರೇ ॥ ಪಲ್ಲ ॥ ವನಜನಾಭನ ಪದ ವನರುಹಯುಗ್ಮವ । ಅನುದಿನ ನೆನೆಯದೆ ಝುಣುಗುವರೇ ॥ ವನಿತಾಲಂಪಟನಾಗುತ ಸಂತತ । ಮನಸಿಜಯಂತ್ರಕೆ ಮನಮರುಗುವರೇ ॥ ಅನುಪಲ್ಲ ॥ ತುಂಡುಸೂಳೆಯರ ದುಂಡುಕುಚವ ಪಿಡಿದು । ಗಂಡಸುತನವನು ಕೆಡಿಸುವರೇ ॥ ದಂಡಧರನ ಬಾಧೆ । ಎಂಡಲಿಯುನು ಪಡ । ಕೊಂಡು ವೇದನೆಯನು ತಾಳುವರೇ ॥ ಕಂಡುಕಂಡು ನೀ ಗುಂಡಿಗೆ ಬೀಳ್ವರೆ । ಹೆಂಡಿರ ಸುಖರಸ ಉಂಡರು ಸಾಲದೆ ॥ ಮನವೆ ॥ ೧ ॥ ಬಂಧುಸುಖಕೆ ನೀ ಮುಂದುವರಿಯುತಲಿ । ಮುಂದ ಅಸಮದುಃಖ ತಾಳುವರೇ ॥ ಬಂದುದೆನ್ನ ಕಣ್ಣ ಮುಂದೆಯನುಭವಿಪೆ । ಎಂದಿಗೆನ್ನಾಜ್ಞೆಯು ಬಂದಪುದೋ ನಿಜ ॥ ಮನವೆ ॥ ೨ ॥ ಇಷ್ಟುದಿನದಿ ನೀ ಭ್ರಷ್ಟೆಯರಲಿ ಮೋಹ । ಪಟ್ಟ ಭಾಗ್ಯವನೆಲ್ಲ ತೋರೆಲೊ ನೀನೂ ॥ ಕಷ್ಟ ಮಾನಧನ ನಷ್ಟವಲ್ಲದೆ ಎಳ್ಳಿ। ನಿಷ್ಟು ಸುಖವನು ಕಾಣೆನಿನ್ನು ॥ ಇಷ್ಟಾರ್ಥಗಳೆಲ್ಲ ದೊರಕುವದೈಪರ । ಮೇಷ್ಟಿಪಿತನ ಮನಮುಟ್ಟ ನೀ ಭಜಿಸೆಲೊ ॥ ಮನವೆ ॥ ೩ ॥ ವಿಷಯ ಪಳಂಚಿತನಾಗುತ ಸಂತತ । ಪಂಚಫಕೀರನು ಆಗುವರೇ ॥ ಮುಂಚೆ ಮಾಡಿದ ಕರ್ಮ ಸಾಲದೆಂದೆನುತಲಿ । ಸಂಚಿತ ಪಾಪವ ಸಂಗ್ರಹಿಸುವರೇ ॥ ಚಂಚಲಾಕ್ಷಿಯರ ಚಪಲದ ಮಾತನು । ವಂಚನೆ ಎಂಬುದ ತಿಳಿಯದೆ ಇರುವರೇ ॥ ಮನವೆ ॥ ೪ ॥ ಸಾರಿ ಸಾರಿ ಕೈಮುಗಿದು ಬೇಡುವೆನು ನಿ । ಕಾರ

ದುರ್ಬುದ್ಧಿಯ ಬಿಡು ಎಂದು ॥ ಭೂರಿ ತಪ್ಪುಗಳ ಕ್ಷಮಿಸಿ ಕ್ಕಾವ ಲಕ್ಷ್ಮೀ । ನಾರಾಯಣ ನೀನೆ ಗತಿಯೆಂದು ॥ ಪಾರಮಾರ್ಥಿಕ ವಿಚಾರವ ಮಾಡುತ । ಶ್ರೀರಮೇಶನ ಚರಣಾರವಿಂದವ ಸೇರೋ ॥ ಮನವೆ ॥ ೫ ॥ ಶ್ರೀ೬ ॥

॥ ೧೫೧ ॥ ರಾಗ, ಬೃಂದಾವನ [ಧಾಟಿ:- ನುತಿಸಲಳವೆ ಕೀರ್ತಿಯ। ಭುವ] ತ್ರಿವುಡೆತಾಳ

ಕಂಡೂ ಕೃತಾರ್ಥನಾದೆ। ಭುವನೇಂದ್ರರಂಘ್ರಿಯ। ಕಂಡೂ ಕೃತಾರ್ಥನಾದೆ ॥ ಪಲ್ಲ ॥ ಕಂಡೂ ಕೃತಾರ್ಥನಾದೆ ಭೂ । ಮಂಡಲದಿ ಪೆಸಗೊಂಡು ಮೆರೆದಿಹ। ಪುಂಡರೀಕದಳಾಕ್ಷ ಸತತಾ। ಖಂಡ ಸುಖ ಮಾರ್ತಾಂಡತೇಜರ ॥ ಅನುಪಲ್ಲ ॥ ವಾರಿರುಹಭವಾಂಡದ। ಭೂಮಧ್ಯ ವಿ। ಸ್ತಾರ ಜಂಬೂದ್ವೀಪದ। ನವಖಂಡದೊಳ್। ಸಾರ ಭರತಖಂಡದ॥ ಹಿಮಗಿರಿಯ ಪಾರ್ಶ್ವದ ॥ ತೋರು ವಿಂಧ್ಯಾಚಲದ ಮಧ್ಯಭಾ। ಗೀರಥಿಯ ಪಶ್ಚಿಮಭೂಭಾಗದ । ತೀರ ಕಾಶೀಮಠ ಸಂಸ್ಥಾನ ವಿ। ಚಾರಶಾಸ್ತ್ರ ವಿಶಾರದರ ಪದ ॥ ಕಂಡೂ ॥ ೧ ॥ ವರ ರಾಜೇಂದ್ರಯತೀಂದ್ರರ । ಕರಕಮಲಸಂಜಾ। ತರು ಗುರು ಸೂರೇಂದ್ರರ। ಕರಪದ್ಮಮೂರ್ಧ್ವದಿ। ಧರಿಸೀರ್ದ ವಿಬುಧೇಂದ್ರರ ॥ ಕರಕಮಲಜಾತರ ॥ ಪರಮ ಸುಮತೇಂದ್ರರ ಸರೋರುಹ। ಕರಸಂಜಾತ ಮಹಾನುಭಾವರ। ಕರುಣನಿಧಿ ಕಮನೀಯ ಸದ್ಗುಣ। ಭರಿತ ಶ್ರೀಭುವನೇಂದ್ರರಂಘ್ರಿಯ ॥ ಕಂಡೂ ॥ ೨ ॥ ಸುಂದರಮುಖಶೋಭೆಯ। ಪೂರ್ಣಿಮ ಶುಭ । ಚಂದ್ರನನಿಭ ಕಾಂತಿಯ । ಶೋಭಿಪ ನವ। ಕುಂದರದನ ಪಂಕ್ತಿಯ ॥ ತಿಲಕದ ಛಾಯಾ ॥ ಮಂದಹಾಸಾನಂದ ಪುರಜನ। ವೃಂದಪೂಜಿತ ಪಾದಪದ್ಮ । ದ್ವಂದ ಸತತಾನಂದ ಸದ್ಗುಣ। ಸಾಂಪ್ರ ಶ್ರೀಭುವನೇಂದ್ರರಂಘ್ರಿಯ ॥ ಕಂಡೂ॥ ೩ ॥ ಶೃಂಗಾರರಸತೇಜರ। ಯಮನಿಯಮಾದ್ಯ। ಷ್ಟಾಂಗ ಯೋಗ ಸರ್ವಜ್ಞರ । ಪಾಪಾತ್ಮರ। ಕಂಗಳಿಗಗೋಚರ॥ ಸತ್ಯಾವತಾರ॥ ಮಂಗಳಾತ್ಮಕ ಸಂಗ ಸುಮನಸ । ರಂಗ ಸಾಧ್ಯವೇದಾಂಗ ಕರುಣಾ । ಪಾಂಗ ವಿಭುದೊಳಿತ್ತುಂಗವಂಗಜ । ಭಂಗ ಶ್ರೀಯತಿಪುಂಗವರ ಪದ ॥ ಕಂಡೂ ॥ ೪ ॥ ಎಷ್ಟೆಂದು ನಾ ಪೇಳಲೀ । ಸದ್ಗುರುವರ। ರಿಷ್ಟಕ್ಕೆ ತೋಷ ತಾಳಲೀ । ದಾರಿದ್ರದ । ಕಷ್ಟವೆಲ್ಲಪಹಂಸಲಿ॥ ದಯವಿರಲಿ ಯನ್ನಲಿ॥ ಶ್ರೇಷ್ಠ ಗೌಡಸಾರಸ್ವತಾಸಾ। ಸಷ್ಟಿ ಕೊಂಕಣ ದೇಶ ವಿಪ್ರವಿ । ಶಿಷ್ಟಪಡೆತನ ಪಟ್ಟವಾಳುವ । ಶ್ರೇಷ್ಠ ಯತಿವರರಂಘ್ರಿ ಕಮಲವ ॥ ಕಂಡೂ ॥ ೫ ॥ ಆಶೆಯೊಂದುಂಟೆನಗೆ । ಕಾವ್ಯವನೋದ ।

ಭ್ಯಾಸಗೈಯ್ಯುವದು ಮಿಗೆ । ಸನ್ನಿಧಾನದಿ । ಪೋಷಿಸಿ ಎನ್ನ ಹೀಗೆ ॥ ರಕ್ಷಿಸಲು ಕಡೆಗೆ ॥ ಯೇಸು ಧನ್ಯನು ನಾನು ಕರುಣಾ । ರಾಶಿ ಸಜ್ಜನಪೋಷಿ ನಿಗಮವಿಲಾಸರಂಘ್ರಿಯ ದಾಸದಾಸರ । ದಾಸ ನಾನು ದಯಾಶರಧಿಯರ ॥ ॥ ಕಂಡೂ ॥ ೬ ॥ ಸತತ ಸದ್ವ್ಯತಿಧರ್ಮವಾ । ಪ್ರತಿಪಾಲಿತ । ಕ್ಷಿತಿಗತಿ ಪ್ರತಿವಾಸವಾ । ಸಂತೆಸವುತಾ । ಮಿತ ಭಾಗ್ಯಸಂಪದವಾ ॥ ವಿಖ್ಯಾತವಾ ॥ ರತಿಪತಿಯ ಪಿತ ಕೃತುಪಾಲಿತ ಸು । ನೃತಭಾಷಿತ ಲಕ್ಷ್ಮೀನಾರಾಯಣ । ಸತತ ವೇದವ್ಯಾಸ ಶ್ರೀರಘು । ಪತಿ ಚರಣ ಪೂಜಿತರ ಪದವನು ॥ ಕಂಡೂ ॥ ೭ ॥

॥ ೧೫೨ ॥ ರಾಗ, ಕಾಂಬೋಧಿ [ಧಾಟಿ:- ಭಕ್ತಸುರ ತರುಲತೆ] ಝಂಪೆತಾಳ

ನಮೋ, ಯತಿಕುಲ ಶಿಖಾಮಣಿಯೆ ಸುಗುಣನಿಧಿಯೆ । ಮತಿಮತಾಂವರ ಮಾನಿನೇ ॥ ನಮೋ ॥ ಪಲ್ಲ ॥ ಭುವನೇಂದ್ರತೀರ್ಥ ಯತಿಪ್ರವರ ಕರಸಂಜಾತ । ಸುವಿವೇಕಿ ವರದೇಂದ್ರ ಕರಸಂಭವಾಯ ॥ ಅವಿರಳಾನಂದ ವೈಷ್ಣವ ನಿವಹಗೀರ್ವಾಣ। ತರವೆ ಸುಕೃತೇಂದ್ರ ಸದ್ಗುರವೇ ನಮೋಸ್ತು ॥ ನಮೋ ॥ ॥ ೧ ॥ ಕಾಶೀಮಠಾಧಿಪತಯೇಸುಸನ್ಯಾಸಿ । ನೇ ಸತ್ವಗುಣ ಭೂಷಾಯತೇ ॥ ವ್ಯಾಸರಘುಪತಿಚರಣ ದಾಸವತ್ಪೂಜಕ ವಿಶೇಷ ಭಕ್ತಿಜ್ಞಾನ ಶಾಲಿನೇತುಭ್ಯಂ॥ ॥ ನಮೋ ॥ ೨ ॥ ಆಜಾನಬಾಹವೇ ಗೌಡಸಾರಸ್ವತ ಮ । ಹಾಜನ ಸಮಾಜ ಮಂಡಲವಾಸಿನೇ ॥ ರಾಜೀವನಯನಾಯ: ನಮಿತಜನನಿಕರ ಸುರ । ಭೂಜಾಯ ಭೂರಿ ರವಿತೇಜಸ್ವಿನೇ ॥ ನಮೋ ॥ ೩ ॥ ತುಷ್ಟಾಯ ಭಾಗವತನಿಷ್ಠಾಯ ದ್ವಿಜಕುಲವ । ರಿಷ್ಠಾಯ ಷಡ್ವರ್ಗ ಜಿಷ್ಣವೇ ತುಭ್ಯಂ ॥ ದುಷ್ಟಜನದೂರಾಯ ಧೀರಾಯ ಭಕ್ತದ । ತ್ತೇಷ್ಟಾಯ ಮಹತೇ ಸಹಿಷ್ಣವೇ ಮಹತೇ ॥ ನಮೋ ॥ ೪ ॥ ಬ್ರಹ್ಮಚರ್ಯಾದಿ ವ್ರತ ಧರ್ಮಾತ್ಮನೇ ವಿಹಿತ । ಕರ್ಮಹೇ ಸುಕೃತೇಂದ್ರ ಶರ್ಮಣೇತುಭ್ಯಂ ॥ ಬ್ರಹ್ಮಪಿತ ಲಕ್ಷ್ಮೀನಾರಾಯಣಾಂಘ್ರಿಧೃತಿ ಸು । ನಿರ್ಮಲಾಂತಃಕರಣ ಕರುಣನೀರಧಯೇ ॥ ನಮೋ ॥ ॥ ೫ ॥ ಶ್ರೀಃ ॥

॥ ೧೫೩ ॥ ರಾಗ, ಹಂಸಧ್ವನಿ [ಧಾಟಿ:- ಮನವು ಬಾರದು ಸುಂದರಿ] ಆದಿತಾಳ

ಮನವು ನಿನ್ನಲಿ ನಿಲ್ಲಲಿ । ಅನು-ದಿನ- ನಿನ್ನ ನೆನದು । ಮನವು ನಿನ್ನಲಿ ನಿಲ್ಲಲಿ ॥ ಪಲ್ಲ ॥ ದುಃಖಸುಖ ಲೆಕ್ಕಿಸದೆ । ಮುಖ್ಯ ಫಲ ಮುಂದರಿಸೆ । ಮಿಕ್ಕುತ್ತ-ಸೊಕ್ಕಿ ಮೋ-ಹಕ್ಕೆ ಸಿಕ್ಕದೆ ॥ ಮನ ॥ ೧ ॥ ನಿನ್ನ ಗುಣ ವರ್ನಿಸುತ । ನಿನ್ನವರ ಮನ್ನಿಸುತ । ನಿನ್ನ ಪಾ-ವನ್ನ ಲಾ-ವಣ್ಯ ಧ್ಯಾನಿಸೆ ॥

॥ ಮನ ॥ ೨ ॥ ಸಂತೋಷ ನಿರಂತರವು । ಸಂತಜನ ಸಹವಾಸವು ॥ ಶಾಂತ ತ್ವ-ವಾಂತು ಮ-ಹಾಂತ ಧೈರ್ಯದಿ ॥ ಮನ ॥ ೩ ॥ ಭಕ್ತಿ ಸುವಿರಕ್ತಿ ಜ್ಞಾನ । ಮುಕ್ತಿಗೆ ಮುಖ್ಯ ಕಾರಣ ॥ ಚಿತ್ತದೊ-ಳಿತ್ತೆಲ್ಲ -ಹೊತ್ತು ಹೊತ್ತಿಗೆ ॥ ಮನ ॥ ೪ ॥ ಪ್ರಿಯ ಶ್ರೀಲಕ್ಷ್ಮಿಮಿ ನಾ । ರಾಯಣ ಪರಾಯಣನ ॥ ಧೈರ್ಯ ದಂ-ತರ್ಯ ಗಂ-ಭೀರ್ಯ ಭಾವದಿ ॥ ಮನ ॥ ೫ ॥ ಶ್ರೀಃ ॥

॥ ೧೫೪ ॥ ರಾಗ, ಮೋಹನ [ಧಾಟಿ:—ಚಿಕ್ಕವನೇ ಇವನು] ತ್ರಿಪುಟತಾಳ

ಎಂದಿಗೆ ದೊರಕುವನು । ಗೋವಿಂದನು । ಎಂದಿಗೆ ದೊರಕುವನು ॥ ॥ ಪಲ್ಲ ॥ ಎಂದಿಗೆ ನೊರಕುವ । ಸುಂದರ ಪುರುಷನು । ವಂದು ಗಳಿಗೆ ಯುಗ । ಒಂದಾಗಿ ಕಳೆದೆನು ॥ ಎಂ ॥ ಅನುಪಲ್ಲ ॥ ಸರಿ ರಾತ್ರಿ ವೇಳ್ಯದಲಿ । ಮೆಲ್ಲನೆ ಬಂದು । ಸರಸವನಾಡುತಲಿ ॥ ಪರಿ ಪರಿ ವಿಧದಲಿ ಸ್ಮರನ ಕಲೆಯ ತೋರಿ । ವಿರಹ ಗೊಳಿಸಿ ನಾಳೆ ಬರುವೆನೆನ್ನುತ ಪೋದ ॥ ಎಂದಿಗೆ ॥ ೧ ॥ ಧಿಮ್ಮಿಸು ತಿದೆ ಮನಸು । ಸುರತಸುಖವ । ನಿರ್ಮಲತನು ಕನಸು ॥ ನಿರ್ಮಲಾಂಗನ ಬಿಟ್ಟು ನಿಮಿಷ ಸೈರಿಸಲಾರೆ । ಒಮ್ಮೆ ಕಾಣಿಸಿದರೆ ಜನ್ಮ ಸಫಲ ಕಾಣೇ ॥ ॥ ಎಂದಿಗೆ ॥ ೨ ॥ ಭಾರಿಭಾರಿಗೆ ಆತನ । ನೆನಪಿನಿಂದ । ಸೂರೆಗೊಂಬುದು ಮನ್ಮನ ॥ ಕೇರಿಗೆ ಬಂದರೆ ಬಾರದಿರನು ಮನೆಗೆ । ಸೂರೆಗೊಂಬೆನು ಲಕ್ಷ್ಮೀ ನಾರಾಯಣನ ಮನ ॥ ಎಂದಿಗೆ ॥ ೩ ॥ ಪಂಕಜನಿಭ ಚರಣ । ಕೌಸ್ತುಭ ರತ್ನಾ । ಲಂಕೃತ ಶುಭಗ್ರೀವನ ॥ ಶಂಕರಾರ್ಚಿತನು ಮೀನಾಂಕಜನಕ ನಿಷ್ಕ । ಳಂಕ ಮಹಿಮನು ಶ್ರೀ ವೆಂಕಟರಮಣನು ॥ ಎಂದಿಗೆ ॥ ೪ ॥ ಅಂಗಜಕೋಟಿ ರೂಪ । ಪರಮ ಸದಯಾ । ಪಾಂಗ ನಿರತ ನಿರ್ಲೇಪ ॥ ಮಂಗಲಚರಿತ ಭುಜಂಗಶಯನ ಸರ । ಸಿಂಗ ವರದ ಮಾತಂಗ ಶ್ರೀರಂಗನು ॥ ಎಂದಿಗೆ ॥ ॥ ೫ ॥ ಚಂದಿರ ಶತ ವದನ । ಶೋಭಿಪ ನವ । ಕುಂದ ಕುಟ್ಮಲ ರದನ ॥ ಸಿಂಧುಶಯನ ಮುಚುಕುಂದಾಪ್ತ ಸಚ್ಚಿದಾ । ನಂದ ಗೋವಿಂದ ಮುಕುಂದ ನಂದನ ಕಂದ ॥ ಎಂದಿಗೆ ॥ ೬ ॥ ಅಕ್ಷರಾರ್ಚಿತ ದೇವನು । ಶರಣ ಜನ । ಪಕ್ಷ ಪರಾತ್ಪರನು ॥ ಪಕ್ಷೀಂದ್ರತುರಗ ಪದ್ಮಾಕ್ಷ ತ್ರಿಲೋಕ ಪಿ । ಲಕ್ಷಣ ಮೂರ್ತಿ ಶ್ರೀ ಲಕ್ಷ್ಮೀನಾರಾಯಣ ॥ ಎಂದಿಗೆ ॥ ೭ ॥ ಶ್ರೀಃ ॥

॥ ೧೫೫ ॥ ರಾಗ, [ಧಾಟಿ:- ಶಾರದಾಂಬೆ ಸುಂದರತರ] ರೂಪಕತಾಳ

ನೀಲಮೇಘಶ್ಯಾಮ ರಾಮ । ನಿಖಿಳಲೋಕ ಕ್ಷೇಮಧಾಮ । ಪಾಲಿ ಸುವುದು ಹನುಮ ಪ್ರೇಮ । ಪಾವನಾತ್ಮ ಸೀತಾರಾಮ ॥ ಪಲ್ಲ ॥ ಸತ್ಯ

ಸಂಕಲ್ಪಾನುಸಾರ । ಚಿತ್ತ ಚಿನ್ಮಯಗಾತ್ರ ಶ್ರೀಧರ ॥ ನಿತ್ಯಮುಕ್ತ ಪುಣ್ಯ
ನಾಮ । ಪ್ರತ್ಯಗಾತ್ಮ ಪೂರ್ಣಕಾಮ ॥ ೧ ॥ ಕಮಲನಾಭ ರವಿಶತಾಭ ।
ಸುಮನಸಾರ್ಚಿತಾಂಘ್ರಿ ಶೋಭ ॥ ಅಮಿತ ವಿಕ್ರಮ ಸಮರಭೀಮ । ಶಮಲ
ಶಮನ ಸಾರ್ವಭೌಮ ॥ ೨ ॥ ಶಾರದೇಂದು ಸನ್ನಿಭಾನನ । ಮಾರುತಿ ಹೃದ
ಯೈಕಸದನ ॥ ಧೀರ ಲಕ್ಷ್ಮೀನಾರಾಯಣ । ಸೂರಿಜನೋದ್ಧರಣ ನಿಪುಣ ॥ ೩ ॥

॥ ೧೫೬ ॥ ರಾಗ, ಬೇಹಾಗ [ಧಾಟಿ:- ನಲಿದಾಡಿದಳ್ ನಳಿನಾಂಬಕಿ] ರೂಪಕತಾಳ

ಕರುಣಾಕರ ಪರಮೇಶ್ವರ । ಗುರುತಮ ಕಲ್ಯಾಣಧಾಮ ॥ ಪಲ್ಲ ॥
ಸುರುಚಿರ ಪೀತಾಂಬರಧರ । ನರಕೇಸರಿ ಕರಿವರವರದ ನಮೋ ನಮೋ ॥
॥ ಅನುಪಲ್ಲ ॥ ಮಂದರಧರ ಮಧುಸೂದನ । ವೃಂದಾವನ ಸಂಚರಣ ॥
ಚಂದ್ರಕೋಟಿ ಸದೃಶಾನನ । ವಂದನೀಯ ನಂದಕುಮಾರ ವ್ರಜೇಶ್ವರ ॥
॥ ೧ ॥ ಭುಜಗಶಯನ ಭೂತಭಾವನ । ಭಜಕಜನೋದ್ಧರಣ ನಿಪುಣ ॥
ಕುಜನ ಜನಾರಣ್ಯ ದಹನ । ವೃಜಿನಾರ್ದನ ದ್ವಿಜವರವಾಹನ ಮೋಹನ ॥
॥ ೨ ॥ ಮಾತರಿಶ್ವಸಖ ಲೋಕೈಕ । ನಾಥ ಲಕ್ಷ್ಮೀನಾರಾಯಣ ॥ ವೀತ
ಭಯವಿಧಾತ ರುಕ್ಮಿಣಿ । ಪ್ರೀತ ತ್ರಿಗುಣಾತೀತನೆ ಫಲ್ಗುಣಸೂತನೆ ॥ ೩ ॥

॥ ೧೫೭ ॥ ರಾಗ, ಆನಂದಭೈರವಿ [ಧಾಟಿ:- ಸೀಸೇ [illegible] ನಿರ್ಮಲ] ಅಷ್ಟತಾಳ

ಮಾತೆ ಸರಸ್ವತಿ ಮಂಜುಳ ಮೂರುತಿ । ಚೇತನಾತ್ಮಕಿ ಭಾರತಿ ॥
ಪ್ರೀತಿಯಿಂದೀವುದು ಪೀತಾಂಬರಧರನ । ಸಾತಿಶಯದ ಭಕುತಿ ॥ ಪಲ್ಲ ॥
ಗುರುಹಿರಿಯರ ಕಂಡು ಬಿರುನುಡಿ ನುಡಿಸದೆ । ಕರುಣಿಸೆನಗೆ ಸನ್ಮತಿ ॥
ಪರಮಪಾವನ ಕೃಷ್ಣವರ ಪಾದಾಂಬುಜ ಮಧು । ಕರದಂತಿರಲಿ ಮದ್ಮತಿ ॥
॥ ೧ ॥ ಶ್ರೀಶನ ಮೂರ್ತಿ ತಾರೇಶನಂದದಿ ಹೃದಯಾ । ಕಾಶದೊಳು
ಕಾಣುತಿ ॥ ದೋಷಗಳ ಕಾಮಾದಿ ಕ್ಲೇಶವ ಬಿಡಿಸುತ । ಗೈಸೆಮ್ಮ ಹರಿಯ
ಸ್ತುತಿ ॥ ೨ ॥ ವೈಷ್ಣವ ಶಾಸ್ತ್ರಕೆ ಹುಟ್ಟು ದ್ವೇಷಿಗಳಾಗಿ । ದುಷ್ಟತಮರ ಸಂ
ತತಿ ॥ ಭ್ರಷ್ಟಶಾಸ್ತ್ರವನು ಬೊಬ್ಬಿಟ್ಟು ಪೇಳ್ವರು ಪರ । ಮೇಷ್ಟಿಯ ಪ್ರಾಣ
ಸತಿ ॥ ೩ ॥ ಮನುಜರ ರೂಪದಿ ದನುಜರು ಭೂಮಿಯೊಳ್ । ಜನಿಸಿದ
ರ್ಜಲಜನೇತ್ರಿ ॥ ಅನಘ ಲಕ್ಷ್ಮೀನಾರಾಯಣನ ದಾಸರಿಗೆಲ್ಲ । ಜನನೀಯೆ
ನೀನೆ ಗತಿ ॥ ೪ ॥ ಶ್ರೀ ॥

॥ ೧೫೮ ॥ ರಾಗ, ಆನಂದಭೈರವಿ [ಧಾಟಿ:- ಬಾ ವೆಂಕಟಶೈಲಾಧಿಪ] ಆದಿತಾಳ

ಬಾ ಬಾ ಬಾ ಹರಿಯೆ । ಮೂಲೋಕದ ಧೊರೆಯೆ ॥ ಪಲ್ಲ ॥

ಸರ್ವೋತ್ತಮ ಸರ್ವಾಂತರ್ಯಾಮಿಕ। ಸರ್ವಾಧಾರ ಪ್ರವೀರ ಶೂರವರ ॥ ೧ ॥ ನಿತ್ಯ ಮುಕ್ತ ಪರಿಪೂರ್ಣ ಗುಣಾರ್ಣವ । ಸತ್ಯನಿಯಾಮಕ ಸತ್ಯವಾದರೆ ತ್ವರೆ ॥ ೨ ॥ ರೂಪತ್ರಯ ಭವ ತಾಪಶಮನ ಸ । ದ್ವ್ಯಾಪಕ ಸ್ಥಾಪಕ ಶ್ರೀ ಪುರುಷೋತ್ತಮ ॥ ೩ ॥ ಭಜಕರ ಭಾಗ್ಯ ನಿಧಿಯು ನೀನೆಂಬುದು । ನಿಜ ವಾಗಿರೆ ಶ್ರೀ ರುಜಗಣೇಶ ಪತಿ ॥ ೪ ॥ ಶ್ರೀಲಕ್ಷ್ಮೀನಾರಾಯಣ ನಿರ್ಗುಣ । ಮೂಲೇಶ ಮುಕುಂದ ಮುನೀಂದ್ರ ವಂದಿತ ॥ ೫ ॥ ಶ್ರೀಃ ॥

॥ ೧೫೯ ॥ ರಾಗ, ಆನಂದಭೈರವಿ [ಧಾಟಿ:- ಕರುಣದಿ ಕಾಯೋ ಗೋಪಾಲಾ] ಅಷ್ಟತಾಳ

ನಂಬಿದೆ ನಿನ್ನ ಗಣೇಶಾ । ಜಗ । ದಂಬಿಕಾತನಯ ವಿಶ್ವಂಭರ ದಾಸಾ ॥ ॥ ಪಲ್ಲ ॥ ಲಂಬೋದರ ವಿಘ್ನೇಶ । ಶರ । ಣೆಂಬುದು ಸುರನಿಕುರುಂಬ ಮಹೇಶಾ ॥ ಅನುಪಲ್ಲ ॥ ತರುಣಾದಿತ್ಯ ಪ್ರಕಾಶ । ನಿನ್ನ । ಶರಣಾಗತನಾದೆ ಮೋಹನ್ನವೇಷ ॥ ಸುರುಚಿರ ಮಣಿಗಣ ಭೂಷ । ಜಗ । ದ್ಗುರುವೆ ಗುಹಾಗ್ರಜ ಪೊರೆಯೊ ನಿರ್ದೋಶಾ ॥ ೧ ॥ ಸಂತಜನರ ಮನೋವಾಸ। ಮೋಹ । ಭ್ರಾಂತಿಯಜ್ಞಾನಾಧ್ವಾಂತವಿನಾಶ ॥ ಶಾಂತಹೃದಯ ಸುಗುಣೋಲ್ಲಾಸ । ಏಕ । ದಂತ ದಯಾಸಾಗರ ದೀನಪೋಷಾ ॥ ೨ ॥ ಲಕ್ಷ್ಮೀನಾರಾಯಣನೆ ವ್ಯಾಸ । ಗುರು । ಶಿಕ್ಷಿತ ಸುಜ್ಞಾನ ತೇಜೋವಿಲಾಸ ॥ ಅಕ್ಷರ ಬ್ರಹ್ಮೋಪದೇಶ । ನಿತ್ತು । ರಕ್ಷಿಸು ದನುಜಾರಣ್ಯ ಹುತಾಶಾ ॥ ೩ ॥ ಶ್ರೀಃ ॥

॥ ೧೬೦ ॥ ರಾಗ, ಪುಂನ್ನಾಗವರಾಳಿ [ಧಾಟಿ:- ಚರಿಸುವ ಜಲದಲಿ ಮತ್ಸ್ಯನಿಗೆ] ಆದಿತಾಳ

ಶ್ರೀಗೌರೀಸುಕುಮಾರನಿಗೇ । ಯೋಗಿವರೇಣ್ಯ ಶುಭಾಕರಗೆ ॥ ರಾಗ ಲೋಭರಹಿತಗೆ ರಜತೇಶಗೆ। ಭಾಗೀರಥಿಸುತ ಭವಹರಗೆ ॥ ಮಂಗಲಂ ॥ ೧ ॥ ಪಾಶಾಂಕುಶ ವಿವಿಧಾಯುಧಗೇ । ಪಾಶಧರಾರ್ಚಿತ ಪಾವನಗೆ ॥ ವಾಸರ ಮಣಿ ಶತಭಾಸಗೆ ಈಶಗೆ । ಭಾಸುರ ಕನಕ ವಿಭೂಷಣಗೇ ॥ ಮಂಗಲಂ ॥ ॥ ೨ ॥ ಶೀಲಸುಗುಣಗಣವಾರಿಧಿಗೆ। ನೀಲೇಂದೀವರ ಲೋಚನಗೇ ॥ ಲೋಲ ಲಕ್ಷ್ಮೀನಾರಾಯಣ ರೂಪಗೆ । ಶಾಲಿಪುರೇಶ ಷಡಾನನಗೆ ॥ ಮಂಗಲಂ ॥ ೩ ॥

॥ ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯಕೃತ ಪದಗಳು ಸಂಪೂ...

ಸ್ವಸ್ತಿ! ಪ್ರಜಾಭ್ಯಃ ಪರಿಪಾಲಯಂತಾಂ । ನ್ಯಾಯ್ಯೇನ ಮಾರ್ಗೇಣ ಮಹಿಂ ಮಹೀಶಾಃ ॥ ಗೋಬ್ರಾಹ್ಮಣೇಭ್ಯಃ ಶಿವಮಸ್ತು ನಿತ್ಯಂ । ಲೋಕಾಸ್ಸಮಸ್ತಾಃ ಸುಖಿನೋ ಭವಂತು ॥ ೧ ॥

## ॥ ಪದ್ಯಸುಧಾದಾಯಿನಿ ಪ್ರಥಮಭಾಗ ಸಂಪೂರ್ಣಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಪ್ರಭಾಕರ ಮುದ್ರಾಯಂತ್ರ, ಉಡುಪಿ.

## — ಇಲ್ಲಿ ದೊರೆಯುವ ಪದಗಳ ಪುಸ್ತಕಗಳು —

| | |
|---|---|
| ಪದ್ಯರತ್ನಾಕರ ಭಾಗ 1 ... ... ... | 1—0—0 |
| ಪದ್ಯರತ್ನಾಕರ ಭಾಗ 2 ... ... ... | 1—0—0 |
| ಪದ್ಯರತ್ನಾಕರ ಭಾಗ 3 ... ... ... | 1—0—0 |
| ಪದ್ಯರತ್ನಾಕರ 3 ಭಾಗಗಳೂ ಕೂಡಿರುವ ಮಜಭೂತ ಹಾಫ ಲೆದರ ಬೈಂಡ್ ಗಿಲ್ಟ್‌ಮಾಡಿದ ಪುಸ್ತಕ (ವಾಲ್ಯುಮು) | 3—6—0 |
| ಪದ್ಯಸುಧಾದಾಯಿನಿ (ಭಾಗ 1)... ... ... | 0-12—0 |
| ತ್ರಿಕಾಲ ಭಜನ ಮಾಲಿಕಾ ... ... ... | 0—8—0 |
| ಪುರಂದರದಾಸರ ಕೀರ್ತನೆಗಳು ಭಾಗ 1, 2, 3 ಸಹಾ ಪ್ರತಿ 1ಕ್ಕೆ | 0-10—0 |
| ಪುರಂದರದಾಸರ ಕೀರ್ತನೆ 3 ಭಾಗಗಳೂ ಕೂಡಿರುವ ಉತ್ತಮ ಬ್ಯಾಂಡ್ ಮಾಡಿದ ವಾಲ್ಯುಮ 1ಕ್ಕೆ ... | 2—4—0 |
| ಕನಕದಾಸರ ಕೀರ್ತನೆಗಳು ... ... ... | 0—8—0 |
| ವಾದಿರಾಜರ ಕೀರ್ತನೆಗಳು ... ... ... | 0—8—0 |
| ಜಗನ್ನಾಥದಾಸರ ಕೀರ್ತನೆಗಳು ... ... ... | 0-10—0 |
| ಪುಷ್ಕರದಾಸರ ಕೀರ್ತನೆಗಳು ... ... ... | 0—8—0 |
| ಗೋಪಾಲದಾಸರ ಕೀರ್ತನೆಗಳು ... ... | 0—8—0 |
| ನಾನಾವಿಧ ಪದ್ಯರತ್ನಮಾಲಾ ... ... ... | 0-12—0 |
| ಹರಿಕೀರ್ತನೆಗಳು ... ... ... ... | 0—1—0 |
| ಉದಯರಾಗಗಳು ... ... ... ... | 0—4—0 |

ಇನ್ನೂ ಅನೇಕ ನಮೂನೆ ಯಕ್ಷಗಾನ ಪುಸ್ತಕಗಳು ವಗೈರೆ ದೊರೆಯುತ್ತವೆ. ಕೆಟಲಾಗಿಗೆ ಬರಕೊಳ್ಳಿರಿ.

**ವಿಳಾಸ:— ಮೆನೇಜರ, ಪ್ರಭಾಕರ ಮುದ್ರಾಯಂತ್ರ,**

**ಉಡುಪಿ, ದಕ್ಷಿಣ ಕನ್ನಡ.**